THIS BOOK IS PUBLISHED WITH THE FINANCIAL
ASSISTANCE OF TIRUMALA-TIRUPATI
DEVASTHANAMS UNDER THEIR SCHEME
AID TO PUBLISH RELIGIOUS BOOKS

# ಶ್ರೀ ರಾಮಾಯಣ ನಿತ್ಯ ಚಿಂತನ

(ಕವಿ ಗ. ದಿ. ಮಾಡಗೂಳಕರರ ಮರಾಠಿ ಗೀತ ರಾಮಾಯಣದ
ಭಾವಾನುವಾದ - ಕನ್ನಡ ಗದ್ಯದಲ್ಲಿ)

ಅನುವಾದಕ - ಅನಿಕೇತ

೧೯೯೭

(ಉಪನಯನ - ವಿವಾಹಾದಿ ಸಮಾರಂಭಗಳಲ್ಲಿ ಈ ಗ್ರಂಥವನ್ನು ಉಡುಗೊರೆ ಕೊಡಿರಿ.)

ಕೈವಲ್ಯ ಅಮೃತಬಿಂದು ಪ್ರಕಾಶನ
ಅಂಬೇವಾಡಿ - ದಾಂಡೇಲಿ - ೫೮೧ ೩೨೫

ಪ್ರಕಾಶಕರು - ಆರ್. ವ್ಹಿ. ಜೋಶಿ

**ಕೈವಲ್ಯ ಅಮೃತಬಿಂದು ಪ್ರಕಾಶನ**

ಅಂಬೇವಾಡಿ - ದಾಂಡೇಲಿ ೫೮೧೩೨೫



ಪ್ರಥಮ ಮುದ್ರಣ - ೧೯೯೭

ಪ್ರತಿಗಳು - ೨೦೦೦

ಮುದ್ರಕರು - ಮೆಟಲ್ - ಓ - ಪ್ರಿಂಟ್ಸ್
ಡಿ - ೫೦೨, ಇಂಡಸ್ಟ್ರಿಯಲ್ ಎಸ್ಟೇಟ್
ಗೋಕುಲ್ ರಸ್ತೆ, ಹುಬ್ಬಳ್ಳಿ-೩೦

ಅಕ್ಷರ ಜೋಡಣೆ :
ಪ್ರಿಂಟ್ ನೋಡ್
ಹೋಟೆಲ್ ಗೋವನ ಟಾವರ ಸಂಕೀರ್ಣ
ನೆಹರು ಕ್ರೀಡಾಂಗಣ ರಸ್ತೆ, ಹುಬ್ಬಳ್ಳಿ-೨೦

**ಬೆಲೆ: ರೂ. ೨೫ /-**

**ಮುಖಪುಟ - ವಿವರಣೆ :-**

ಶ್ರೀರಾಮ ತತ್ವವೆಂದರೆ ನೀತಿ ಧರ್ಮಗಳು. ಇವುಗಳನ್ನು ಅಳವಡಿಸಿಕೊಂಡು, ಅನುಸರಿಸಿ, ಕೈಕೊಂಡ ಲೋಕಹಿತ ಕಾರ್ಯಗಳ, ಯಶಸ್ವಿ ನಿರ್ವಹಣೆಗೆ ಶ್ರೀಹನುಮಾನ ತತ್ವವೆಂದರೆ ಸ್ಫೂರ್ತಿ. ಹೀಗೆ "**ಧರ್ಮಕಾರ್ಯಗಳಿಗೆ ಸ್ಫೂರ್ತಿ**" ಎಂಬುದು ಶ್ರೀರಾಮ-ಹನುಮಾನರ ಅಪ್ಪುಗೆಯ ದ್ಯೋತಕ.




# ಅರ್ಪಣೆ

ಶ್ರೀ ರಾಮಾಯಣ ನಿತ್ಯ ಚಿಂತನದೊಂದಿಗೆ
ಲೋಕಹಿತ ಕಾರ್ಯಗಳನ್ನು ಕೈಗೆತ್ತಿಕೊಂಡು,
ಆಂಜನೇಯನಿಂದ ಸ್ಫೂರ್ತಿ–ಶಕ್ತಿಗಳನ್ನು
ಪಡೆದುಕೊಂಡು, ಅವುಗಳನ್ನು ಯಶಸ್ವಿಯಾಗಿ
ನಿರ್ವಹಿಸುತ್ತಿರುವ, ಮತ್ತು ಹಾಗೆ
ನಿರ್ವಹಿಸುವ ಸಾಹಸ ಮಾಡಬೇಕೆಂದು
ಹಾತೊರೆಯುತ್ತಿರುವ,
ಯುವಜನಕ್ಕೆ ಈ ಗ್ರಂಥವು ಅರ್ಪಿತ.

–ಪ್ರಕಾಶಕ




ಪರಮ ಪೂಜ್ಯ ಸದ್ಗುರು ಶ್ರೀಗಣಪತರಾವ ಮಹಾರಾಜರು,
ಶಾಂತಿ ಕುಟೀರ, ಕನ್ನೂರು

# ಶಾಂತಿ ಕುಟೀರ ಸಂದೇಶ



ಕೇವಲ ಸ್ವಾರ್ಥವಾದ ಬಾಳು, ಪೂರ್ಣ ಹಾಳು,
ಕೇವಲ ಸ್ವಾರ್ಥದ ಕೂಳು, ಅನ್ನಕ್ಕೆ ಕಾಳು,
ಕೇವಲ ಸ್ವಾರ್ಥದ ಗಳಿಕೆ, ನಿಷ್ಫಲವು ಕೇಳು;
ಶ್ರೀರಾಮನ ನೆನೆಯುತ ನಿಸ್ವಾರ್ಥದಿಂದ ಬಾಳುವದೇ ನಿಜ ಬಾಳು.

ಶಾಂತಿ ಕುಟೀರ

ದಿನಾಂಕ ೯-೭-೯೬

# ಆಶೀರ್ವಚನ

- ಸ್ವಾಮಿನಿ ಸ್ವಾತ್ಮನಿಷ್ಠಾನಂದ ಸರಸ್ವತಿ
ಧಾರವಾಡ

ಶ್ರೀಮದ್ ರಾಮಾಯಣವು ಆದಿ ಕವಿ ವಾಲ್ಮೀಕಿಯಿಂದ ಮಾನವ ಕುಲಕ್ಕೆ ಕೊಡುಗೆಯಾಗಿ ಬಂದ ಮೊದಲ ಮಹಾಕಾವ್ಯ. ಇದರಲ್ಲಿ ಮನುಕುಲಕ್ಕೆ ದಾರಿದೀಪವಾಗುವಂತಹ ಮಾನವೀಯ ಮೌಲ್ಯಗಳೇ ತುಂಬಿವೆ. ಈ ಗ್ರಂಥವು ಜಗತ್ತಿನ ಎಲ್ಲಾ ಭಾಷೆಗಳಲ್ಲಿಯೂ ಭಾಷಾಂತರವಾಗಿದೆ.

ಶ್ರೀಮದ್ ತುಳಸೀ ರಾಮಾಯಣವನ್ನು ಉತ್ತರಭಾರತದವರು ನಿತ್ಯ ಪಾರಾಯಣ ರೂಪದಲ್ಲಿ ಅಧ್ಯಯನ ಮಾಡುವರು. ದಕ್ಷಿಣ ಭಾರತದಲ್ಲಿ ಕಂಬರಾಮಾಯಣ, ತೊರವಿ ರಾಮಾಯಣ ಎಂದು ಆಸ್ತಿಕರು ಆಸ್ಥೆಯಿಂದ ಪಾರಾಯಣ ಮಾಡುವರು.

ಮರಾಠಿಯಲ್ಲಿ ಪ್ರಸಿದ್ಧವಾದ ''ಗೀತ ರಾಮಾಯಣ'' ವನ್ನು ಕನ್ನಡದವರು ನಿತ್ಯ ಪಾರಾಯಣ ಮಾಡಲು ಅನುಕೂಲವಾಗುವಂತೆ ಶ್ರೀಮಾನ್ ಜೋಶಿಯವರು ಗೀತ ರಾಮಾಯಣದ ಒಂದನೇ ಅಧ್ಯಾಯದಿಂದ 56ನೇ ಅಧ್ಯಾಯವರೆಗೂ ಸಪ್ತಾಹ ಪಾರಾಯಣಕ್ಕೆ ಅನುಕೂಲವಾಗುವ ರೀತಿಯಲ್ಲಿ ಗದ್ಯ ರೂಪದಲ್ಲಿ ಈ ಗ್ರಂಥವನ್ನು ಹೊರತಂದಿದ್ದಾರೆ. ಅವರ ತುಂಬು ಶ್ರದ್ಧಾ ಭಕ್ತಿ ಈ ಇಳಿ ವಯಸ್ಸಿನಲ್ಲಿ ಎಷ್ಟಿದೆ ಎಂಬುದಕ್ಕೆ ಈ ಗ್ರಂಥವೇ ಸಾಕ್ಷಿ.

ಶ್ರೀ ಸೀತಾ ಸಹಿತ ಶ್ರೀರಾಮಚಂದ್ರನು ಅವರಿಗೆ ಪೂರ್ಣ ಆಯಸ್ಸು ಆರೋಗ್ಯ ಕೊಟ್ಟು ಕಾಪಾಡಲಿ ಎಂದು ಹರಸುವೆ.



ರಾಮಾಯಣವು ಅತುಲ ಐಶ್ವರ್ಯ. ಇದನ್ನು
ಓದುವದರಿಂದ ನನಗೆ ಅಮಿತ ಸೌಖ್ಯ ಲಭಿಸಿದೆ.
ಸರ್ವರೂ ಓದಬೇಕಾದಂತಹ,
ಭಕ್ತಿರಸವು ಇದರಿಂದ ಪ್ರವಹಿಸುತ್ತದೆ.
ಗೃಹಸ್ಥ ಜೀವನದ ಆದರ್ಶವನ್ನು
ರಾಮಾಯಣದಲ್ಲಿ ಪ್ರತಿಬಿಂಬಿಸಲಾಗಿದೆ.

ಪ್ರತಿಯೊಬ್ಬರೂ ಪ್ರತಿದಿನವೂ ಶ್ರದ್ಧೆ ಮತ್ತು
ಆಸಕ್ತಿಯಿಂದ ರಾಮಾಯಣವನ್ನು ಓದಿ ಅದರಲ್ಲಿ
ತೋರಿಸಿರುವ ಮಾರ್ಗದಲ್ಲಿ ನಡೆದರೆ ಬಹುಬೇಗನೆ
ರಾಮರಾಜ್ಯ ಸ್ಥಾಪನೆ ಆಗುವದರಲ್ಲಿ
ಸಂಶಯವಿಲ್ಲ.

– ಮಹಾತ್ಮಾ ಗಾಂಧಿ

# RAJAJI'S WORDS

Ramayana & Mahabharatha are not just story books, although they are very good in that way too. They are the record of the mind and spirit of our fore-fathers, who cared for the God, even much more, than for the pleasent, and who saw more of the mystry of life, than we can do in our interminable persuit, for pretty and illusory achievements in the material plane.

I appeal particularly to the young ones in schools and colleges to read these books. After reading you will emerge with greater courage, stronger will and purer mind.

# ಹಾರ್ದಿಕ ಶುಭಾಶಯಗಳು

-ಶ್ರೀ ಸದ್ಗುರು ದತ್ತಾವಧೂತರು
ಚೈತನ್ಯಾಶ್ರಮ, ಹೆಬ್ಬಳ್ಳಿ.

ಪ್ರಪಂಚದಲ್ಲಿಯ ಸರ್ವರಾಷ್ಟ್ರಗಳ ಸಂಸ್ಕೃತಿಯ ಇತಿಹಾಸದಲ್ಲಿ ಭಾರತೀಯ ಸಂಸ್ಕೃತಿಯು ತನ್ನದೇ ಆದ ವೈಶಿಷ್ಟ್ಯಪೂರ್ಣ ಇತಿಹಾಸವನ್ನೊಳಗೊಂಡಿದೆ ಎಂಬುದು ಆ ಸಂಸ್ಕೃತಿಯ ಅಂತರಂಗ ಬಹಿರಂಗಗಳನ್ನು ಸೂಕ್ಷ್ಮವಾಗಿ ಸಮಗ್ರವಾಗಿ ಅಭ್ಯಾಸಮಾಡಿದವರಿಗೆ ಕಂಡು ಬರುವುದು.

ಮನುಷ್ಯನ ಜೀವನದ ಮೌಲ್ಯವೆನಿಸಿದ ಆತ್ಮಜ್ಞಾನವನ್ನು ಪರಮ ಶ್ರೇಯಸ್ಸಿಗೆ ಅಂದರೆ ಆತ್ಯಂತಿಕ ಸಮಾಧಾನಕ್ಕೆ ಸಾಧನಭೂತವಾದ ಮತ್ತು ಮನುಷ್ಯನ ಜೀವನದ ಪರಮೋಚ್ಚ ಮೂಲ್ಯವೆನಿಸಿದ ಆತ್ಮಜ್ಞಾನವನ್ನು ಈ ಸಂಸ್ಕೃತಿ ಆಧರಿಸಿದೆ. ಈ ಉದಾತ್ತ ದಿವ್ಯ ಹಾಗೂ ಭವ್ಯ ಸಂಸ್ಕೃತಿಯು ವೇದೋಪನಿಷದಗಳಲ್ಲಿ ವ್ಯಕ್ತವಾಗಿದೆ. ಆದರೆ ವೇದೋಪನಿಷದಗಳು ಸಾಮಾನ್ಯ ಜನರ ಆಕಲನ ಶಕ್ತಿಗೆ ನಿಲುಕದಂತಹವುಗಳಿರುವುದರಿಂದ ಋಷಿಮುನಿಗಳು ವೇದೋಪನಿಷದಗಳಲ್ಲಿಯ ತತ್ವಗಳನ್ನೇ ರಾಮಾಯಣ ಮಹಾಭಾರತಾದಿ ಅನೇಕ ಪುರಾಣಗಳಲ್ಲಿ ಸುಲಭವಾದ ಭಾಷೆ ಮತ್ತು ಅನೇಕ ದೃಷ್ಟಾಂತಗಳೊಂದಿಗೆ ಜೀವನದ ಎಲ್ಲ ನೈತಿಕ ಮೌಲ್ಯಗಳನ್ನು ವಿವರಿಸಿರುತ್ತಾರೆ. ಆದುದರಿಂದ ರಾಮಾಯಣ ಮಹಾಭಾರತಗಳೆಂದರೆ ಭಾರತೀಯ ಸಂಸ್ಕೃತಿಯ ಶ್ವಾಸೋಚ್ಛ್ವಾಸವಿದ್ದಂತೆ ಅಥವಾ ಎರಡು ದಿವ್ಯ ಚಕ್ಷುಗಳಿದ್ದಂತೆ. ಮಹಾಭಾರತವು ಸಾಮಾಜಿಕ ಜೀವನದ ಸಮಗ್ರ ಸ್ವರೂಪವನ್ನು ವಿವೇಚಿಸುತ್ತದೆ. ರಾಮಾಯಣವು ಮನುಷ್ಯ ಜೀವನದ ಆಧ್ಯಾತ್ಮಿಕ ಸಾಧನೆಗೆ ದಾರಿ ದೀಪವಾಗುತ್ತದೆ.

**ಮನುಷ್ಯನು ತನ್ನ ಅಂತರಂಗದಲ್ಲಿ ಯಾವ ಗುಣಗಳನ್ನು ಮತ್ತು ಯಾವ ದಿವ್ಯ ಉದಾತ್ತ ಭಾವನೆಗಳನ್ನು ನಿರ್ಮಾಣ ಮಾಡಿಕೊಂಡರೆ ಅವನ ಜೀವನವು ಎಲ್ಲ ದೃಷ್ಟಿಯಿಂದಲೂ ಸಾರ್ಥಕವಾಗುವುದೋ ಅಂಥ ದಿವ್ಯ ಭವ್ಯ ಆದರ್ಶಗಳ ಭಾಂಡಾರವೇ ರಾಮಾಯಣವಾಗಿದೆ.**

ಆದಿಕವಿ ಮಹರ್ಷಿ ವಾಲ್ಮೀಕಿಗಳಿಂದ ರಚಿತವಾದ ಮೂಲ ರಾಮಾಯಣವನ್ನೇ ಆಧರಿಸಿ ಅನೇಕ ಕವಿಗಳು, ಭಕ್ತರು ಹಾಗೂ ಸಾಧು ಸಂತರು ಸಂಸ್ಕೃತದಲ್ಲಿ ಅಲ್ಲದೇ ತಮ್ಮ ತಮ್ಮ ಮಾತೃಭಾಷೆಗಳಲ್ಲಿ ರಾಮಾಯಣ ರಚಿಸಿ ತನ್ಮೂಲಕ ಸಮಾಜವನ್ನು ಆಧ್ಯಾತ್ಮಿಕವಾಗಿ ಜಾಗೃತಗೊಳಿಸುವ ಕಾರ್ಯಮಾಡುತ್ತಲೇ ಬಂದಿರುತ್ತಾರೆ. ಇಂಥ ರಾಮಾಯಣಗಳಲ್ಲಿ ಕವಿ ಗ.ದಿ. ಮಾಡಗೂಳಕರ ಅವರಿಂದ ಮರಾಠಿ ಭಾಷೆಯಲ್ಲಿ ರಚಿತವಾದ ರಾಮಾಯಣವು ಶ್ರೀ ಸುಧೀರ ಫಡಕೆಯವರ ಸುಶ್ರಾವ್ಯ ಕಂಠದಿಂದ ಜನಮಾನಸವನ್ನು ಮೋಹಗೊಳಿಸಿರುತ್ತದೆ. ಅಲ್ಲದೇ ಕೇಳುವವರ ಅಂತಃಕರಣಕ್ಕೆ ದಿವ್ಯ ಪ್ರೇರಣೆಯನ್ನು ಉಂಟು ಮಾಡಿರುತ್ತದೆ.

ಇಂಥ ಆ ಮರಾಠಿ ರಾಮಾಯಣವನ್ನು ನಮ್ಮ ಶ್ರೀ ಜೋಶಿ ರಾಮಣ್ಣವರು (ಜೋಶಿಅಜ್ಜಾ-ದಾಂಡೇಲಿ) ಇವರು ಸುಲಭವಾದ ಕನ್ನಡ ಭಾಷೆಯಲ್ಲಿ ಅತ್ಯಂತ ಹೃದಯಂಗಮವಾಗಿ ಗದ್ಯಾನುವಾದ ಮಾಡಿದ್ದನ್ನು ಓದಿ ಮನಸ್ಸಿಗೆ ಬಹಳ ಸಂತೋಷವಾಯಿತು. ಅವರ ಈ ರಾಮಾಯಣ ಗದ್ಯರೂಪದಲ್ಲಿದ್ದರೂ ಇದರಲ್ಲಿಯ ವಾಕ್ಯಗಳನ್ನು ಓದುತ್ತ ಹೋದಂತೆ ಅದು ನಮ್ಮನ್ನು ಯಾವುದೋ ಒಂದು ದಿವ್ಯ ಲೋಕಕ್ಕೆ ತೆಗೆದುಕೊಂಡು ಹೋದಂತೆ ಸಾಗುತ್ತದೆ.

**ಸಹಸ್ರಾರು ವರ್ಷಗಳಿಂದ ರಾಮಾಯಣದ ರಚನೆಯಾಗುತ್ತಲೇ ಬಂದಿದ್ದು ಸಂಸ್ಕೃತ ಹಾಗೂ ಪ್ರಾಕೃತ ಭಾಷೆಗಳಲ್ಲಿ ಅಸಂಖ್ಯ ರಾಮಾಯಣಗಳಿದ್ದರೂ ಪ್ರಸ್ತುತದ ರಾಮಾಯಣವು ಅವುಗಳ ಮಧ್ಯದಲ್ಲಿ ತನ್ನದೇ ಆದ ಒಂದು ವಿಶೇಷ ಸ್ಥಾನವನ್ನು ಹೊಂದಿರುತ್ತದೆ ಎಂಬುದರಲ್ಲಿ ಸಂಶಯವಿಲ್ಲ.**

ಸಮಾಜದಲ್ಲಿ ನೈತಿಕ ಮೌಲ್ಯಗಳು ಕಣ್ಮರೆಯಾದ ಇಂದಿನ ಈ ಸಂದರ್ಭದಲ್ಲಿ ಸರ್ವರಿಂದ ರಾಮಾಯಣದ ಚಿಂತನ ನಡೆಯಬೇಕಾದುದು ಅತ್ಯವಶ್ಯ ಎಂಬುದನ್ನು ಅನುವಾದಕರು ಗಮನಿಸಿ ಈ ರಾಮಾಯಣ ನಿರ್ಮಾಣ ಮಾಡಿರುವರು. **ಈ ಗ್ರಂಥದ ವಿಶೇಷ ಗುಣಗಳೆಂದರೆ - ಇದು ಸುಲಭ ಬೆಲೆಗೆ ಲಭ್ಯ, ಅಲ್ಲದೇ ಇಂದು ಸರ್ವರಿಗೂ ಸಿಗುವ ಅಲ್ಪ ಬಿಡುವಿನಲ್ಲಿ ಸಾಪ್ತಾಹಿಕವಾಗಿ ನಿತ್ಯ ಚಿಂತನ ಮಾಡುವ ಕ್ರಮ ಈ ಗ್ರಂಥದಲ್ಲಿದೆ.** ಈ ರಾಮಾಯಣದ ಹೆಸರು ಕೂಡ ''ರಾಮಾಯಣ ನಿತ್ಯ ಚಿಂತನ'' ಎಂದೇ ಅದೆ.

ಆಧ್ಯಾತ್ಮಿಕ ಜಿಜ್ಞಾಸುಗಳು, ರಾಮಾಯಣದ ಪ್ರೇಮಿಗಳು ಹಾಗೂ ರಾಮಚಂದ್ರನ ಉಪಾಸಕರು ಹಾಗೂ ಭಕ್ತರು ಈ ರಾಮಾಯಣದ ದಿವ್ಯ ಚಿಂತನದಿಂದ ಸತ್ ಪ್ರೇರಣೆ ಪಡೆದು ತಮ್ಮ ಜೀವನವನ್ನು ಭಗವದ್ಭಾವದಿಂದ ತುಂಬಿಸಿಕೊಂಡು ಭಗವಂತನ ಅನುಗ್ರಹಕ್ಕೆ ಪಾತ್ರರಾಗಬೇಕು. ಅಂದರೆ ಈ ಲೇಖಕರ ಪರಿಶ್ರಮವು ಸಾರ್ಥಕವಾಗುತ್ತದೆ ಎಂದು ಭಾವಿಸುತ್ತೇವೆ. ಪ್ರಭು ಶ್ರೀ ರಾಮಚಂದ್ರನು ರಾ.ಭ.ಪ. ಶ್ರೀ ರಾಮಣ್ಣ ಜೋಶಿಯವರು ಹಾಗೂ ಅವರ ಪರಿವಾರವನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

# ಮುನ್ನುಡಿ

"ಜಯತ್ಯಾಶ್ರಿತಸಂತ್ರಾಸಧ್ವಾಂತವಿಧ್ವಂಸನೋದಯಃ
ಪ್ರಭಾವಾನ್ ಸೀತಯಾ ದೇವಾ ಪರಮವ್ಯೋಮಭಾಸ್ಕರಃ"

ತನ್ನನ್ನಾಶ್ರಯಿಸಿದ ಭಕ್ತರ ಬಗೆಬಗೆಯ ಕಷ್ಟಗಳೆಂಬ ಮೋಡಗಳನ್ನು ಧ್ವಂಸ ಮಾಡುತ್ತಾ ಸೀತಾದೇವಿ ಎಂಬ ಬಹು ಪ್ರಕಾಶದ ಪ್ರಭೆಯೊಡಗೂಡಿದ ಪರಮ ವ್ಯೋಮವೆಂಬ ವೈಕುಂಠದ ಭಾಸ್ಕರನೆನಿಸಿದ ಶ್ರೀ ರಾಮಚಂದ್ರರೂಪಿ ಭಗವಂತನು ಉದಯಿಸುತ್ತಾ ಸದಾ ವಿಜಯಿಯಾಗಿರುತ್ತಾನೆ.

( ಶ್ರೀ ರಘುವೀರ ಗದ್ಯದಲ್ಲಿ ಶ್ರೀ ವೇದಾಂತ ದೇಶಿಕರ ಸ್ತುತಿ )

## ಮಂಗಳಾ ಶಾಸನ

ಶ್ರೀ ರಾಮಕಥೆ ಭಾರತೀಯರಿಗೆ ಬರೀ ಕಥೆಯಾಗಿರದೇ ನಮ್ಮ ಜೀವನ ಕ್ರಮ ಮೌಲ್ಯಗಳು, ಆತ್ಮವಿಶ್ವಾಸ, ಜೀವನ ಶ್ರದ್ಧೆ, ಅಸುರಿ ಶಕ್ತಿಗಳೊಡನೆ ಹೋರಾಡುವಲ್ಲಿ ಅಧ್ಯಾತ್ಮಶಕ್ತಿಗಳನ್ನು ಎರೆದು ಪೋಷಿಸಿ ಬೆಳೆಸಿ ನಿಂತು ಹರಿಯುತ್ತಿರುವ ಮಹಾ ಅಮೃತ ಪ್ರವಾಹವಾಗಿದೆ. ಭಾರತೀಯರ ಪ್ರಾಣಸ್ಥಾನದಲ್ಲಿರುವ ಈ ಮಹಾ ಗ್ರಂಥಕ್ಕೆ "**ಪರಂ ಕವೀನಾಂ ಆಧಾರಂ**" ಮುಂದೆ ಬರುವ ಕವಿಗಳಿಗೆ ಸದಾ ಆಧಾರವಾಗಲಿರುವ ಕಾವ್ಯ - ಎಂದು ವಾಲ್ಮೀಕಿ ಮಹರ್ಷಿಗಳು ಅಂದೇ ಮಂಗಳಾಶಾಸನ ಮಾಡಿರುವುದು ರಾಮಾಯಣದಲ್ಲಿದೆ. ಪ್ರಾಕೃತ ಗ್ರಂಥ ಇದಕ್ಕೊಂದು ಶ್ರೇಷ್ಠ ನಿದರ್ಶನ.

ರಾಮಾಯಣವು ಈಗ ನಾನಾ ಪ್ರವಾಹಗಳಲ್ಲಿ, ನಾನಾ ಕವಿಗಳ, ಭಾಷೆಗಳ, ಕಲ್ಪನೆಗಳ ವಿನ್ಯಾಸದಲ್ಲಿ ಮೂಡಿ ಲೋಕರಂಜಕವಾಗಿದ್ದರೂ ಮೂಲದ ಆದಿ ವಾಲ್ಮೀಕಿಯ ಕೃತಿಯೊಂದು ಮಾತ್ರವೇ ನೈಜ ಇತಿಹಾಸವಾಗಿದ್ದು ಶ್ರೀಮದ್ರಾಮಾಯಣ ಶ್ರೀ ರಾಮಾಯಣ ಅನಿಸಿದೆ. ಏಕೆಂದರೆ ಶ್ರೀರಾಮನನ್ನು ಕಣ್ಣಿನಿಂದ ಕಂಡು ಅವನ ದಿವ್ಯಚರಿತೆಯನ್ನು ಸಮಕಾಲೀನ ವ್ಯಕ್ತಿಯಾಗಿ ಯಥಾವತ್ತಾಗಿ ತಿಳಿದು, ಮರ್ಮಕಳೊಡನೆ ಘಟನೆಗಳಲ್ಲಿ ಅಧ್ಯಾತ್ಮಿಕ ಮೆರುಗನ್ನು, ಧ್ವನಿಗಳನ್ನು, ದಿವ್ಯಾರ್ಥಗಳನ್ನು ಕಂಡು ರಚಿಸಿ ವೇದಸದೃಶವನ್ನಾಗಿಸಿ, ಲೋಕಕ್ಕಿತ್ತ

ದಿವ್ಯ ಕವಿ ವಾಲ್ಮೀಕಿ. ಉಳಿದವರು ತುಳಸೀದಾಸ, ಕಂಬಕವಿ, ಮೊದಲಾದವರು ಎಷ್ಟೇ ಭಕ್ತಿಭರಿತರಾಗಿ ಕವಿತಾಸ್ಫೂರ್ತಿ ವಿಶೇಷದಿಂದ ತಮ್ಮ ಕೃತಿಗಳನ್ನು ರಚಿಸಿದ್ದರೂ, ಅವರಾರೂ ಆದಿಕವಿಗಳಾಗಲಾರರು. ಹೀಗೆಂದರೆ ಅವರನ್ನು ಕಡೆಗಣಿಸಿದಂತೆ ಆಗುವದಿಲ್ಲ. ವೇದಗಳಿಗೆ ''ಓಂ''ಕಾರ ಆದಿ ಎಂದರೆ ಸಂಗ್ರಹ ವೇದವೆಂದರೆ ಇದು ಪ್ರಣವದ ಪ್ರಶಂಸೆಯೇ ವಿನಃ ಉಳಿದ ವೇದ ಭಾಗಗಳ ನಿಂದೆ ಆಗಲಾರದು ಅಲ್ಲವೇ? ಹಾಗೆ ಆದುದರಿಂದ ವಾಲ್ಮೀಕಿ ರಾಮಾಯಣದ ಪ್ರಾಶಸ್ತ್ಯ, ಮಹಾತ್ಮೆಗಳು ಅನನ್ಯ. ವಾಲ್ಮೀಕಿ ಕೃತಿಯಲ್ಲಿ ಕಾವ್ಯವಿದೆ, ದರ್ಶನವಿದೆ, ಸೌಂದರ್ಯಪ್ರಜ್ಞೆ ಇದೆ, ಇತಿಹಾಸವಿದೆ, ಜೀವನ ಬಾಳಲು ಬೇಕಾದುದೆಲ್ಲ ಇದೆ.

**''ಕಾಮಾರ್ಥ ಗುಣಸಂಪನ್ನಂ ಧರ್ಮಾರ್ಥ ಗುಣವಿಸ್ತರಂ''** ಎಂದು ಕವಿಯೇ ಆರಂಭದಲ್ಲಿ ಹೇಳಿರುವಂತೆ ಜೀವನದ ಅರ್ಥ-ಕಾಮ-ಪುರುಷಾರ್ಥಗಳಿಂದ ಇದು ಸಂಪನ್ನವಾಗಿರುವುದಾದರೂ, ಇದರಲ್ಲಿ ವಿಸ್ತಾರವಾಗಿ ಬಂದಿರುವುದು ಅದಲ್ಲ. **''ಧರ್ಮಾರ್ಥ ಗುಣ ವಿಸ್ತರಂ''** ಧರ್ಮ ಮತ್ತು ಅದಕ್ಕೆ ಪೋಷಕವಾದ ಅರ್ಥಗಳು ಇಲ್ಲಿ ವಿಸ್ತಾರವಾಗಿದೆ. ಇದು ಭಕ್ತಿ ಶಾಸ್ತ್ರವೂ ಹೌದೆಂಬುದು, ಜ್ಞಾನಿಗಳಿಗೆ, ಸಂತರಿಗೆ, ಉಪಾಸಕರಿಗೆ, ಸತ್ಪುರುಷರಿಗೆ, ಗುರೂಪದೇಶ ಕ್ರಮದಲ್ಲಿ ದೊರೆತಾಗ ಮಾತ್ರ ಚೆನ್ನಾಗಿ ತಿಳಿಯುವ ಅಂಶ! ಸರಳತೆಯ ಸೆಳೆತದಲ್ಲಿ ಇಲ್ಲಿನ ಅನುಷ್ಟುಪ್ ಶ್ಲೋಕಗಳು ಮುಗ್ಧ ಪಾಮರನ ಓದುಗನ ಮನಸ್ಸನ್ನು ಕೊಚ್ಚಿಬಿಡುವಾಗ ಅಲ್ಲಲ್ಲಿ ಹುದುಗಿರುವ ದಿವ್ಯಾರ್ಥಗಳು ಥಟ್ಟನೆ ಮನಕ್ಕೆ ಸ್ಫುರಿಸುವುದಿಲ್ಲ. ಅದಕ್ಕೆ ಗುರುಕೃಪೆ ಬೇಕು, ಓದುಗನ ಮನದ ಪಕ್ವತೆ, ನಿರ್ಮಲತೆ, ಸಾಧನೆ, ಪರಿಶ್ರಮ ಬೇಕು. ಇವು ಸಿದ್ಧಿಸದೇ ತಾವೂ ಕವಿಗಳಾಗಬೇಕೆಂದೋ, ತಾವು ಮೊದಲೇ ಗ್ರಹಿಸಿದ ಬೇರೆಬಗೆಯ ಶ್ರದ್ಧೆಗಳು ರಾಮಾಯಣದ ಲೋಕರಂಜಕ ಕಥೆಯ ಮುಸುಕಿನಲ್ಲಿ, ಚೌಕಟ್ಟಿನಲ್ಲಿ ಬಂದರೆ ನಿತ್ಯನೂತನವಾಗಿ ಉಳಿಯುವುದೆಂದೋ ಭ್ರಮಿಸಿ ಬರೆದ ರಾಮಾಯಣದ ವಿಕೃತರೂಪಗಳ ಬಗೆಗೆ ಇಲ್ಲಿ ಹೇಳಬೇಕಾದುದೇನಿಲ್ಲ. ಕಾಲವೇ ಅವನ್ನು ಮಸಕಾಗಿಸಿ, ವಾಲ್ಮೀಕಿ ದರ್ಶನವನ್ನು ಎತ್ತಿ ಹಿಡಿದಿದೆ. ವಾಲ್ಮೀಕಿಯನ್ನು ಆಧರಿಸಿ ಬರೆದ ಯಾವ ಕೃತಿಕಾರನ ಕೃತಿಯೂ ವಿಫಲವಾಗಿಲ್ಲದಿರುವುದೂ ಪವಾಡದಂತೆ ಇಂದೂ ನಮ್ಮೆದುರೇ ಇವೆ. ಉತ್ತರ ಭಾರತದಲ್ಲಿ ತುಳಸೀದಾಸರು ವಾಲ್ಮೀಕಿಯ ಮೂಲ ಕೃತಿಯನ್ನು ಮರೆಸುವಷ್ಟರ ಮಟ್ಟಿಗೆ ಪ್ರಚಾರದಲ್ಲಿದ್ದು, ಆಪತ್ಕಾಲದಲ್ಲಿ ನಮ್ಮ ಸನಾತನ ಸಂಸ್ಕೃತಿಯ ರಕ್ಷಣೆ ಮಾಡಿ, ತಮ್ಮ ಕೃತಿಯನ್ನು ಹಿಂದೂಧರ್ಮದ ಕೈಪಿಡಿಯಾಗುವಂತೆ ರಚಿಸಿದ್ದಾರೆ. ತಮಿಳುನಾಡಿನಲ್ಲಿ ಕಂಬಕವಿಯ ರಾಮಾಯಣ ಹದಿನೆಂಟು ಕಡೆಗಳಲ್ಲಿ ವಾಲ್ಮೀಕಿ ದರ್ಶನವನ್ನು ಮಿಂಚುವಂತೆ ಮಾಡಿ, ಹೊಸ ಬೆಳಕನ್ನು ಸೇರಿಸಿ ತನ್ನತನವನ್ನಿ

ಮೆರೆಸಿದೆ. ಕನ್ನಡದಲ್ಲಿ ತೊರವೆ ರಾಮಾಯಣ ಸಾಕಷ್ಟು ಸ್ವತಂತ್ರ ಕವಿಪ್ರತಿಭೆಯಿಂದ ನೂತನವಾಗಿದ್ದರೂ ಪ್ರಚಾರ ಬಹಳವಾಗಿಲ್ಲ. ಪ್ರಚಾರ ಬಹಳ ಇರುವ ರಾಮಾಯಣಗಳು ಮೂಲಕ್ಕೆ ಅನುಗುಣವಾಗಿಲ್ಲದಿರುವುದು ಕಾಲವೈಪರೀತ್ಯದಿಂದ. ಸಂಸ್ಕೃತದಲ್ಲೂ ಅಷ್ಟೇ. ಇದು ಎಲ್ಲ ಭಾಷೆಗಳಲ್ಲೂ ನಡೆದೇ ಇದೆ.

ಮರಾಠೀ ಭಾಷೆಯಲ್ಲಿ ಈ ಕೊರತೆಯನ್ನು ತೀರಿಸಿದ ಮಹಾಗ್ರಂಥ **ಶ್ರೀ ಮಾಡಗೂಳಕರ ಅವರ ಗೀತರಾಮಾಯಣ** ಎಂದು ಕೇಳಿದ್ದೇನೆ. ನನಗೆ ಮರಾಠಿ ಭಾಷೆಯ ಪರಿಚಯವಿಲ್ಲದಿರುವುದು ನನ್ನ ಅನೇಕ ದೌರ್ಭಾಗ್ಯಗಳಲ್ಲಿ ಒಂದು. ಸುಮಾರು ಇಪ್ಪತ್ತು ವರುಷಗಳ ಹಿಂದೆ ಧಾರವಾಡದ ವನವಾಸೀ ಶ್ರೀರಾಮಮಂದಿರದಲ್ಲಿ ನನ್ನ ರಾಮಾಯಣ ಪ್ರವಚನ ಸಂದರ್ಭದಲ್ಲಿ ಒಮ್ಮೆ ಆಕಾಶವಾಣಿಯ ಪ್ರಸಿದ್ಧ ಕಲಾವಿದೆಯರಾದ ಶ್ರೀಮತಿ ಅನುರಾಧಾ ಧಾರೇಶ್ವರ ಅವರ ತುಂಬು ಕಂಠದಿಂದ ಕವಿ ಶ್ರೀ ಮಾಡಗೂಳಕರರ ಗೀತರಾಮಾಯಣದ ಒಂದೆರಡು ಗೀತೆಗಳನ್ನು ನಾನು ಕೇಳಿ ಮುಗ್ಧನಾದೆ. ಸಂಸ್ಕೃತಪ್ರಚುರವಾದ ಆ ಗೀತೆಗಳ ಸಂದರ್ಭದಿಂದ ಅರ್ಥಗಳನ್ನೂ ಅಷ್ಟಷ್ಟು ಅರಿತು ಆನಂದಿಸಿದೆ. ಆಮೇಲೆ ಮಿತ್ರ, ಪ್ರೊ. ಶ್ರೀನಿವಾಸ ತೊಪಖಾನೆಯವರ ಸುಂದರ ಕನ್ನಡಾನುವಾದ ನನಗೆ ಈ ಕೃತಿಯಲ್ಲಿ ಇನ್ನಷ್ಟು ಆದರ ತಂದಿತು.

ಈಗ ಶ್ರೀ ರಾ. ವಿ. ಜೋಶಿ ಅವರು ಇದರ ಸುಂದರ ಕನ್ನಡ ಗದ್ಯಾನುವಾದವನ್ನು ಭಾವ, ಸಂದರ್ಭ, ರಸ-ಸನ್ನಿವೇಶಗಳಿಗೆ ಸರಿಹೊಂದುವಂತೆ, ಎಚ್ಚರಿಕೆಯಿಂದ ಮಾಡಿದ್ದಾರೆ. ಇದಕ್ಕೆ ನಾನು ಒಂದೆರಡು ಮಾತುಗಳ ಮುನ್ನುಡಿ ಬರೆಯಬೇಕೆಂದು ಕೇಳಿದ್ದರಿಂದ ಮೂಲ ಕೃತಿಯನ್ನು ಓದಿ ಸವಿಯುವ ಸದವಕಾಶ ನನಗೆ ದೊರೆತುದು - ಅದು ಭಾಗ್ಯ.

**ಮರಾಠಿ ಗೀತರಾಮಾಯಣ**- ಇದು ಮೂಲದ ಅನುವಾದವಲ್ಲ. ಸಂಗ್ರಹವೂ ಅಲ್ಲ. ಇದರಲ್ಲಿ ವಾಲ್ಮೀಕಿಯ ಮೂಲ ಪಾತ್ರಗಳ - ಸಂದರ್ಶನಗಳ, ಆಶಯಗಳ ಮರುಸೃಷ್ಟಿರೂಪದ ಪುಷ್ಪಗಳ ಮಾಲೆಯೇ ಇದು! ಐವತ್ತಕ್ಕೂ ಮಿಕ್ಕ ಈ ಹೂಗಳ ಪರಿಮಳ ಅನುಭವೈಕವೇದ್ಯ! ಪ್ರತಿಯೊಂದು ಗೀತೆಯ ಸಂದರ್ಭ, ಸನ್ನಿವೇಶಗಳ ಆಯ್ಕೆ, ಭಾವಾವಿಷ್ಕಾರ ರೀತಿ, ಮೂಲದ ಧ್ವನಿಗಳ ಸ್ಫುರಣ ಅಡಕವಾಗುವಂತೆ, ಗೇಯಕ್ಕೆ ಹೊಂದುವಂತೆ,- ಇರುವ ರಚನೆಗಳಲ್ಲಿ, ದೈವೀ ಪ್ರತಿಭೆ ಇರುವುದು ಆಸ್ತಿಕರಿಗೆ ಸ್ಪಷ್ಟ! ವಾಲ್ಮೀಕಿ ಕೃತಿಗೆ ಇದೊಂದು ಕನ್ನಡಿಯೂ ಹೌದು; ಭಾಷ್ಯವೂ ಹೌದೆಂದರೆ ಅತಿಶಯವಲ್ಲ! ಮೂಲವನ್ನು ಅನುಸರಿಸಿರುವ

ಇಲ್ಲಿನ ರೀತಿ ಪತಿವ್ರತೆಯ ಪತಿಪರಾಯಣತೆಗೆ ಹೋಲುವ ಸೌಂದರ್ಯಕ್ಕೆ ಸಾಕ್ಷಿ. ಪಾಮರರಿಗೂ ಮೂಲವು ಎಟಕುವಂತೆ, ಕಿವಿಗೆ - ಹೃದಯಕ್ಕೆ ಭಾರವಾಗದಂತೆ ಇರುವ ಶಬ್ದಜೋಡಣೆ - ''ಅಹೋ ಗೀತಸ್ಯ ಮಾಧುರ್ಯಂ'' ಎಂಬ ಮೂಲೋಕ್ತಿಯನ್ನು ನೆನಪಿಸುತ್ತದೆ.

ಶ್ರೀ ಜೋಶಿಯವರು ಜ್ಞಾನಿಗಳು, ಭಕ್ತರು, ಮೇಲಾಗಿ ಸಜ್ಜನರು, ಗುಣಪಕ್ಷಪಾತಿಗಳು. **''ಪೂರ್ವಾಭಿಭಾಷೀ''** ಎಂಬ ಶ್ರೀ ರಾಮಚಂದ್ರನ ಬಿರುದನ್ನು ತಾವು ಮೆಚ್ಚಿ ಅದರಂತೆ ನಡೆಯುವ ವಿಶಾಲ ಹೃದಯರು. ನನ್ನ **''ಶ್ರೀ ರಾಮಾಯಣ ಪಾತ್ರ ಪ್ರಪಂಚವನ್ನು''** ಪಡೆದುಕೊಂಡು ಓದಿ, ಆನಂದಿಸಿ, ತಾವೇ ದೂರವಾಣಿಯಲ್ಲಿ ಮಾತಾಡಿ ಅಭಿನಂದಿಸಿ, ಭೇಟಿಗೆ ಬಂದು ಸಂತಸ ವ್ಯಕ್ತಪಡಿಸಿದವರು. ತಮ್ಮ ರಾಮಾಯಣ ಮತ್ತು ನನ್ನ ಕೃತಿಗಳಲ್ಲಿ ಏಕಾರ್ಥ, ಏಕಾಶಯ ಭಾವಸಾರೂಪ್ಯ-ಸಾಯುಜ್ಯಗಳನ್ನು ಕಂಡು ಮುಕ್ತ ಕಂಠದಿಂದ ಹೊಗಳಿದವರು. ವಯಸ್ಸಿನ ಅಡಚಣೆ, ಅಶಕ್ತಿ, ಮಿತಿಗಳನ್ನು ಮೀರಿ ನಿಂತು ಕ್ರಿಯಾಪರರಾಗಿರುವವರು. ಇಂಥವರ ಈ ಸತ್‌ಕೃತಿ ಲೋಕಪ್ರಿಯವಾಗುವದರಲ್ಲಿ ನನಗೆ ಸಂದೇಹವಿಲ್ಲ. ಭಕ್ತಿ ಪ್ರೇರಿತವಾದ ಕೃತಿ ಇದು. ಆದುದರಿಂದ ಭಗವಂತನು ಪ್ರೀತನಾಗುವನೆಂದು ನನ್ನ ನಂಬಿಕೆ.

ಈ ಕೃತಿಗೆ ಮೊದಲು ಮಾತನ್ನು ನಾನು ಬರೆಯಬೇಕೆಂದು ಹೇಳಿ ನನಗೆ ಶ್ರೀ ಜೋಶಿ ಅವರು ಗೌರವ ನೀಡಿದ್ದಾರೆ! ಅದು ಅವರ ಪಕ್ಷಪಾತ! ಇಷ್ಟು ಮಾತ್ರದಿಂದ ನನಗೆ ಆ ಯೋಗ್ಯತೆ ಇದೆಯೆಂದು ಅರ್ಥವಲ್ಲ.

ಹಿರಿಯರ ಮಾತು ಮೀರದೇ ಎರಡು ಮಾತು ಬರೆದಿರುವೆ. ಕನ್ನಡ ಮರಾಠಿ ಭಾಷೆಗಳಲ್ಲಿನ ಬಾಂಧವ್ಯವನ್ನು ಈ ಕೃತಿ ಬೆಸೆದು ಭದ್ರಪಡಿಸಬಲ್ಲದು. **ಬೆಸುಗೆ ಇರುವದು ಭಕ್ತಿಯ ದರ್ಶನದಲ್ಲಿ** - ಎಂದು ಇಲ್ಲಿ ಸ್ಪಷ್ಟವಾಗುತ್ತದೆ.

ಮರಾಠೀ ಬಾರದ ಬಾಂಧವರಿಗೂ ಈ ಉಪಕಾರ ಮಾಡಿರುವ ಶ್ರೀ ಜೋಶಿ ಅವರು ಅಭಿನಂದನೀಯರು - ಗೌರವಾರ್ಹರು. ಈ ಗ್ರಂಥವು ಸಾರ್ವಜನಿಕ ಹಿತ ಬಯಸುವದಾಗಿದ್ದು ಇವರ ಈ ರಾಮಸೇವೆ ಸಾರ್ಥಕವಾಗಲಿ ಎಂದು ಹಾರೈಸುತ್ತೇನೆ.

ಶಾಲೆ - ಕಾಲೇಜಗಳಿಗೆ ತರಿಸಿಕೊಂಡು ವಿದ್ಯಾರ್ಥಿಗಳು, ಅಧ್ಯಾಪಕರು ಆದರಂತೆ ಗ್ರಂಥ ಭಾಂಡಾರಗಳಲ್ಲಿರಿಸಿಕೊಂಡು ಸಾರ್ವಜನಿಕರೂ ಈ ಗ್ರಂಥದ ಲಾಭವನ್ನು ಪಡೆಯಬಹುದು.

''ಅಯೋಧ್ಯಾ''
ಕಲ್ಯಾಣನಗರ - ಧಾರವಾಡ

ಇಂತು ಸಜ್ಜನ ವಿಧೇಯ
**ಪ್ರೊ. ಕೆ. ಎಸ್. ನಾರಾಯಣಾಚಾರ**

# ಶ್ರೀ ''ಎನ್ಕೆ'' ಅವರ ಪ್ರಕಾರ

ಶ್ರೀ ಜೋಶಿ ರಾಮಣ್ಣನವರು ಸುಂದಸ ಕನ್ನಡ ಗದ್ಯದಲ್ಲಿ ಕಾವ್ಯಗಂಧಿಯಾಗಿ ಅನುವಾದಿಸಿರುವ ಈ ''ರಾಮಾಯಣ ನಿತ್ಯ ಚಿಂತನ'' ಶ್ರದ್ಧಾವಂತರಿಗೊಂದು ನಿತ್ಯ ಪಾರಾಯಣ ಗ್ರಂಥವಾಗಿದೆ. ಶ್ರೀ ರಾಮಾಯಣ ಪಾರಾಯಣ ಮಾಡುವ ಭಕ್ತರು ಊರೂರಲ್ಲಿ ಮನೆಮನೆಗಳಲ್ಲಿದ್ದಾರೆ. ದೇವರ ಪೂಜೆಯಂತೆ ಪವಿತ್ರ ರಾಮಾಯಣ ಗ್ರಂಥ ಪೂಜೆ ಮಾಡಿ, ಪಾರಾಯಣ ಮಾಡಿ, ಮಂಗಳ ಹಾಡುವವರಿಗೇನು ಕೊರತೆ ಇಲ್ಲ. ಇದು ನಮ್ಮ ಜನ-ಜೀವನ ಸಂಸ್ಕೃತಿಯ ಒಂದು ದಿವ್ಯ ಲಕ್ಷಣ.

ಆದಿ ಕವಿ ವಾಲ್ಮೀಕಿ ಮಹರ್ಷಿಗಳ ಮಹಾ ಕಾವ್ಯವಾದ ಶ್ರೀ ರಾಮಾಯಣವಲ್ಲದೆ ಈಗಿನ ಅಭಿರುಚಿಗೆ ಸಂಗೀತಕ್ಕೆ ಒಗ್ಗುವಂತೆ ಮರಾಠಿಯ ಮೇಲ್ಪಂಕ್ತಿಯ ಕವಿ ಗ.ದಿ. ಮಾಡಗೂಳಕರರ **''ಗೀತ ಸಾಮಾಯಣ''**ವು ಲಲಿತ ಸಾಹಿತ್ಯ ಸುಗಮ ಸಂಗೀತಗಳ ಇತಿಹಾಸದಲ್ಲಿ ನವೀನ ಅಧ್ಯಾಯವನ್ನು ತೆರೆಯಿತು. ಅದರ ಜನಪ್ರಿಯತೆ, ಅಭೂತಪೂರ್ವವಾಗಿ ಬೆಳೆಯಿತು. ಭಕ್ತವೃಂದವಷ್ಟೇ ಅಲ್ಲ, ಸಂಗೀತ ಸಾಹಿತ್ಯ ರಸಿಕರ ಮನವನ್ನು ಸಹ ಗೀತ ರಾಮಾಯಣವು ಸೂರೆಗೊಂಡಿತು. ನಾಲ್ಕೈದು ದಶಕಗಳ ಹಿಂದಿನ ಮಹಾರಾಷ್ಟ್ರದಲ್ಲಿ ಒಂದು ಹೊಸ ಚೈತನ್ಯವನ್ನೇ ಹರಡಿತು.

ಕನ್ನಡ ಖ್ಯಾತ ಸಾಹಿತಿ ಪ್ರೊ. ಶ್ರೀನಿವಾಸ ತೋಘಖಾನೆ ಅವರು ಮಾಡಗೂಳಕರರ ಗೀರಾಮಾಯಣದ ಐವತ್ತಾರು ಗೀತಗಳನ್ನು ಲಲಿತ ಗೀತರೂಪದಲ್ಲಿ ಕನ್ನಡದಲ್ಲಿ ಅನುವಾದಿಸಿದ ಕೃತಿಯು ಸಹ ಕನ್ನಡಿಗರಲ್ಲಿ ವಿಶೇಷ ಅಭಿರುಚಿ- ಆಸಕ್ತಿಗಳನ್ನು ಬೆಳೆಸಿತಲ್ಲದೇ ಧಾರವಾಡ ಆಕಾಶವಾಣಿಯಿಂದ ಅದು ವರ್ಷದುದ್ದಕ್ಕೂ ರಸಿಕ - ಜನಾನುರಂಜಕವಾಗಿ ಬಿತ್ತರಗೊಂಡು ಕನ್ನಡಿಗರಲ್ಲಿ ಹೊಸದೊಂದು ಅಲೆಯನ್ನೇ ಎಬ್ಬಿಸಿತು.

ಸದ್ಯ ನನ್ನ ಆದರಣೀಯ ಹಿರಿಯ ಮಿತ್ರರಾದ ಶ್ರೀ ಜೋಶಿ ರಾಮಣ್ಣನವರು ಮರಾಠಿಯ ''ಗೀತರಾಮಾಯಣ''ವನ್ನು ಹೃದ್ಯವಾಗಿ ಗದ್ಯ ಶೈಲಿಯಲ್ಲಿ ಅಚ್ಚುಕಟ್ಟಾಗಿ ಒಂದು ಸಪ್ತಾಹಕ್ಕೆ ಅಳವಡುವಂತೆ ಎಂಟೆಂಟು ಅಧ್ಯಾಯಗಳ ಏಳು ವಿಭಾಗಗಳನ್ನು ಮಾಡಿ, ಒಂದೊಂದು ದಿನಕ್ಕೆ ಒಂದೊಂದು ವಿಭಾಗದ ವಾಚನವು ನಡೆಯುವಂತೆ, ಮಂಗಲ ಪದ್ಯ,

ಪ್ರಸ್ತಾವನೆ, ಕಥಾ ನಿರೂಪಣೆಗಳ ಒಂದೊಂದು ಘಟಕವನ್ನು ಏರ್ಪಡಿಸಿ, ಪ್ರತಿ ವಿಭಾಗದ ಪ್ರಾರಂಭಕ್ಕೆ ಮತ್ತೆ ಹಿಂದಿನ ಎಂಟು ಅಧ್ಯಾಯಗಳ ಸಾರಾಂಶ, ಆಯಾ ಫಲಶ್ರುತಿ ಹಾಗೂ ಮುಂದಿನ ವಿಭಾಗದ ಕಥಾಭಾಗವನ್ನು ಇದೇ ಕ್ರಮದಲ್ಲಿ ಮುಂದುವರಿಸಿಕೊಂಡು ಹೋಗಿದ್ದಾರೆ. ಕೊನೆಯಲ್ಲಿ ರಾಮರಕ್ಷಾ ಭಾಗ ಮತ್ತು ವರದ ಹನುಮತ್ ಸ್ತೋತ್ರಗಳಿಂದ ಮುಕ್ತಾಯಗೊಳಿಸುವದು ''ಶ್ರೀ ರಾಮಾಯಣ ನಿತ್ಯ ಚಿಂತನ'' ಸಪ್ತಾಹ ಆಚರಿಸುವವರಿಗೆ ಪೂಜ್ಯ ಭಾವನೆಯ ಒಂದು ರಸಾನುಭವವುಂಟಾಗುವಂತೆ, ಭಕ್ತಿ ಪುರಃಸರವಾಗಿ ರಚಿಸಿರುವದು ಈ ಸದ್ಗ್ರಂಥಕ್ಕೆ ಒಂದು ಅಪೂರ್ವ ಶುಭಮಂಗಲದ ಮುಕ್ತಾಯ ಹೇಳಲಾಗಿದೆ. ಇದರಲ್ಲಿಯ ಕೆಲಕೆಲವು ನಾಟ್ಯಪೂರ್ಣ ಸನ್ನಿವೇಶಗಳಂತೂ ರೋಮಾಂಚಕವಾಗಿವೆ. ಓದುಗರು ಭಕ್ತಿಕಂಪಿತವಾಗುವಂತೆ ನಿರೂಪಿಸಲ್ಪಟ್ಟಿವೆ.

ಇದನ್ನು ಭಕ್ತಿ ಭಾವನೆಯಿಂದ ಸಪ್ತಾಹ ಆಚರಣೆಯೆಂದು ಕೈಕೊಂಡು ಧನ್ಯತೆಯ ಭಾವವನ್ನು ತಳೆಯುವ ಭಕ್ತವೃಂದಕ್ಕೆ ಇದೊಂದು ಅಮೂಲ್ಯ ಅಪೂರ್ವ ಕಾಣಿಕೆ ! ಶ್ರೀ ಜೋಶಿಯವರ ಕೀರ್ತಿಯು ಈ ಮೂಲಕ ಹೆಚ್ಚುತ್ತ ಜನತೆಯಲ್ಲಿ ಸಾಫಲ್ಯ ಸಾರ್ಥಕ್ಯ ಭಾವ ಮೂಡುವಂತಾಗಲಿ.

ಧಾರವಾಡ
೨೦-೧೦-೯೭

-ಎನ್. ಕೆ. ಕುಲಕರ್ಣಿ



# ಗದ್ಯರೂಪೀ ಬಹುಪಯೋಗಿ

ಶ್ರೀರಾಮಚಂದ್ರನ ಚರಿತೆಯು ಶತಕೋಟಿ ಪ್ರವಿಸ್ತರವಾದುದು. ಅದರಲ್ಲಿಯ ಒಂದೊಂದು ಅಕ್ಷರವೂ ಪರಮಪವಿತ್ರ ಹಗೂ ಭಕ್ತೋದ್ಧಾರಕವಾಗಿದೆ. ರಾಮಚರಿತೆಯನ್ನು ಹಾಡಿದ ಕವಿಗಳ ಗಣನೆಯಿಲ್ಲ. ಎಷ್ಟೇ ಪುನರುಕ್ತಿಯಾದರೂ ರಾಮಚಂದ್ರನ ಗುಣಗಳನ್ನು ಹಾಡಬೇಕೆಂಬ ಚಪಲ ಕವಿಗಳಲ್ಲಿ ಸಹಜ. ಇದು ಆಚಂದ್ರಾರ್ಕವಾಗಿ ನಡೆಯುವ ಪ್ರಕ್ರಿಯೆ. ಅದರಲ್ಲಿ ಮಹಾರಾಷ್ಟ್ರದ ಶ್ರೇಷ್ಠ ಕವಿ ದಿ. ಗ. ದಿ. ಮಾಡಗೂಳಕರರು ಮೌಲಿಕ ಕಾರ್ಯವನ್ನು ಮಾಡಿದ್ದಾರೆ. ಅವರು ರಚಿಸಿದ ''ಗೀತ ರಾಮಾಯಣ'' ಕೇಳಿ ಸವಿಯದ ಮರಾಠಿಗನಿಲ್ಲ. ಅಂಥ ಭಾವಪೂರ್ಣ ಹಾಗೂ ಪವಿತ್ರ ಗೀತೆಯನ್ನು ನನ್ನ ಮಿತ್ರರಾದ ಶ್ರೀ ರಾಮಣ್ಣ ಜೋಶಿ ಕನ್ನಡಕ್ಕೆ ತರ್ಜುಮೆ ಮಾಡಿದ್ದಾರೆ. ಮೂಲಕೃತಿ ಗೀತವಾಗಿದ್ದರೆ, ಅವರ ಅನುವಾದ ಗದ್ಯದಲ್ಲಿದೆ. ಅದು ಗದ್ಯಗಾವ್ಯವೆಂದರೂ ಅಡ್ಡಿಯಿಲ್ಲ. ಹೃದಯಂಗಮ ರಸನಿರೂಪಣೆ ಸಾಹಿತ್ಯದ ಜೀವಾಳ ಆಯಾ ರಸಗಳಿಗೆ ಓದುಗರ ಹೃದಯ ಸ್ಪಂದಿಸಿದರಾಯಿತು - ಅದು ಗದ್ಯವಿರಲಿ, ಪದ್ಯವಿರಲಿ - ಅದು ಕಾವ್ಯವೇ. ಕಥೆ ರೂಪದಲ್ಲಿ ಈ ನಿತ್ಯ ಚಿಂತನವಿಲ್ಲ. ವಿವಿಧ ಪಾತ್ರಗಳ ಸಂಭಾಷಣೆಯಿಂದ ಅದು ಅರಳಿ ಬಂದಿದೆ. ಈ ಕೃತಿಯನ್ನು ಸಪ್ತಾಹರೂಪದಲ್ಲಿ ನಿತ್ಯಚಿಂತನಕ್ಕೆ ಅನುಕೂಲವಾಗಲೆಂದು ಶ್ರೀ ಜೋಶಿಯವರು ರಚಿಸಿರುವದು ವಿಶೇಷ.

ಶ್ರೀ ಜೋಶಿಯವರು ಧಾರ್ಮಿಕ ಹಾಗೂ ಅಧ್ಯಾತ್ಮಿಕ ಜೀವಿ. ನಮ್ಮ ಸನಾತನ ಸಂಸ್ಕೃತಿಯ ಅಚ್ಚು ತರುಣರ ಮನಸ್ಸಿನ ಮೇಲೆ ಆಗಬೇಕೆಂದು ಅವರು ಪ್ರಯತ್ನಿಸುತ್ತಿರುವರು. ಅದಕ್ಕಾಗಿ ಅವರು ಈಗಾಗಲೇ ''ಪೂರ್ಣಾವತಾರೀ ಶ್ರೀ ಚಿದಂಬರ ಸ್ವಾಮಿಗಳು'', ''ಸ್ತೋತ್ರಯುತ ಜೀವನ'', ಮತ್ತು ''ಜ್ಞಾನೇಶ್ವರಿಯ ನಿತ್ಯ ಚಿಂತನ'' ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಈ ಕೃತಿಯ ಪ್ರಕಾಶನದಲ್ಲಿಯೂ ಅದೇ ಅವರ ಉದ್ದೇಶ. ಭಗವದ್ಗೀತೆ, ರಾಮರಕ್ಷೆ ಮುಂತಾದ ಸಂಸ್ಕೃತ ಗೀತೆಗಳನ್ನು ಜಡಕರ್ಮದ ರೂಪದಲ್ಲಿ ದಿನಾಲು ಪಠಿಸುವವರು ಅನೇಕರಿದ್ದಾರೆ. ಅದರ ಅರ್ಥವನ್ನು ಮನನ ಮಾಡಿ ಅದರ ಸಂದೇಶವನ್ನು ತನ್ನ ಜೀವನದಲ್ಲಿ ಅಳವಡಿಸಿಕೊಳ್ಳಲು ಕನ್ನಡ ಗದ್ಯರೂಪದ ಗ್ರಂಥಗಳೇ ಪ್ರಯೋಜಕ. ಆ ದಿಶೆಯಲ್ಲಿ ಶ್ರೀ ಜೋಶಿಯವರ ಈ ಕೃತಿ ಕನ್ನಡಿಗರಿಗೆ ವಿಶೇಷತಃ ಚಿಕ್ಕಮಕ್ಕಳಿಗೆ ಅತ್ಯಂತ ಉಪಯುಕ್ತವಾಗಲಿದೆ. ಅದಕ್ಕಾಗಿ ಶ್ರೀ ಜೋಶಿಯವರಿಗೆ ನನ್ನ ಅಭಿವಂದನೆಗಳು ಮತ್ತು ಅಭಿನಂದನೆಗಳು.

ಧಾರವಾಡ

೫-೧೧-೯೭

-ಶ್ರೀ ಚಿ.ನಾ. ದೇಶಪಾಂಡೆ

# ಪ್ರಪ್ರಥಮ ಸಪ್ತಾಹ ವಾಚನ ಗ್ರಂಥ

ಶ್ರೀಜೋಶಿ ರಾಮಣ್ಣನವರ ''ಶ್ರೀರಾಮಾಯಣ ನಿತ್ಯ ಚಿಂತನ'' ಗ್ರಂಥ ರಾಮಾಯಣ ವಾಚಕರಿಗೆ ಒಂದು ಹೊಸಬಗೆಯ ನೈವೇದ್ಯ. ಮರಾಠಿಯಲ್ಲಿ ರಚಿತವಾದ ಶ್ರೀ ಗ. ದೀ. ಮಾಡಗೂಳಕರರ ಗೀತರಾಮಾಯಣ ಒಳ್ಳೇ ಜನಪ್ರಿಯ ಕೃತಿಗಳಲ್ಲಿ ಒಂದು. ಅದು ಕನ್ನಡದಲ್ಲು ವಿವಿಧರೂಪಗಳಲ್ಲಿ ಅನುವಾದಗೊಂಡಿದೆ. ಆದರೆ ಗದ್ಯ ರೂಪದಲ್ಲಿ ಬರೆಯಲ್ಪಟ್ಟು ಸಪ್ತಾಹವಾಚನಕ್ಕೆ ತಕ್ಕಂತೆ ವಿಭಜಿಸಲ್ಪಟ್ಟು ರಾಮರಕ್ಷಾ ಮಂತ್ರದ ಶ್ಲೋಕಗಳನ್ನು ಅದಕ್ಕೆ ತಕ್ಕಂತೆ ಹೊಂದಿಸಿಕೊಂಡು ಪ್ರಕಟವಾದ ಪುಸ್ತಕ ಕನ್ನಡದಲ್ಲಿ ಇದೇ ಮೊದಲನೆಯದೆಂದು ಎದೆ ತಟ್ಟಿ ಹೇಳಬಹುದು. ಈ ಗದ್ಯ ಪದ್ಯ ಮಿಶ್ರಣದಿಂದಾಗಿ ಇದು ಪಾರಾಯಣಕ್ಕೆ ಅನುಕೂಲವಾಗಿದೆ.

ಸಂತ ಕಬೀರದಾಸರು ರಚಿಸಿದ ರಾಮಚರಿತಮಾನಸದ ಒಂದು ಭಾಗವಾದ 'ಶ್ರೀಹನುಮಾನ ಚಾಲೀಸ್' ಎಂಬ ಮಾರುತಿ ಸ್ತುತಿಯ 40 ಶ್ಲೋಕಗಳನ್ನು ಕುಕನೂರಿನ ಶ್ರೀ ನಿಡಗುಂದಿಯವರು ಕನ್ನಡಕ್ಕೆ ಅನುವಾದಿಸಿದ್ದು ಅದನ್ನೂ ಈ ಪುಸ್ತಕದಲ್ಲಿ ಸೇರಿಸಲಾಗಿದೆ. ಇದರಿಂದ ಪುಸ್ತಕದ ಮೌಲ್ಯ ಹೆಚ್ಚಾಗಿದೆ.

ಪುಸ್ತಕದಲ್ಲಿ ಅಲ್ಲಲ್ಲಿ ನುಸುಳಿಕೊಂಡಿರುವ ಕರಡು ದೋಷಗಳನ್ನು ಅನಿವಾರ್ಯವೆಂದು ಒಪ್ಪಿಕೊಳ್ಳಬೇಕಾಗುತ್ತದೆ.

ಹುಬ್ಬಳ್ಳಿ -

**-ಸುರೇಂದ್ರ ದಾನಿ**

# ಸುರಾಜ್ಯ ಪ್ರಾಪ್ತಿಗೆ ಸ್ಫೂರ್ತಿದಾಯಕ

ಮಹಾರಾಷ್ಟ್ರ ಕವಿ - ಗ. ದಿ. ಮಾಡಗೂಳಕರ ಇವರು ರಚಿಸಿದ ''ಗೀತರಾಮಾಯಣ'' ಎಂಬ ಮರಾಠಿ ಕಾವ್ಯವನ್ನು ನಮ್ಮ ''ಕಾಕಾ'' ಶ್ರೀ ರಾಮರಾವ ಜೋಶಿ ಇವರು ತುಂಬಾ ಪರಿಶ್ರಮ ವಹಿಸಿ ''ಶ್ರೀ ರಾಮಾಯಣ ನಿತ್ಯ ಚಿಂತನ'' ಎಂದು, ಚಿಕ್ಕಮಕ್ಕಳಿಗೂ ಸಹ ಸುಲಭವಾಗಿ ತಿಳಿಯುವಂತೆ ಗದ್ಯರೂಪದಲ್ಲಿ ಇದನ್ನ ಕನ್ನಡಿಸಿ ಕರ್ನಾಟಕದ ಆಸ್ತಿಕ ಸಮುದಾಯಕ್ಕೆ ತುಂಬಾ ಉಪಕಾರ ಮಾಡಿದ್ದಾರೆ. ಪುಸ್ತಕದ ಭಾಷೆ ತೀರ ಸರಳ, ಉತ್ತಮ ಶೈಲಿ, ಮುದ್ದಾದ ಮುದ್ರಣ. ಸುಮಾನು ಎರಡು ವರುಷ ಪರಿಶ್ರಮವಹಿಸಿ ಕನ್ನಡ ಜನತೆಗೆ ಅರ್ಪಿಸಿದ್ದು ನಿಜವಾಗಿಯೂ ಅಭಿನಂದನೀಯ. ಈ ಕಿರುಹೊತ್ತಿಗೆಯನ್ನು ಒಮ್ಮೆ ಓದಲು ತೆಗೆದುಕೊಂಡರೆ ಅದನ್ನು ಪೂರ್ತಿ ಮುಗಿಸುವವರೆಗೆ ಬಿಡುವದು ಸಾಧ್ಯವೇ ಇಲ್ಲ. ಇದು ಅಷ್ಟೊಂದು ಆಕರ್ಷಣೀಯವಾಗಿದೆ.

ಈ ಪುಸ್ತಕವನ್ನು ಓದುವಾಗ ಸಹ ಸಹಜವಾಗಿಯೇ ನಮ್ಮ ಇತ್ತೀಚಿನ ಸ್ವಾತಂತ್ರ್ಯ ಹೋರಾಟದ ನೆನಪುಗಳು ಬರುತ್ತವೆ. ಅಂದಿನ ವಾನರ ಸೇನೆಯನ್ನು ಇಂದಿನ ಹೋರಾಟದಲ್ಲಿ ಕಾಣಬಹುದು. ಶ್ರೀರಾಮಚಂದ್ರನು ವನವಾಸಕ್ಕೆ ಹೊರಡುವಾಗ ಆಪ್ತೇಷ್ಟರನ್ನು ಬಂಧು ಬಾಂಧವರನ್ನು ಅಗಲುವ ದೃಶ್ಯವು, ಸ್ವಾತಂತ್ರ್ಯ ಸಂಗ್ರಾಮದ ಸಮಯಕ್ಕೆ ಜೇಲಿಗೆ ಹೊರಟ ದೃಶ್ಯದಲ್ಲಿ ಕಾಣಬಹುದು. ಆಗ ಅವರು ನಾರು ಬಟ್ಟೆ ಉಟ್ಟು ಅಡವಿಗೆ ಹೊರಟರೆ ಈಗ ಜೇಲು ಬಟ್ಟೆ ತೊಡಬೇಕು - ಇನ್ನೊಂಧು ಸನ್ನಿವೇಶ - ಹನುಮಂತನು ಲಂಕಾಪಟ್ಟಣದಲ್ಲಿ ಸೀತಾದೇವಿಯನ್ನು ಹುಡುಕುವಾಗ ವೇಷ ಬದಲಿಸಿ ''ಭೂಗತ''ರಾಗಿಯೇ ಕಾರ್ಯ ಮಾಡಿದ್ದು. ಇಂತಹ ಎಷ್ಟೋ ಸನ್ನಿವೇಶಗಳು ಇದರಲ್ಲಿ ಬರುವದುಂಟು. ಒಂದು ವಿಧವಾಗಿ ರಾಮಾಯಣದಿಂದ ಸ್ವಾತಂತ್ರ್ಯ ಸಂಗ್ರಾಮವು ಸ್ಫೂರ್ತಿ ಪಡೆದಿದೆ ಎಂದರೆ ಅತಿಶಯೋಕ್ತಿ ಆಗಲಾರದು.

ಪ್ರಸ್ತುತದಲ್ಲಿ ನಾವು ಪಡೆದ ಸ್ವರಾಜ್ಯವು ಈಗ ''ದುರಾಜ್ಯ''ವಾಗಿದೆ. ಇದನ್ನು ''ಸುರಾಜ್ಯ'' ಮಾಡಬೇಕೆಂದು ನಾವೆಲ್ಲರೂ ಸೇರಿ ಪೂಜ್ಯ ಸದ್ಗುರು ಶ್ರೀ ಗಣಪತಿ ಮಹಾರಾಜ ಕನ್ನೂರ ಇವರ ಮಾರ್ಗದರ್ಶನದಲ್ಲಿ **ಭಾರತೀಯ ಸುರಾಜ್ಯ ಸಂಸ್ಥೆ** ಎಂಬ ಸಂಸ್ಥೆಯನ್ನು ಸ್ಥಾಪಿಸಿಕೊಂಡು ಹೋರಾಟ ನಡೆಸಿರುವೆವು. ಪ್ರಸ್ತುತದ ಶ್ರೀ ರಾಮಾಯಣ ನಿತ್ಯ ಚಿಂತನ ಈ

ಪುಟ್ಟ ಹೊತ್ತಿಗೆಯ ನಿತ್ಯ ಚಿಂತನದಿಂದ ನಿಶ್ಚಯವಾಗಿಯೂ ನಮ್ಮ ಈ ಹೋರಾಟದ ಕಾರ್ಯದಲ್ಲಿ ನಾವು ಸ್ಫೂರ್ತಿ ಪಡೆಯುವೆವು ಎಂದು ನಿಃಸಂಶಯವಾಗಿ ಹೇಳಬಹುದು. ಈ ಸಂದರ್ಭದಲ್ಲಿ ''ಪ್ರತಿಯೊಬ್ಬರೂ ಶ್ರದ್ಧೆ ಮತ್ತು ಆಸ್ಥೆಯಿಂದ ರಾಮಾಯಣದ ಚಿಂತನೆ ಮಾಡಿ ಅದರಲ್ಲಿ ತೋರಿಸಿರುವ ಮಾರ್ಗದಂತೆ ನಡೆದರೆ ಬಹುಬೇಗ ರಾಮರಾಜ್ಯ ಸ್ಥಾಪನೆ ಆಗುವದರಲ್ಲಿ ಸಂಶಯವಿಲ್ಲ'' ಎಂದು ಆತ್ಮ ವಿಶ್ವಾಸದಿಂದ ಮಹಾತ್ಮಾಜೀಯವರು ನುಡಿದುದನ್ನು ನಾವಿಲ್ಲಿ ಸ್ಮರಿಸಬಹುದು.

ಈ ಹೊತ್ತಿಗೆಯಲ್ಲಿ ದಶರಥನು ಮಕ್ಕಳನ್ನು ಪಡೆಯಲು ಅಶ್ವಮೇಧ ಯಾಗ ಮಾಡಿದನೆಂದಿದೆ. ಆದರೆ ಆತ ಮಾಡದ್ದು ಪುತ್ರಕಾಮೇಷ್ಟಿ ಯಾಗ ಎಂದು ನನ್ನ ತಿಳುವಳಿಕೆ.

ಒಟ್ಟಾರೆ ಈ ಕಿರುಹೊತ್ತಿಗೆ ತುಂಬಾ ಚನ್ನಾಗಿ ಮೂಡಿಬಂದಿದೆ. ಗ್ರಂಥಕರ್ತರ ಪರಿಶ್ರಮವು ಸಾರ್ಥಕವಾಯಿತೆಂದೇ ನನ್ನ ಅಭಿಪ್ರಾಯ.

ಧಾರವಾಡ
೧-೧೧-೯೭

**-ಶ್ರೀ ನರಸಿಂಹ ದಾಬಡೆ**
ಹಿರಿಯ ಸ್ವಾತಂತ್ರ್ಯ ಯೋಧರು



# ಪ್ರಸ್ತಾವನೆ

## ೧) ರಾಮಾಯಣದ ಹಿರಿಮೆ

ಭಾರತದ ದಶದಿಕ್ಕುಗಳಲಿ ಸಹಸ್ರಾರು ವರ್ಷಗಳಿಂದ ಬೆಳಗಿ ನಿಂತ ರಾಮಾಯಣ ಕುರಿತು ಯಾರು ವಿಶೇಷವಾಗಿ ಹೇಳಬೇಕಾದುದಿಲ್ಲ. ಜೀವನದಲ್ಲಿ ಶಾಂತಿ ಸ್ಫೂರ್ತಿ ಪಡೆಯಲೆಂದು ವಾಣಿ ಪಡೆಯಲೆಂದು ರಾಮಾಯಣವನ್ನು ನಿತ್ಯ ಪಠಿಸುವ ಸಹಸ್ರಾರು ಭಕ್ತರನ್ನು ನಾವು ಇಂದು ನೋಡುತ್ತಿದ್ದೇವೆ. ಭಿನ್ನ ಭಿನ್ನ ಭಾಷೆಯ ಕವಿಗಳು, ಸಾಹಿತಿಗಳು, ರಾಮಾಯಣಕ್ಕಾಗಿ ತಮ್ಮ ಪ್ರತಿಭೆಯ ಸರ್ವಸ್ವವನ್ನು ವಿನಿಯೋಗಿಸಿದ್ದಾರೆ. ಇದರಿಂದ ಭಾರತೀಯ ಸಾಹಿತ್ಯದಲ್ಲಿ ಶ್ರೀರಾಮನ ಸಾಹಿತ್ಯವು ಹಿಮಾಲಯದಂತೆ ಎತ್ತರವಾಗಿ ನಿಂತುದು ಕಂಡು ಬರುವುದು.

ರಾಮಾಯಣದಲ್ಲಿಯ ಪಾತ್ರಗಳಾದರೂ ಭಾರತೀಯರಿಗೆ ತುಂಬಾ ಆತ್ಮೀಯವಾದವುಗಳು ಪರಿಚಿತವಾದವುಗಳು. ಅವರು ಅನುಸರಿಸಿದ ರೀತಿ ನೀತಿ, ಅವರು ಪಡೆದ ಕೀರ್ತಿ, ಇವು ನಮಗೆ ತಿಳಿದೋ ತಿಳಿಯದೆಯೋ ನಮ್ಮ ಸಂಸ್ಕೃತಿಗೆ ರೂಪ ಕೊಡುತ್ತ ಬಂದಿರುವವು. ಅಜ್ಞರಿಂದ ಸುಜ್ಞರ ವರೆಗೂ ಮಂತ್ರ ಮುಗ್ಧಗೊಳಿಸುದ ಈ ರಾಮ ಕಥೆ ಕುರಿತು ಅದೆಷ್ಟು ಕವಿಗಳು, ಅದೆಷ್ಟು ಸಲ, ಅದೆಷ್ಟು ವಿಧವಾಗಿ ಹಾಡಿದರೂ ಕಡಿಮೆಯೇ.

ಅಂತೂ, ರಾಮನ ಕಥೆಯಲ್ಲಿ ತಾದಾತ್ಮ್ಯ ಹೊಂದುವವರು, ಅದರಲ್ಲಿ ಸಮರಸರಾಗುವವರು, ಅವರು ರಾಮರೇ ಆಗುವರು. ಅವರ ಕೀರ್ತಿ ದಿಗಂತದಲ್ಲಿ ಹರಡುವುದು. ಇಂದಿನ ಶತಮಾನದಲ್ಲಿ ''ರಾಮಾಯಣದರ್ಶನಂ'' ರಚಿಸಿದ ಕವಿ ಕುವೆಂಪು ಅವರನ್ನು ''ರಾಷ್ಟ್ರಕವಿ''ಯನ್ನಾಗಿಸಿತು. ಈ ರಾಮ ಕಥೆ. ಅದರಂತೆ ಪ್ರಸ್ತುತ ಮರಾಠೀ ಭಾಷೆಯಲ್ಲಿ ''ಗೀತರಾಮಾಯಣ'' ರಚಿಸಿದ ಕವಿ ಗ.ದಿ. ಮಾಡಗೂಳಕರ ಅವರನ್ನು ''ಆಧುನಿಕ ವಾಲ್ಮೀಕಿ''ಯನ್ನಾಗಿಸಿತು.

## ೨) ಗೀತ ರಾಮಾಯಣದ ಅಂತರಂಗ

ಈ ಗೀತೆಗಳನ್ನು ಪುಣೇ ಆಕಾಶವಾಣಿ ಕೇಂದ್ರದಿಂದ ನಾನು ಪ್ರಥಮತಃ ಕೇಳಿದ್ದು. ಒಳ್ಳೆ ಭಾವನೆದುಂಬಿದ ಗೀತೆಗಳಿವು ಎಂದಿಷ್ಟೇ ಆಗ ಅಂದುಕೊಂಡೆ. ಮುಂದೆ

ಅಲ್ಪಾವಧಿಯಲ್ಲಿಯೇ ಶ್ರೀರಾಮಪ್ರಭು ಕೃಪೆ ಮಾಡಿ, ಸಮಗ್ರ ಗ್ರಂಥ ಸಮೀಕ್ಷಿಸಲು ಅವಕಾಶ ಮಾಡಿಕೊಟ್ಟ. ಹುಬ್ಬಳ್ಳಿ ಕೇ ಎಮ್ ಸಿ ಆಸತ್ರೆಯಲ್ಲಿ, ಶಸ್ತ್ರಕ್ರಿಯೆ ನಿಮಿತ್ತವಾಗಿ ನಾಲ್ವತ್ತೈದು ದಿವಸಗಳ ದೀರ್ಘಕಾಲ, ಹಾಸಿಗೆಯಲ್ಲಿ ಕಡ್ಡಾಯವಾಗಿ ನನಗೆ ವಿಶ್ರಾಂತಿ ಪಡೆಯಬೇಕಾಗಿ ಬಂತು. ಆಗ ನಾನು, ಇನ್ನಾವ ಗ್ರಂಥಗಳಗೊಡೆವೆಗೂ ಹೋಗದೇ ಕೇವಲ ''ಗೀತ ರಾಮಾಯಣದ'' ಚಿಂತನೆಗೇ ಅನುವು ಮಾಡಿಕೊಂಡೆ. ಆಗ ಈ ಕಾವ್ಯದಲ್ಲಿಯ ಸರ್ವಾಂಗಸಂಪನ್ನತೆಯನ್ನು ಕಂಡು ಬೆರಗಾದೆ. ಚಿಂತನೆ ಮಾಡುತ್ತ ಹೊದಂತೆ ಅದರ ದಿವ್ಯತೆಯ ಅರಿವಾಯಿತು.

## ೩) ಗೀತರಾಮಾಯಣವು ಅವತರಿಸಿ ಬಂದದು

ಈಶ್ವರ ಅವತರಿಸಿ ಬರುವಂತೆ ''ಗೀತರಾಮಾಯಣವು'' ಯುಗಧರ್ಮಕ್ಕೆ ತಕ್ಕಂತೆ ಅವತರಿಸಿ ಬಂದು ನಮ್ಮೆಲ್ಲರ ಮಧ್ಯದಲ್ಲಿ ನಿಂತಿದೆ. ಇದು ಅವಶ್ಯವಾಗಿ ರಚಿಸಿದ ಕಾವ್ಯವೇ ಅಲ್ಲ. ಗೀತರಾಮಾಯಣವು ಅವರಿಂದ ತನ್ನನ್ನು ರಚಿಸಿಕೊಂಡಿತು. ಎಂದೇ ಹೇಳಬೇಕಾಗುವುದು. ಯಾಕೆಂದರೇ ಮುಂದಿನ ವಾರದ ಗೀತೆ ಯಾವುದು ಎಂಬುದು ಶ್ರೋತೃಗಳಿಗೆ ಯಾವರೀತಿಯಾಗಿ ಅಸ್ಪಷ್ಟವೋ, ಕವಿಗಳಿಗಾದರೂ ಅಷ್ಟೇ ಅಸ್ಪಷ್ಟ. **''ಕೇವಲ ಎರಡು ದಿನ ಮುಂಚಿತವಾಗಿ ಮಾತ್ರ ಗೀತರಾಮಾಯಣವು ನನ್ನನ್ನೂ ಬಡಿದೆಬ್ಬಿಸುತ್ತಿತ್ತು.'' ಎಂಬುದು ಕವಿಗಳ ಅನುಭವ. ಆದುದರಿಂದ ಈ ಕಾರ್ಯಕ್ಕೆ ಶ್ರೀರಾಮಪ್ರಭುವೇ ಕವಿಗಳಿಗೆ ಪ್ರೇರಣೆಯನ್ನಿತ್ತ** ಎಂದೇ ಹೇಳಬೇಕಾಗುವುದು.

**''ಗೀತರಾಮಾಯಣವನ್ನು ನಾನು ರಚಿಸಿರುವೆನೆಂದು ನನಗೆ ಅನಿಸುವುದಿಲ್ಲ. ಅದು ನನ್ನಿಂದ ಬರೆಯಿಸಲ್ಪಟ್ಟಿತು. ಬರೆಯಿಸಿದ ಆ ಶಕ್ತಿಗೆ ನಾನು ನನ್ನ ಮಟ್ಟಿಗೆ ''ರಾಮ'' ಎಂದು ಕರೆಯುತ್ತೇನೆ.** ಅಲ್ಲದೇ ಜನರು ನನ್ನನ್ನು ''ಆಧುನಿಕ ವಾಲ್ಮೀಕಿ'' ಎಂದು ಕರೆಯುವುದರಲ್ಲಿ ಜನತೆಯ ನಿಷ್ಠಾಪೂರ್ಣ ರಸಿಕತೆಯ ಅಂಶವೇ ಅದರಲ್ಲಿದೆ ಹೊರತು ಬೇರಿನ್ನೇನೂ ಇಲ್ಲ. ಎಂದು ಸ್ವತಃ ಕವಿಗಳೇ ನುಡಿದಿರುವರು.

ಅಂತೂ ಜನತಾ ಜನಾರ್ದನನಿಗೆ ಸಂಕ್ಷಿಪ್ತವಾಗಿ ಗೀತೆಗಳಲ್ಲಿ ರಾಮಾಯಣ ಬೇಕು ಎಂದು ಅನಿಸಿತು. ಇದಕ್ಕಾಗಿ ಆತ **ತಾಯಿಯ ಮೊಲೆಹಾಲಿನೊಂದಿಗೆ ''ರಾಮರಸಾಯನ''ವನ್ನು ಪಾನ ಮಾಡಿದ ಕವಿವರ್ಯ ಶ್ರೀ ಗ.ದಿ.ಮಾ ಅವರನ್ನುಆಯ್ದುಕೊಂಡ.**

ಹೀಗೆ ಇದೊಂದು ''ರಾಮಲೀಲೆಯೇ'' ಎಂದು ಭಾವಿಕರಿಗೆ ಅನಿಸುವುದು

ಸಹಜಿಕ. ಕವಿವರ್ಯರು ತಮಗೆ ಸ್ಫುರಿಸಿದಂತೆ ಗೀತೆಗಳನ್ನು ರಚಿಸುತ್ತ ಹೋದುದು, ರಚಿಸಿದ **ಗೀತೆಗಳ ಸೌಂದರ್ಯವನ್ನು ವಿಂಗಡಿಸಿ ಪ್ರಕಟಿಸಲು ಶ್ರೀಸುಧೀರ ಫಡಕೇಯಂತಹ ಒಬ್ಬ ಮಹಾನ್ ತಜ್ಞ ಸಂಗೀತ ನಿಯೋಜಕರ ಜೋಡು ದೊರೆತುದು, ಇವೆಲ್ಲ ''ರಾಮಲೀಲೆಗಳೇ''.**

''ರಾಮಾಯಣ ಸರ್ವರಿಗೂ ಪರಿಚಿತ. ಆದರ ''ಗೀತಾವೃತ್ತಿ'' ಈ ಗೀತ ರಾಮಯಣ'' ಇದಕ್ಕಾಗಿ ಇಷ್ಟೆಲ್ಲ ಪ್ರಸ್ತಾವನೆ ವರ್ಣನೆ ಯಾತಕ್ಕೆ?'' ಎಂದು ಜೀವನದ ಮಹತ್ವವನ್ನರಿಯದೇ ಯಾರಾದರೂ ಲಘುವಾಗಿಯೇ ಟೀಕಿಸಬಹುದು. ಆದರೆ ಗೀತೆಗಳ ಗುಂಪನ್ನು ಸೂಕ್ಷ್ಮವಾಗಿ ಪರಿಸೀಲಿಸಿ. ನೋಡುವ ರಸಿಕರಿಗೆ ಮಾತ್ರ ಈ ಕಾರ್ಯವು ಅಷ್ಟೇನು ಸುಲಭವಲ್ಲ, ಇದಕ್ಕಾಗಿ ಕವಿಗಳು ಪಟ್ಟಶ್ರಮ ಸಾಮನ್ಯವಾದುದಲ್ಲ ಎಂಬುದರ ಕಲ್ಪನೆ ಬರುವುದು. **ಇದು ರಾಮಾಯಣದ ಪುನರುಚ್ಚಾರಣೆಯಲ್ಲ. ಕವಿ ಗದಿ. ಮಾಅವರ ''ಸ್ವತಂತ್ರ ನಿರ್ಮಿತಿ''ಇದು ಎಂಬುದರ ಅರಿವಾಗುವದು. ಕವಿಗಳು ವಾಲ್ಮೀಕಿ ರಾಮಾಯಣದೊಳಗಿನ ಕೆಲವೇ ಸೌಂದರ್ಯದ ವಿಷಯಗಳನ್ನು ತಮ್ಮ ಸ್ವಂತ ಪ್ರತಿಭೆಯಿಂದ ಆಯ್ದುಕೊಂಡು, ಇಂದಿನ ಲಗುಬಗೆಯ ಜೀವನದಲ್ಲಿ ಸಾಮನ್ಯರಿಗೆ ಸಿಗುವ ಅಲ್ಪ ಬಿಡುವಿನಲ್ಲಿ ರಾಮಾಯಣದಂತಹ ಮಹಾನ್ ಗ್ರಂಥದ ರಸಾಸ್ವಾದವನ್ನು ಸವಿಯಲು ಅನುಕೂಲವಾಗುವಂತೆ ಕೇವಲ ಐವತ್ತಾರು ಗೀತೆಗಳಲ್ಲಿ ಶ್ರೀರಾಮಚರಿತೆಯನ್ನು ನಮ್ಮೆಲ್ಲರ ಮುಂದೆ ಮೂರ್ತಿಮಂತಾಗಿ ನಿಲ್ಲಿಸಿರುವರು.**

### ೪) ಗೀತೆಗಳಲ್ಲಿ ಪಾತ್ರಗಳ ವ್ಯಕ್ತಿ ಮತ್ವವು ಸೂರೆಗೊಂಡಿದೆ

ಇಲ್ಲಿಯ ಪಾತ್ರಗಳನ್ನು ಚಿತ್ರಿಸುವ ಕಾರ್ಯದಲ್ಲಿ ಕವಿಗಳ ಕುಶಲತೆಯೆಂದರೆ ಆದಿಕವಿ ವಾಲ್ಮೀಕಿ ಮಹರ್ಷಿಗಳು ನಿರ್ಮಿಸಿದ ಪಾತ್ರಗಳಿಗೆ, ಸನ್ನಿವೇಶಗಳಿಗೆ, ವಾತಾವರಣಕ್ಕೆ, ಇವರು ಎಲ್ಲಿಯೂ ಧಕ್ಕೆ ಹಚ್ಚಿಲ್ಲ. ಇಷ್ಟೇ ಅಲ್ಲ, ಮಾತೆ ಕೌಸಲ್ಯೆ, ಬಂಧು ಭರತ ಲಕ್ಷ್ಮಣರು, ದಾಸಭಕ್ತ ಹನುಮಾನ, ಮುಗ್ಧ ಭಕ್ತಳಾದ ಶಬರಿ, ನಿಷ್ಠಾವಂತ ಸನ್ಮಿತ್ರ ಸುಗ್ರೀವ, ರಾವಣನಿಗೆ ಸಕಾಲಕ್ಕೆ ಬುದ್ಧಿಯ ಮಾತು ಹೇಳಿ ನಂತರ ಬ್ರಾತೃಕಾರ್ಯಕ್ಕೆ ಮಡಿದ ಕುಂಭಕರ್ಣ, **ಈ ಎಲ್ಲ ಪಾತ್ರಗಳ ವ್ಯಕ್ತಿಮತ್ವವನ್ನು, ಆಯಾ ಪಾತ್ರಗಳ ಮುಖದಿಂದಲೇ ನುಡಿಸಿ, ಕವಿಗಳು ಅವರನ್ನು ಸಾಕ್ಷತ್ತಾಗಿ ನಮ್ಮ ಕಣ್ಮುಂದೆ ನಿಲ್ಲಿಸಿರುವರು. ಹೀಗೆ ಗೀತೆಗಳಲ್ಲಿ ಪಾತ್ರವರ್ಗ ವ್ಯಕ್ತಿ ಮತ್ವವು ಸೂರಿಗೊಂಡಿದ್ದನ್ನು ನೋಡಿದರೆ ಕವಿಗಳ ಸಾಮರ್ಥ್ಯ ಸಂಣದಲ್ಲಿ ಸಾಮನ್ಯವಾದುದೂ ಅಲ್ಲ.**

ಉದಾಹರಣೆಗೆ:- ಪ್ರಭು ಶ್ರೀರಾಮಚಂದ್ರನನ್ನು ನದಿಯ ಆಚೆಯ ದಂಡೆಗೆ

ದಾಟಿಸುವಾಗ ಗುಹಕನಾಡಿದುದು, ''ಸೇತು ಬಂಧನ'' ನಡೆದಾಗ ವಾನರರು ಹಾಡಿದುದು, ಇವುಗಳನ್ನು ಕೇಳಿದಾಗ, ಅವರ ಸಾಂಘಿಕ ವಕ್ತಮತ್ವವು, ಹಾಡಿನ ತಾಳದಲ್ಲಿ ನಮ್ಮ ಕಣ್ಮುಂದೆ ಕಟ್ಟುವುದು.

ಭರತನು ಚಿತ್ರಕೂಟವನ್ನೇರಿ ತಮ್ಮ ಕಡೆಗೆ ಬರುತ್ತಿದ್ದುದನ್ನು ಲಕ್ಷ್ಮಣ ವರ್ಣನೆ ಮಾಡಿ ಶ್ರೀರಾಮನಿಗೆ ಹೇಳಿದುದನ್ನು, ಮತ್ತು ರಾವಣ ಜಟಾಯಿ ಮಧ್ಯ ನಡೆದ ಸಮರದ ಪ್ರಸಂಗವನ್ನು ಶ್ರೀರಾಮ ವರ್ಣಿಸಿದುದನ್ನು ನೆನೆದಾಗ, ಈ ಸನ್ನಿವೇಶವನ್ನು ವರ್ಣಿಸುವ ಶಬ್ದಗಳಿಗೆ ಕ್ಯಾಮಾರದ ಶಕ್ತಿ ಬಂದಿದೆ ಎಂದು ಅನಿಸುವುದು. ಅಲ್ಲದೇ ಸುಂದರ ಕಲ್ಪನೆಗಳು, ಸುಭಾಷಿತಗಳು ಗೀತ ರಾಮಾಯಣದ ತುಂಬೆಲ್ಲ ಹರಡಿರುವು.

## ೫) ಶ್ರೋತೃಗಳ ಕಣ್ಮುಂದಿನ ಶ್ರೀರಾಮ ಸೀತೆಯರ ಚಿತ್ರವು ಕಾವ್ಯದ ಕೊನೆಯವರೆಗೂ ಮಸಾಕಗಿಲ್ಲ:-

ಈ ರೀತಿಯಾಗಿ ಕವಿಗಳು ಬಹು ಲೋಭನಿಯ್ಯವಾಗಿ, ವಿವಿಧ ಬಗೆಯ ಸೌಂದರ್ಯವನ್ನು ಕಾವ್ಯದಲ್ಲಿ ಪ್ರಕಟಿಸಿರುವರಾದರೂ, ಶ್ರೋತೃಗಳ ಕಣ್ಮುಂದಿನ ಶ್ರೀರಾಮಸೀತೆಯರ ಚಿತ್ರಗಳು ಮಸಕಾಗಂತೆ, ಶ್ರೋತೃಗಳ ಲಕ್ಷವನ್ನು ಮುಖ್ಯವಾಗಿ ಶ್ರೀಸೀತಾರಾಮರ ಮೇಲೆ ಬಂಧಿಸಿಡಲು ಅವರು ಮರೆತಿಲ್ಲ. ಉಭಯತರ ಗೀತೆಗಳಲ್ಲಿ ಅವರ ವಿವಿಧ ದರ್ಶನಗಳನ್ನು ಕವಿಗಳು ಮೂಡಿಸಿಸುವರು. ಉದಾಹರಣೆಗಳು-

ಚಿತ್ರಕೂಟದ ಮೇಲೆ ತಮ್ಮ ಕುಟೀರಕ್ಕೆ ಸ್ಥಾನ ಅಯ್ಕೆ ಮಾಡುವಾಗ **''ನಿಸರ್ಗ ರಸಜ್ಞ ರಾಮನ''**

ಭರತನನ್ನು ಮರಳಿ ಅಯೋಧ್ಯೆಗೆ ಕಳಿಸುವಾಗ ಜೀವನದ ಮಹಾಭಾಷ್ಯವನ್ನು ಹೇಳುವ **''ತತ್ವ ಚಿಂತಕ ರಾಮನ''** ರಣದಲ್ಲಿ ವಿವೇಕ ಬಿಟ್ಟು ವರ್ತಿಸಿದ ಸುಗ್ರೀವನಿಗೆ ರಣ ಸೀತೆಯ ಪಾಠ ಕೊಡುವ **''ರಣನೀತಿಜ್ಞ ರಾಮನ''**, ತಾನು ಸ್ವತಃ ಜಯಿಷ್ಣುವಿದ್ದರೂ ಯುದ್ಧವನ್ನು ತಡೆದು, ಕಲ್ಯಾಣವನ್ನು ಕಟ್ಟಿಕೊಳ್ಳಲು ಶತ್ರುವಿಗೆ ಸಂಧಿಯನ್ನು ಕೊಡುವ **''ರಾಜಧರ್ಮಿ ರಾಮನ''**

ವಿಜಯದ ನಂತರ ಸೀತಾದೇವಿಯನ್ನು ಸತ್ವಪರೀಕ್ಷೆಗೊಡ್ಡುವ **''ಕರ್ತವ್ಯ ನಿಷ್ಠಾ ರಾಮನ''**

**ಅಗ್ನಿದೇವರ ಸಾಕ್ಷ್ಯದ ನಂತರ ನೇತ್ರಗಳಲ್ಲಿ ಅಶ್ರುಗಳ ಹೊಳೆಯನ್ನೆ ಹಿಡಿದುಕೊಂಡಿದ್ದ ''ಕತಾರ್ಥಕ ರಾಮನ''**

ಹೀಗೆ ಶ್ರೀರಾಮನ ವಿವಿಧ ದರ್ಶನಗಳನ್ನು ಪಡೆಯುವಾಗ ಭಾವನೆಗಳು ಉದಾತ್ತವಾಗುತ್ತ ಹೋಗುವವು.

ಇನ್ನೂ ಪುಣ್ಯಶಾಲಿನಿ ಪತಿವ್ರತೆ ಸೀತಾಮಾತೆಯ ಮುಖದಿಂದ ಬಂದ ಗೀತೆಗಳಲ್ಲಿ ಆದ **ಭಾರತೀಯ ಸ್ತ್ರೀ ಹೃದಯದ ಮತ್ತು ಸತಿಧರ್ಮದ ಆವಿಷ್ಕಾರವು ಅವಿಸ್ಮರಣೀಯವಾಗಿದೆ.**

## ೬) ಸೀತೆಯ ಮುಗಿಯದ ದುಃಖದಲ್ಲಿ ಗೀತೆ ರಾಮಾಯಣದ ಮುಕ್ತಾಯ

ವಸ್ತುತಃ ಗೀತರಾಮಯಣವು ಪ್ರಭುರಾಮಚಂದ್ರನು ಸಿಂಹಾಸನ ಸ್ಥಾನದ ಮೇಲೆ ಮುಗಿಯುವುದು. ಆದರೆ ಕವಿಗಳ ಪ್ರತಿಭೆ ಮಾತ್ರ ಅಲ್ಲಿಯೇ ನಿಲ್ಲಲಿದು. ಅದು ಸಿಂಹಾಸನೋತ್ತಾವದ ಎಂಬುದನ್ನು ನಾಚಿಕೆಯಿಂದಅವಳು ನುಡಿಯಲಾರದವಳಾಗಿದ್ದರೂ, ಅವಳ ಬಾಯಿಂದ ಅದನ್ನು ನುಡಿಸಿತು. ವನವಿಹಾರದ ತನ್ನ ಬಯಕೆಗೆ ಪೂರ್ತಿಗಾಗಿ, ರಘುಕಾಯ ಅದೆಷ್ಟು ಬೇಗ ಅಣಿಮಾಡಿದನೆಂದು ಹರುಷದಿಂದ ವನಕ್ಕೆ ಬಂದ ಸೀತಾದೇವಿಗೆ ಕವಿಗಳ ಪ್ರತಿಭೆಯು ಪುನಃ ವನವಾಸವನ್ನೇ ಅವಳಿಗೆ ತಂದೊಡ್ಡಿ ಅವಳನ್ನು ಅಪಾರ ದುಖಃದಲ್ಲಿ ನೂಕಿತು. ಲಕ್ಷ್ಮಣ ನಿಜ ಸಂಗತಿಯನ್ನು ಅರುಹಿದ ಮೇಲೆ '' ಲಕ್ಷ್ಮಣಾ, ನಾನೆಲ್ಲಿ ಹೋಗಲೋ ಇನ್ನು, ಪತಿ ಚರಣಗಳನ್ನು ನಾನೆಲ್ಲಿ ಕಾಣಲೋ,'' ಎಂದು ಹಂಬಲಿಸಿ ಅಕ್ರೋಶ ಮಾಡಿದಾಗ ಲಕ್ಷ್ಮಣ ನಿರುತ್ತಃರನಾದ **ಕಾವ್ಯದ ಕೊನೆಯ ಹಂತದಲ್ಲಿ, ಸೀತಾದೇವಿಯ ಈ ತೀರದ ದುಃಖವು ನಮ್ಮ ಕರುಳನ್ನೇ ಕತ್ತರಿಸಿ ನಮ್ಮ ಅಂತಃವರಣವನ್ನು ಹೊಯ್ದಾಡ ಹಚ್ಚುವುದು. ಇದರಿಂದಾಗಿ ಗೀತರಾಮಾಯಣದಲ್ಲಿಯ ಕೆಲವೊಂದು ಗೀತೆಗಳಾದರೂ ರಾಮಯಣವಂತೂ ''ಜಗವಿರುವರೆಗೆ ಭಾಷೆ ಇರುವರೆಗೆ ನಿತ್ಯ ನೂತನ'' ಎಂದು ಹನುಮಾನ ಹೇಳಿಯೇ ಇದ್ದಾನೆ.**



# ಅನುವಾದಕರ ನಿವೇದನೆ

೧) ಅನುವಾದದಿಂದ ಭಾವೈಕ್ಯ ಸಾಧನೆ ಪ್ರತಿಯೊಂದು ಭಾಷೆಯ ಒಳ್ಳೇ ಕೃತಿಗಳು ಇತರ ಪ್ರಾದೇಶಿಕ ಭಾಷೆಗಳಿಗೆ ಅನುವಾದವಾಗಬೇಕು. ಇತರ ಭಾಷೆಗಳಿಂದ ಬಂದ ಇಂತಹ ಕೃತಿಗಳನ್ನು ಓದುವ ಬಗ್ಗೆ ಪ್ರತಿ ಭಾಷಿಕರಲ್ಲಿಯೂ ಕುತೂಹಲವು ಜಾಗೃತವಾಗಬೇಕು. ಇದೊಂದು ಭಾವೈಕ್ಯ ಸಾಧನೆಯ ಒಂದು ಸೇತುವೆ. ಇದನ್ನನುಸರಿಸಿ, ಆಧುನಿಕ ಮರಾಠೀ ಸಾಹಿತ್ಯದಲ್ಲಿ ಅತ್ಯಂತ ಲೋಕಪ್ರಿಯವಾದ **ಈ ಗೀತರಾಮಯಣ ಕಾವ್ಯವನ್ನು ಪ್ರೊ. ಶ್ರೀನಿವಾಸ ತೋಫಖಾನೆಯವರು ಕನ್ನಡ ಗೀತೆಗಳಲ್ಲಿ ಅನುವಾದಿಸಿ ಕನ್ನಡಿಗರಿಗೆಲ್ಲ ಮೂಲ ಗೀತರಾಮಾಯಣದ ಸ್ವಾದ ಸವಿಯಲು ಅವಕಾಶ ಮಾಡಿ ಕೊಟ್ಟಿದ್ದು ಸಾಮಾನ್ಯ ಮಾತಲ್ಲ. ಪ್ರೊ. ತೋಫಖಾನೆಯವರ ಕೃತಿ ತುಂಬಾ ಮೆಚ್ಚುವಂತಹದು, ಶ್ಲಾಘನೀಯ, ಪ್ರಶಂಸಾರ್ಹ. ಅವರು ತುಂಬಾ ಪ್ರತಿಭಾವಂತರು, ರಸಿಕರು ಎಂಬುದು ಅವರ ಈ ಪ್ರಯತ್ನದಿಂದ ಕಂಡು ಬರುವುದು''.**

**ಅವರ ಈ ಕೃತಿಯಿಂದ ನಾನು ತುಂಬಾ ಪ್ರಭಾವಿತನಾಗಿ ಮೂಲ ಮರಾಠೀ ಗೀತರಾಮಾಯಣಕ್ಕೆ ಸರಳ ಸುಲಭ ಕನ್ನಡ ಗದ್ಯರೂಪ ವಸ್ತ್ರತೊಡಿಸಿ ಕವಿಗಳು ಅದರಲ್ಲಿ ವ್ಯಕ್ತಮಾಡಿದ ಉದಾತ್ತ ಭಾವನೆಗಳ ಮತ್ತು ಅವರ ರಸಿಕತೆಯ ಕಲ್ಪನೆ ಕನ್ನಡಿಗರಿಗೆ ಮಾಡಿಕೊಡಬೇಕೆಂದು ತಿಳಿಸಿದೆ. ಕನ್ನಡಿಗರು ಈ ನನ್ನ ಕೃತಿಯನ್ನು ಸ್ವಾಗತಿಸಿದರೆ ನನ್ನ ಶ್ರಮ ಸಾರ್ಥಕ. ನಾನು ಕೃತಾರ್ಥನೆಂದು ಭಾವಿಸುವೆ.**

**೨) ರಾಮಾಯಾಣದ ಸಪ್ತಾಹ ಯೋಜನೆ:**-ಪ್ರಸುತ ಈ ಕನ್ನಡ ಗದ್ಯರೂಪ ಗೀತರಾಮಾಯಣದ ಸಪ್ತಾಹವನ್ನು ಆಚರಿಸುವ ಕ್ರಮವನ್ನು ಇಲ್ಲಿ ಕಲ್ಪಿಸಲಾಗಿದೆ. ಪ್ರತಿದಿನ ವಾಚನದ ಪ್ರಾರಂಭಕ್ಕೆ ಶ್ರೀರಾಮರಕ್ಷಾ ಧ್ಯಾನ ಶ್ಲೋಕವನ್ನು, ಮತ್ತು ವಾಚನದ ಕೊನೆಗೆ ಶ್ರೀರಾಮರಕ್ಷದ ಕೆಲಭಾಗವನ್ನು ಜೋಡಿಸಲಾಗಿದೆ. ಇದರಿಂದ ಸಪ್ತಾಹದ ಏಳು ದಿವಸಗಳಲ್ಲಿ ರಾಮಾಯಣದ ಜೊತೆಗೆ ನಿತ್ಯ ರಾಮರಕ್ಷಾಸ್ತೋತ್ರ ಪಠಣದ ಪುಣ್ಯ ಪಡೆಯಲು ಅವಕಾಶವಿದೆ. ಅಲ್ಲದೇ ಪ್ರತಿದಿನದ ಕಥಾಪ್ರಾರಂಭಕ್ಕೆ **ಪೂರ್ವಕಥಾನುವಾದ** ಎಂದು ಹಿಂದಿನ ಕಥೆಯ ಸಾರಾಂಶವನ್ನು ಕೊಡಲಾಗಿದೆ. ಮತ್ತು ಸಪ್ತಾಹದ ಕೊನೆಯ ದಿನ ಪಠಣ ಮಾಡಲು **''ವರದ ಹನುಮಾನ ಸ್ತೋತ್ರ''**ವನ್ನು ಯೋಜಿಸಲಾಗಿದೆ. ಇದು ಉತ್ತರ ಹಿಂದುಸ್ತಾನದಲ್ಲಿ

ಕೋಟಿ ಕೋಟಿ ಭಕ್ತರು ನಿತ್ಯ ಪಾರಾಯಣ ಮಾಡುತ್ತಿರುವಂಥ "**ಶ್ರೀ ಹನುಮಾನ್ ಚಾಲೀಸ್**" ಇದರ ಸುಂದರ ಕನ್ನಡ ಭಾವಾನುವಾದ ಶ್ರೀ ರಂ.ರಾ. ನಿಡಗುಂದೀಯವರಿಂದ ಆಗಿದೆ. ಸಪ್ತಾಹದ ಪ್ರಾರಂಭವು ರವಿವಾರ ಯೋಗ್ಯ ಎಂಬುದು ಹಲವರ ಅಭಿಪ್ರಾಯ. ಇದರಿಂದ ಶ್ರೀ ನಿಡಗುಂದಿಯವರ ಸೂಚನೆಯಂತೆ "**ವರದ ಹನುಮಾನ ಸ್ತೋತ್ರ**"ವು ತಾನಾಗಿಯೇ ಶನಿವಾರ ಬರುವದು. ನೀತಿಯನ್ನೆ ಧಿಕ್ಕರಿಸಿ ಅರ್ಧ ಪತನಕ್ಕಿಳಿದ ಇಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ನೀತಿ ಕಾವ್ಯಶ್ರೀರಾಮಯಣದ "ನಿತ್ಯ ಚಿಂತನ" ಪ್ರತಿ ಮನೆಯಲ್ಲಿಯೂ ಇಂದು ಅಗತ್ಯವಾಗಿ ನಡೆಯಬೇಕಾಗಿದೆ. ಇದಕ್ಕೆ ಅನುಸರಿಸಿ "ಶ್ರೀ ರಾಮಾಯಣ ನಿತ್ಯ ಚಿಂತನ" ಎಂದೇ ಈ ಗ್ರಂಥದ ಹೆಸರು.

**೩) ಕವಿಗಳ ಆಶೀರ್ವಾದ:-** ಈ ನನ್ನ ಕೃತಿಗೆ **ಮೂಲ ಕವಿ ಡಾ||ಮಾಡಗೊಳಕರ ಅವರ ಶುಭೇಚ್ಛೆಗಳು** ದೊರೆಯಲಿಲ್ಲವೆಂಬುದಕ್ಕೆ ವಿಷಾದಿಸಿದೆ. ಯಾಕೆಂದರೆ ಈ ಮೊದಲೇ ಅವರು ಶ್ರೀರಾಮಚಂದ್ರನ ಪಾದಾರವಿಂದಗಳಲ್ಲಿ ಲೀನರಾಗಿ ಹೋಗಿರುವರು ಪ್ರೊ. ತೋಫಖಾನೇ ಅವರಿಗೆ ಅವರು ಶುಭೇಚ್ಛೆಗಳನ್ನು ಕಳಿಸುವಾಗ "**ಮರಾಠಿ ಭಾಷೆಯಲ್ಲಿಯ ಗೀತರಾಮಾಯಣದಂತೆ ಲೋಕಪ್ರಿಯತೆಯಂತೆ ಕನ್ನಡ ಗೀತರಾಮಾಯಣದ್ದು ಆಗಲಿ**" ಎಂದು ಅವರು ಹರಸಿದ್ದರು. **ಇದನ್ನು ನೆನೆದು ನನ್ನ ಈ ಗ್ರಂಥಕ್ಕೂ ಅವರದು ಅದೇ ರೀತಿಯ ಆಶೀರ್ವಾದವೆಂದು ತಿಳಿದು ಸ್ವರ್ಗೀಯರಾದ ಆ ಆಧುನಿಕ ವಾಲ್ಮೀಕಿಗೆ ನನ್ನ ಪ್ರಣಾಮಗಳನ್ನು ಸಲ್ಲಿಸುವೆ.**

**೪) ಕೊನೆಯದಾಗಿ:-** ಪ್ರಭು ರಾಮಚಂದ್ರನ ಕೃಪೆಯಿಂದ ರಾಮಾಯಣದ ಈ ಪವಿತ್ರ ಕೃತಿ ಈಗ ಸಾಕರಗೊಂಡು ನನ್ನ ನೆಚ್ಚಿನ ಕನ್ನಡಿಗರೆದುರು ನಿಂತಿದೆ. **ಜೀವನದ ಮುಚ್ಚಂಜೆಯಲ್ಲಿ ಸಮಾಜಕ್ಕೆ ನನ್ನಿಂದ ಇದೊಂದು ಒಳ್ಳೇ ಸೇವೆ ಆಯಿತೆಂಬ ಆತ್ಮತೃಪ್ತಿ ನನಗಿದೆ.** ಅಲ್ಪಮಟ್ಟಿಗಾದರೂ ಸಮಾಜದ ಋಣದಿಂದ ಮುಕ್ತನಾದನೆಂಬ ಸಮಾಧಾನ ನನಗಾಗಿದೆ. "ಜಗ ಇರುವವರೆಗೆ ಶ್ರೀರಾಮ ಕಥೆ ನಿತ್ಯನೂತನ" ಎಂದು ಹನುಮಾನ ನುಡಿದಿರುವನು. ಇದರ ನಿತ್ಯ ಚಿಂತನದಿಂದ ಇಂದಿನ ಅಶಾಂತಮಯ ಅನೀತಿಮಯ ಜೀವನದಿಂದ ಸರ್ವರೂ ಮುಕ್ತರಾಗಿ, ಸರ್ವರಿಗೂ ಶಾಂತಿ - ಸ್ಫೂರ್ತಿಗಳು ಲಭಿಸುವಂತಾಗಲಿ ಎಂದು ಶ್ರೀರಾಮಚಂದ್ರನನ್ನು ಪ್ರಾರ್ಥಿಸುವೆ. ಮತ್ತು ವಿಶೇಷವಾಗಿ **ಶಾಲೆ, ಕಾಲೇಜು ವಿದ್ಯಾರ್ಥಿಗಳು ಯುವಕರು ಇವರಿಂದ ಈ ಪವಿತ್ರ ಗ್ರಂಥದ "ನಿತ್ಯ ಚಿಂತನ" ನಡೆದು, ತದನುಸಾರ ಅವರು ಅದನ್ನು ಅನುಸರಿಸಿ ನಡೆಯುವವರಾದರೆ ಅವರು ಒಳ್ಳೇ ನೀತಿವಂತರಾಗುವರಲ್ಲದೇ, ನೀತಿಯ ನೆಲಗಟ್ಟು ಸಮಾಜದಲ್ಲಿ ಪುನಃ ಪ್ರಸ್ಥಾಪಿಸಿದ ಶ್ರೇಯ ಅವರಿಗೆ.**

**೫) ಫಲಶ್ರುತಿ:-** ದೇವರು,ಸತ್ಯ, ಧರ್ಮ, ಪರೋಪಕಾರ, ಜನ್ಮಾಂತರ ಪುಣ್ಯ, ಮೊದಲಾದ ತತ್ವಗಳಲ್ಲಿ ನಂಬಿಗೆ ಭರವಸೆಗಳು ಇಂದು ಸಂಪೂರ್ಣ ಮಾಯಾವಾಗಿವೆ. ನೀತಿ ನೆಲವನಪ್ಪಿದೆ. ಸ್ವಪ್ರತಿಷ್ಠೆ ಸ್ವಾರ್ಥಗಳೇ ತಮ್ಮ ಸರ್ವಸ್ವವೆಂಬಂತೆ ತಾವು ಶ್ರೇಷ್ಠರೆಂದು ಹೇಳಿಕೊಳ್ಳುವವರೂ ಕೂಡ ಇಂದು ಸಮಾಜದಲ್ಲಿ ವರ್ತಿಸುತ್ತಿರುವುದನ್ನು ಇಂದು ನಾವು ನೋಡುತ್ತಿದ್ದೇವೆ. ಇಂತಹ ಇಂದಿನ ದುರ್ಮುಹೂರ್ತದಲ್ಲಿ ರಾಮಾಯಣದ ದಿವ್ಯ ಹಸ್ತವು ನಮ್ಮನ್ನು ಮೇಲೆತ್ತಬಲ್ಲದು. ರಾಮಾಯಣದ ಅಮರ ಸಂಗೀತವು ನಮ್ಮ ಇಂದಿನ ಶುಷ್ಕ ಜೀವನದಲ್ಲಿ ಅಮೃತ ಸಂಚಾರವಾಗುವಂತೆ ಮಾಡಬಲ್ಲದು.

ನಮ್ಮ **ಹೃದಯರೂಪ ಅಹಲ್ಯೆ**ಯನ್ನು ರಾಮಾಯಣವು ತನ್ನ ಪಾದಸ್ಪರ್ಶದಿಂದ ಉದ್ಧಾರ ಮಾಡಬಲ್ಲದು.

ನಮ್ಮ **ಸ್ವಾರ್ಥದ ದುಷ್ಟ ರಾಕ್ಷಸ** ವಿರಾಧ ರಾಕ್ಷಸನನ್ನು ಸಂಹರಿಸುವ ಸಾಮರ್ಥ್ಯ ರಾಮಾಯಣದಲ್ಲಿದೆ.

ನಮ್ಮಲ್ಲಿ ಹುದುಗಿರುವ **ಆಂಜನೇಯ ಶಕ್ತಿ**ಯನ್ನು ಎಚ್ಚರಿಸಿ ಹುರುದುಂಬಿಸಿ ಅದರಿಂದ ಲೋಕಹಿತ ಕಾರ್ಯಗಳನ್ನು ಕೈಗೆತ್ತಿಕೊಂಡು ಅವುಗಳನ್ನು ಯಶಸ್ವಿಯಾಗಿ ನಿರ್ವಹಿಸುವ ಸಾಹಸಕ್ಕೆ ರಾಮಾಯಣವು ಪ್ರಚೋದಿಸಬಲ್ಲದು.

**ಅವಿದ್ಯಾ ಅಹಂಕಾರ ರೂಪ ರಾವಣ**ನನ್ನು ವಧೆಮಾಡಿ ನಮ್ಮ ಜೀವನ ಸೀತಾದೇವಿಯು ತನ್ನ ಶ್ರೀರಾಮನನ್ನು ಸೇರುವಂತೆ ಮಾಡುವಲ್ಲಿ ಮಹಾಪ್ರತಾಪಿ ಇದು ಶ್ರೀರಾಮಾಯಣ.

ನಮ್ಮ ಬದುಕನ್ನು ಆಸುರೀ ಶಕ್ತಿಗಳ ಪಶಗಳಿಂದ ಬಿಡುಗಡೆ ಮಾಡಿ ದೈವೀಶಕ್ತಿಗಳ ಕಡೆಗೆ ಕೊಂಡೊಯ್ಯುವ ಶಕ್ತಿ ರಾಮಾಯಣದಲ್ಲಿದೆ.

ಕೊನೆಯಲ್ಲಿ ಶ್ರೀ ರಾಮಾಯಣವು **ವ್ಯಕ್ತಿ ವ್ಯಕ್ತಿಯಲ್ಲಿ ಶ್ರೀರಾಮಪಟ್ಟಾಭಿಷೇಕ** ಮಾಡಿ ಇಂದಿನ ನಿತ್ಯ ಸ್ಥಿತಿಯಲ್ಲಿಯೇ ಅತೀತವಾಗಿರುವ **"ರಾಮರಾಜ್ಯವು"** ಕ್ರಮ ಕ್ರಮೇಣ ಬರುವಂತೆ ಮಾಡಬಲ್ಲದು. ಈ ಭೂಮಿಯನ್ನೇ ವೈಕುಂಠವನ್ನಾಗಿ ಪರಿವರ್ತಿಸುವ ದೇವತಾ ಕಾರ್ಯದಲ್ಲಿ ದಿವ್ಯಶಿಲ್ಪಿಯಾಗಬಲ್ಲದು ಈ ಶ್ರೀ ರಾಮಾಯಣ.

**೬) ರಾಮಾಯಣದಲ್ಲಿ ತಾದಾತ್ಮ್ಯ:-** ದಾಂಡೇಲಿ ದಂಡಕಾರಣ್ಯದ ಒಂದು ಭಾಗ ವನವಾಸದಲ್ಲಿ ಶ್ರೀರಾಮನು ಸೀತಾ ಲಕ್ಷ್ಮಣರೊಂದಿಗೆ ಇಲ್ಲಿ ತಿರುಗಾಡಿದ, ವಸತಿ

ಮಾಡಿದ, ಪುಣ್ಯ ಪಾವನ ಸ್ಥಾನವೆಂದು ಹೇಳುತ್ತಾರೆ. ನಮ್ಮ ಇಲ್ಲಿಯ ಮನೆ ವನದಲ್ಲಿಯೇ ಒಂದು ಆಶ್ರಮವಿದ್ದಂತೆ ಇದೆ. ನನ್ನನ್ನು ಇಲ್ಲಿಗೆ ಬರಮಾಡಿಕೊಂಡು ಎಷ್ಟೋ ದಿವಸಗಳಿಂದ ಈ ಗೀತರಾಮಾಯಣಕ್ಕೆ ಕನ್ನಡ ಗದ್ಯರೂಪ ವಸ್ತ್ರತೊಡಿಸಬೇಕೆಂಬ ನನ್ನ ಮನೀಷೆಯನ್ನು ಈಡೇರಿಸಿಕೊಳ್ಳಲು, ಮತ್ತು ಅನುವಾದದ ನೆವದಿಂದ ತುಸು ಕಾಲವಾದರೂ ರಾಮಾಯಣದಲ್ಲಿ ತಾದಾತ್ಮ್ಯ ಹೊಂದಲು ಮತ್ತು ಅದರಲ್ಲಿ ಸಮರಸನಾಗಿ ನನ್ನನ್ನು ನಾನು ಮರೆಯಲು ನನ್ನ ಮಗ ಜಿ. ಸುರೇಶ ಸರ್ವಾವಿಧದಿಂದ ಅನುಕೂಲ ಮಾಡಿಕೊಟ್ಟ ಪವಿತ್ರವಾದ ಪಾವನ ಕೃತಿಯ ಶ್ರೇಯದಲ್ಲಿ ಅವನಿಗೇ.

ದಾಂಡೇಲಿ
ಶ್ರೀರಾಮ ನವಮಿ - ಗುರುವಾರ
೫-೪-೭೯

# ಕೃತಜ್ಞತೆಗಳು

ಪರಮ ಪೂಜ್ಯ ಸದ್ಗುರು ಶ್ರೀ ಗಣಪತಿ ಮಹಾರಾಜ ಕಸ್ನೂರ ಇವರು ನಿತ್ಯ - ನಿರ್ಗುಣ ಪರಬ್ರಹ್ಮನ ಅದ್ವೈತ ಪರಮಾನಂದದಲ್ಲಿ ಉಳಿಯುವವರು. ಆದರೆ ದೇಶದ ಅಧೋಗತಿಯನ್ನು ಕಣ್ಣಿನಿಂದ ನೋಡಿ ಸಹಿಸಲಾಗದೆ ಮೇಲೆದ್ದು ಹೊರಬಂದು ''ಸುರಾಜ್ಯಸಂಸ್ಥೆ'' ಎಂಬ ಸಂಸ್ಥೆಯನ್ನು ಕಟ್ಟಿಕೊಂಡು ಅನೇಕ ದೇಶಪ್ರೇಮಿ ಕಾರ್ಯಕರ್ತರೊಂದಿಗೆ ಪ್ರಸ್ತುತ ದೇಶದಲ್ಲಿಯ ಭ್ರಷ್ಟಾಚಾರ ನಿರ್ಮೂಲನಕ್ಕಾಗಿ ಅವ್ಯಾಹತವಾಗಿ ಶ್ರಮಿಸುತ್ತಿರುವದು, ದೇಶದ ಭಾಗ್ಯವೆಂದೇ ತಿಳಿಯಬೇಕು. **ಈ ನಿಮಿತ್ತವಾಗಿ ದಾಂಡೇಲಿಗೆ ಪೂಜ್ಯ ಮಹಾರಾಜರು ಆಗಮಿಸಿದಾಗ, ''ಸುರಾಜ್ಯಸಂಸ್ಥೆಯ'' ಕಾರ್ಯಕರ್ತರ ನಿತ್ಯ ಚಿಂತನಕ್ಕೆ ಈ ಗ್ರಂಥ ಯೋಗ್ಯ ಎಂಬುದನ್ನು ಗಮನಿಸಿ,** ರೂ.೧೫೦೦/- ಗಳ ಧನಸಹಾಯದೊಂದಿಗೆ ತಮ್ಮ ಸಂದೇಶವನ್ನಿತ್ತು ಆಶೀರ್ವಾದ ಮಾಡಿರುವರು. ಇದಕ್ಕಾಗಿ ನಾನು ಅವರಿಗೆ ಚಿರಋಣಿ ಆಗಿ ನನ್ನ ಕೃತಜ್ಞತೆಗಳನ್ನು ಅರ್ಪಿಸುವೆ.

ಶ್ರೀರಾಮಪ್ರಭುವಿನ ನಿಷ್ಠಾವಂತ ಅನನ್ಯ ಭಕ್ತರಾದ ಪ್ರೊ. ಕೆ.ಎಸ್. ನಾರಾಯಣಾಚಾರ್ಯರು ಶ್ರೀ ರಾಮಾಯಣ ನಿತ್ಯ ಚಿಂತನ ಒಳ್ಳೇ ಆಸ್ಥೆಯಿಂದ ಪರಿಶೀಲಿಸಿ ತಾವು ರಚಿಸಿದ **ಶ್ರೀ ರಾಮಾಯಣ ಪಾತ್ರ ಪ್ರಪಂಚ** ಮತ್ತು ಪ್ರಸ್ತುತದ **ರಾಮಾಯಣ** ಇವುಗಳಲ್ಲಿಯ ಏಕಾರ್ಥ ಏಕಾಶಯಗಳನ್ನು ಗುರುತಿಸಿ, ಮೆಚ್ಚಿ, ತಮ್ಮ ಮುನ್ನುಡಿಯ ರೇಶ್ಮೆವಸ್ತ್ರ ಅದಕ್ಕೆ ಹೊದಿಸಿ ಗ್ರಂಥಕ್ಕೆ ಒಂದು ಬಗೆಯ ಮೆರಗು ತಂದರು. ಇದಕ್ಕಾಗಿ ನಾನು ಅವರಿಗೆ ಚಿರಋಣಿಯಾಗಿ ಹೃತ್ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುವೆ.

ಆಧ್ಯಾತ್ಮಜೀವಿಗಳೂ ಒಳ್ಳೇ ಸಾಹಿತಿಗಳೂ ಆದ ನನ್ನ ಆತ್ಮೀಯ ದಿ. **ಗೋವಿಂದರಾವ ಚುಳಕಿ** ಇವರು ಗ್ರಂಥದ ಪ್ರಾರಂಭದಿಂದ ಕೊನೆಯವರೆಗೂ ಓದಿ ತುಂಬಾ ಮೆಚ್ಚಿ ಅನೇಕ ತಿದ್ದುಪಡಿಗಳನ್ನು ಮಾಡಕೊಟ್ಟರು. ಮತ್ತು ಅವಶ್ಯ ಮುದ್ರಣ ಆಗಬೇಕಾದ ಗ್ರಂಥವಿದು ಎಂದು ಮುದ್ರಣಕ್ಕೆ ಆಗ್ರಹಿಸಿದ್ದರು. ಇದಕ್ಕಾಗಿ ಕೃತಜ್ಞತೆಯಿಂದ ಅವರ ಉಪಕಾರ ಸ್ಮರಿಸುವೆ ಮತ್ತು ಸ್ವರ್ಗೀಯರಾದ ಅವರಿಗೆ ವಂದನೆಗಳನ್ನು ಸಲ್ಲಿಸುವೆ.

ಸಕಾಲಕ್ಕೆ ಅಂದವಾಗಿ ಗಣಕಯಂತ್ರದಲ್ಲಿ ವಿನ್ಯಾಸಮಾಡಿಕೊಟ್ಟ ಶ್ರೀಯುತ ಅರುಣ ದಾನಿಯವರಿಗೂ ಹಾಗೂ ಮುದ್ರಿಸಿದ ಶ್ರೀಯುತ ಸ್ವಾದಿ ಸಹೋದರರಿಗೂ ಮತ್ತು ಇತರೆ ಸಿಬ್ಬಂದಿವರ್ಗದವರಿಗೂ ತುಂಬು ಹೃದಯದಿಂದ ಕೃತಜ್ಞತಾ ಪೂರ್ವಕ ಆಶೀರ್ವದಿಸುತ್ತೇವೆ.

**ಪ್ರಕಾಶಕರು**

# ಅನುಕ್ರಮಣಿಕೆ

## ಶ್ರೀರಾಮಾಯಣ ನಿತ್ಯ ಚಿಂತನ ಸಪ್ತಾಹದ ೨ನೆಯ ದಿನ ಪ್ರಾರಂಭ

## ಶ್ರೀರಾಮಾಯಣ ನಿತ್ಯ ಚಿಂತನ ಸಪ್ತಾಹದ ೩ನೆಯ ದಿನ ಪ್ರಾರಂಭ

## ಶ್ರೀರಾಮಾಯಣ ನಿತ್ಯ ಚಿಂತನ ಸಪ್ತಾಹದ ೪ನೆಯ ದಿನ ಪ್ರಾರಂಭ

# ಶ್ರೀರಾಮಾಯಣ ನಿತ್ಯ ಚಿಂತನ ಸಪ್ತಾಹದ ೫ನೆಯ ದಿನ ಪ್ರಾರಂಭ



# ಶ್ರೀರಾಮಾಯಣ ನಿತ್ಯ ಚಿಂತನ ಸಪ್ತಾಹದ ೬ನೆಯ ದಿನ ಪ್ರಾರಂಭ

## ಶ್ರೀರಾಮಾಯಣ ನಿತ್ಯ ಚಿಂತನ ಸಪ್ತಾಹದ ೭ನೆಯ ದಿನ ಪ್ರಾರಂಭ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೬ | ೧೧ | ಯಜ್ಞನದ | ಯಜ್ಞದ |
| ೬ | ೨೨ | ದೀಕ್ಷೇತ | ದೀಕ್ಷಿತ |
| ೧೨ | ೪ | ಧಾನ್ಯಶ್ಲೋಕ | ಧ್ಯಾನಶ್ಲೋಕ |
| ೧೪ | ೧೪ | ಮಾವಾಸ್ತ್ರ | ಮಾಯಾಸ್ತ್ರ |
| ೨೪ | ೧೨ | ಕ್ಷುದ್ರವಾದ | ಕ್ಷುಬ್ಧವಾದ |
| ೨೫ | ೮ | ದುರ್ಬರ | ದುರ್ಧರ |
| ೨೫ | ೨೩ | ಭಾಷ್ಯೆವನ್ನು | ಭಾಷೆಯನ್ನು |
| ೨೯ | ೨೫ | ಜಿಲ್ಲಾಂ | ಜಿವ್ಹಾಂ |
| ೩೧ | ೪ | ಧಾನ್ಯಶ್ಲೋಕ | ಧ್ಯಾನಶ್ಲೋಕ |
| ೩೨ | ೧೫ | ರುಂಡಗಗಳನ್ನು | ರುಂಡಗಳನ್ನು |
| ೩೨ | ೨೦ | ಸಂತೃಪ್ತನಾಗಿದ್ದ | ಸಂತಪ್ತನಾಗಿದ್ದ |
| ೩೩ | ೨೪ | ವವಾಸದಲ್ಲಿಯೂ | ವನವಾಸದಲ್ಲಿಯೂ |
| ೩೮ | ೧೯ | ಸಂಗ್ರಸಿ | ಸಂಗ್ರಹಿಸಿ |
| ೪೨ | ೪ | ಮಾಯೆಯಯಲ್ಲ | ಮಾಯೆಯಲ್ಲಿ |
| ೪೨ | ೭ | ಸಾಂತ್ವಾನ | ಸಾಂತ್ವನ |
| ೪೫ | ೮ | ಬಂದಾದಾರೂ | ಬಂದಾದರೂ |
| ೪೭ | ೪ | ಧಾನ್ಯಶ್ಲೋಕ | ಧ್ಯಾನಶ್ಲೋಕ |
| ೪೭ | ೧೫ | ನಿಷಾಧಿಪತಿ | ನಿಷಾದಾಧಿಪತಿ |
| ೪೮ | ೧೫ | ಭರತವನ್ನು | ಭರತನನ್ನು |
| ೫೫ | ೧೯ | ತ್ರಿಶರ | ತ್ರಿಶಿರ |
| ೫೬ | ೬ | ತ್ರಿಶರ | ತ್ರಿಶಿರ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೬೦ | ೧೪ | ಸಂದೇಹವಾಗಿ | ನಿಃಸಂದೇಹವಾಗಿ |
| ೬೨ | ೧೨ | ಪ್ರಲವ | ಪಲ್ಲವ |
| ೬೬ | ೪ | ಧ್ಯಾನ್ಯಶ್ಲೋಕ | ಧ್ಯಾನಶ್ಲೋಕ |
| ೬೬ | ೧೩ | ಖರಧೂಷಣ | ಖರದೂಷಣ |
| ೬೮ | ೧೧ | ಭಗಿಸಿದೆ | ಭಂಗಿಸಿದೆ |
| ೭೨ | ೧೧ | ಅಂಗ | ಅಂಗದ |
| ೭೨ | ೨೪ | ಮೃತ್ರಪ್ರಾಯ | ಮೃತಪ್ರಾಯ |
| ೭೫ | ೨ | ಆಂಜನೆಯ ಆತ್ಮಜನಿವ | ಅಂಜನೆಯ ಆತ್ಮನಿವ |
| ೭೫ | ೨೪ | ಸ್ಫುರಿತ | ಸ್ಫುರಿಸ |
| ೮೦ | ೨ | ಮಾಹತಿಯನ್ನು | ಮಹತಿಯನ್ನು |
| ೮೩ | ೪ | ಧ್ಯಾನ್ಯಶ್ಲೋಕ | ಧ್ಯಾನಶ್ಲೋಕ |
| ೮೩ | ೨೭ | ರಾಜದೂತನೇ | ರಾಮದೂತನೇ |
| ೮೩ | ೮ | ಕೃತು | ಕ್ರತು |
| ೯೧ | ೩ | ದಮನವಾದ | ದಮನನಾದ |
| ೯೨ | ೨೫ | ಸಂಪದನೊಂದಿಗೆ | ಸಂಪದದೊಂದಿಗೆ |
| ೯೪ | ೧೬ | ಕಾಲನ | ಕಾಲನಲ್ಲಿ |
| ೯೫ | ೧೯ | ಬೋಧರ | ಬೋಧಕರ |
| ೯೬ | ೨೮ | ಬಾಣದೃಷ್ಟಿ | ಬಾಣವೃಷ್ಟಿ |
| ೯೮ | ೧೯ | ನಿನ್ನ | ನನ್ನ |
| ೧೦೨ | ೪ | ಧ್ಯಾನ್ಯಶ್ಲೋಕ | ಧ್ಯಾನಶ್ಲೋಕ |
| ೧೦೩ | ೧೪ | ಬೋಧರ | ಬೋಧಕರ |
| ೧೦೩ | ೨೦ | ಮೈಥಿಲಿಯ | ಮಾತಲಿಯ |
| ೧೦೩ | ೨೮ | ಕ್ರಿಯಾದಿಗಳನ್ನು | ಕ್ರಿಯಾದಿಗಳು |
| ೧೦೬ | ೫ | ಲಕ್ಷಾಣಾದಿ | ಲಕ್ಷ್ಮಣಾದಿ |

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೦೬ | ೧೮ | ನಿಕ್ಷಳಂಕ | ನಿಷ್ಕಳಂ |
| ೧೦೭ | ೮ | ರಾಜೀಸು | ರಂಜಿಸ |
| ೧೦೭ | ೨೨ | ಗ್ರಹಸ್ವಾಮಿನಿ | ಗೃಹಸ್ವಾ |
| ೧೦೯ | ೨೬ | ಸೀತೆಯಿಂದ | ಸೀತೆಯ |
| ೧೧೨ | ೨೨ | ಗ್ರಹಸ್ವಾ | ಗೃಹಸ್ವಾ |
| ೧೧೯ | ೯ | ಹಾಕಲು | ಹೋಗ |



# ಗ್ರಂಥ ಮುದ್ರಣಕ್ಕೆ ಧನ ಸಹಾಯ ಮಾಡಿದ ಮಹನೀಯರು

## ಸಂಸ್ಥೆಗಳು

| | |
|---|---|
| ಶಾಂತಿ ಕುಟೀರ, ಕನ್ನೂರು | ೧೫೦೧.೦೦ |
| ಶ್ರೀ ರಾಘವೇಂದ್ರ ಸ್ವಾಮಿ ಮಠ, ದಾಂಡೇಲಿ | ೧೦೦೧.೦೦ |
| ಶ್ರೀ ಶಂಕರ ತತ್ವಾನ್ವೇಷಣ ಮಂಡಳ, ದಾಂಡೇಲಿ | ೧೦೦೧.೦೦ |
| ಎಂ.ಎಸ್.ಎಸ್.ಆರ್. ಹೈಸ್ಕೂಲು, ಬೈಲಹೊಂಗಲ | ೫೬೦.೦೦ |
| ಚೈತನ್ಯಾಶ್ರಮ, ಹೆಬ್ಬಳ್ಳಿ | ೫೦೧.೦೦ |
| ಶ್ರೀ ಶಂಕರಾಚಾರ್ಯ ಸಂಸ್ಕೃತ ಪಾಠ ಶಾಲಾ, ಧಾರವಾಡ | ೫೦೧.೦೦ |
| ನ್ಯೂ ಇಂಗ್ಲೀಶ ಸ್ಕೂಲ, ಹುಬ್ಬಳ್ಳಿ | ೨೭೫.೦೦ |
| ಆರ್ಷ ವಿದ್ಯಾ ಪೀಠ, ಧಾರವಾಡ | ೧೦೧.೦೦ |
| ಅಜರೇಕರ ಘಕ ವಾರಕರಿ ಸಂತ ಮಂಡಳಿ, ಮುನವಳ್ಳಿ | ೧೦೧.೦೦ |
| ಆದರ್ಶ ವಿದ್ಯಾಲಯ, ಅಂಬೇವಾಡಿ | ೧೦೧.೦೦ |

| ಸ್ಮೃತಿ | ಸ್ಮರಿಸುವವರು | |
|---|---|---|
| ತಾಯಿ ದಿ. ರಮಾಬಾಯಿ | ಡಾ. ಎಂ.ವಿ.ಕುಲಕರ್ಣಿ, ಧಾರವಾಡ | ೧೦೦೧.೦೦ |
| ತಂದೆ ಚಿದಂಬರಾನಂದರು | ಅರವಿಂದ ಕುಲಕರ್ಣಿ, ಧಾರವಾಡ | ೧೦೦೧.೦೦ |
| ತಂದೆ ಆಬಾಭಟ್ಟರು | ಪ್ರೊ. ವಿ.ಎ.ಜೋಶಿ, ಅಂಕೋಲಾ | ೧೦೦೧.೦೦ |
| ತಾಯಿ ದಿ. ಮಂಗಲಾ | ಸಮೀರ ಸ್ಕ್ರೀನ್ಸ್, ಬೆಳಗಾಂವ | ೫೦೧.೦೦ |
| ತಂದೆ ದಿ.ಶ್ರೀನಿವಾಸಭಟ್ಟರು | ವಿ.ಎಸ್.ಜೋಶಿ, ಹುಬ್ಬಳ್ಳಿ | ೫೦೧.೦೦ |
| ತಾಯಿ ದಿ. ತಾರಾಬಾಯಿ | ಆರ್.ಎಸ್.ಜೋಶಿ, ಹುಬ್ಬಳ್ಳಿ | ೫೦೧.೦೦ |
| ತಂದೆ ದಿ. ಕೃಷ್ಣಶಾಸ್ತ್ರಿಗಳು | ಸಿ.ಕೆ.ಜೋಶಿ, ಪಣಜಿ | ೫೦೧.೦೦ |
| ತಂದೆ ದಿ. ಪಾಂಡುರಂಗ | ಆರ್. ಪಿ.ಜೋಶಿ, ಪಣಜಿ | ೫೦೧.೦೦ |
| ತಂದೆ ದಿ. ರಾಮಚಂದ್ರ | ಶ್ರೀಕಾಂತ ಜೋಶಿ, ಮುನವಳ್ಳಿ | ೫೦೧.೦೦ |
| ತಾಯಿ ದಿ. ಶಾಂತಾಬಾಯಿ | ಡಿ.ವಿ.ಕುಲಕರ್ಣಿ, ಕಟಕೋಳ | ೫೦೧.೦೦ |
| ತಂದೆ ದಿ. ಗೋವಿಂದರಾವ | ಹೆಚ್.ಜಿ.ನಾಗೇಂದ್ರ, ಕೆ.ಪಿ.ಸಿ. ಅಂಬೇವಾಡಿ | ೨೫೧.೦೦ |
| ತಂದೆ ದಿ. ವಾಮನರಾವ | ಗಜಾನನ ವ ಶಶಿಕಾಂತ ಜೋಶಿ, ಧಾರವಾಡ | ೨೫೧.೦೦ |
| ತಂದೆ ದಿ. ವೆಂಕಣ್ಣ ಭಟ್ಟರು | ದತ್ತಾತ್ರಯ ಜೋಶಿ, ಧಾರವಾಡ | ೨೫೧.೦೦ |
| ತಂದೆ ದಿ. ಶ್ರೀಪಾದ ಶಾಸ್ತ್ರಿ | ವಿದ್ಯಾರಣ್ಯ ಜಡೇ ಕೋಗಿಲಬನ, ದಾಂಡೇಲಿ | ೨೫೧.೦೦ |

## ರೂ. ೩೦೦೧/-

ಶ್ರೀ ಜಿ.ಆರ್.ದೇಶಪಾಂಡೆ, ಕೆ.ಪಿ.ಸಿ.,ಅಂಬೇವಾಡಿ

## ರೂ. ೧೦೦೧/-

ಶ್ರೀ ಆರ್.ಎಸ್.ಕುಲಕರ್ಣಿ, ಧಾರವಾಡ
ಶ್ರೀಮತಿ ಚಂಪಾಬಾಯಿ ಎನ್. ದೇಶಪಾಂಡೆ, ಕುನ್ನಾಳ
ಶ್ರೀ ರಮೇಶ ಪದಕಿ, ಸವದತ್ತಿ
ಶ್ರೀ ಎಂ.ಎ.ಕುಲಕರ್ಣಿ, ದಾಂಡೇಲಿ
ಶ್ರೀ ವಿ.ಎನ್.ಸ್ವಾದಿ, ದಾಂಡೇಲಿ
ಶ್ರೀ ಆರ್.ವಿ.ಕಾಮತ, ದಾಂಡೇಲಿ
ಶ್ರೀ ಬೋಧರಾಚಾರ್ಯ ಅ. ಹರಪನಹಳ್ಳಿ, ಮುನವಳ್ಳಿ
ಶ್ರೀ ಡಾ.ಎಸ್.ಆರ್.ಜೋಶಿ, ಧಾರವಾಡ
ಶ್ರೀ ಗುರುನಾಥ ಭಟ್ಟ ಶ್ರೀನಿವಾಸ ಭಟ್ಟ ನಾಡಜೋಶಿ, ಹುಬ್ಬಳ್ಳಿ
ಶ್ರೀ ಕೃಷ್ಣಾಜಿ ಗೋಪಾಲರಾವ ಖಾಸನೀಸ, ಬಾಗಲಕೋಟ
ಶ್ರೀ ಎಸ್.ಆರ್.ಜೋಶಿ, ಕೆ.ಪಿ.ಸಿ., ಅಂಬೇವಾಡಿ

## ರೂ. ೫೧೫/-

ಪ್ರೊ. ಸಿ.ಎನ್.ದೇಶಪಾಂಡೆ, ಧಾರವಾಡ
ಶ್ರೀ ಎ.ಬಿ.ಕುಲಕರ್ಣಿ, ಹೊಸಪೇಟೆ

## ರೂ. ೫೦೧/-

ಶ್ರೀ ಚಂದ್ರಕಾಂತ ಸೊಲಾಪೂರಕರ, ವಿಜಾಪೂರ
ಶ್ರೀ ಬಿ.ಟಿ.ಕುಲಕರ್ಣಿ, ಮುಂಬಯಿ
ಶ್ರೀ ಎ.ಎನ್.ಮಾಡಧೂಳಕರ, ದಾಂಡೇಲಿ
ಶ್ರೀ ಗಂಗಾಧರ ಸಿದ್ರಾಮಪ್ಪ ಝುಂಗಾಡೆ, ಅಂಬೇವಾಡಿ
ಶ್ರೀಮತಿ ರಂಜೂ ಸುರೇಶ ಕುಂಕಳೀಕರ, ಪಣಜಿ
ಶ್ರೀಮತಿ ಶೋಭಾ ಬಿ. ಚಿನಗುಡಿ, ಬೀಳಗಿ
ಶ್ರೀಮತಿ ಮಂಗಲಾ ವಿ. ಜಷಳಾಪೂರ, ಮುಂಬಯಿ
ಶ್ರೀಮತಿ ಕುಂಜೂ ಸಿರಿಧರ, ಕ್ಯಾಲಿಫೋರ್ನಿಯಾ, ಅಮೆರಿಕಾ
ಕು. ಕಿರಣ ಆನಂದ ವೈದ್ಯ, ನ್ಯೂ ಜೆರ್ಸಿ, ಅಮೆರಿಕಾ
ಶ್ರೀ ಡಾ. ವಿ.ಎಸ್.ದೀಕ್ಷಿತ, ಧಾರವಾಡ
ಶ್ರೀ ಆರ್.ಎಸ್.ಜೋಶಿ, ಹುಬ್ಬಳ್ಳಿ

ಶ್ರೀ ವಿ.ಎಸ್.ಜೋಶಿ, ಹುಬ್ಬಳ್ಳಿ
ಶ್ರೀ ಎಸ್. ನಾಗರಾಜು, ಕೆ.ಪಿ.ಸಿ., ಅಂಬಿಕಾನಗರ
ಶ್ರೀ ಎ.ವಿ. ಆಚಾರ್ಯ, ಹುಬ್ಬಳ್ಳಿ
ಶ್ರೀ ಆರ್.ಬಿ. ಕುಲಕರ್ಣಿ, ಬೆಳಗಾಂವ
ಶ್ರೀ ನಾಗೇಶ ತಡಸ, ನ್ಯಾಯವಾದಿ, ಹುಬ್ಬಳ್ಳಿ
ಶ್ರೀಮತಿ ಶಾರದಾ ಗಂ. ಸುಗೂರ, ಹುಬ್ಬಳ್ಳಿ
ಶ್ರೀಮತಿ ಬಾರತಿ ಶಂ. ಜೋಶಿ, ಧಾರವಾಡ
ಶ್ರೀಮತಿ ಸೀತಾಬಾಯಿ ರಾ. ಜೋಶಿ, ಅಂಬೇವಾಡಿ
ಶ್ರೀಮತಿ ಮಂಜುಳಾ ಸು. ಜೋಶಿ, ಅಂಬೇವಾಡಿ
ಶ್ರೀ ಆರ್.ಬಿ.ಕಾಡದೇ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಎಸ್.ಕೆ.ಕುಲಕರ್ಣಿ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಆರ್. ವಿ.ಕುಲಕರ್ಣಿ, ಕಟಕೋಳ, ಬೈಲಹೊಂಗಲ
ಶ್ರೀ ಡಾ. ಕರ್ಕಿ, ದಾಂಡೇಲಿ
ಶ್ರೀ ಡಾ. ಭಟ್ಟ, ದಾಂಡೇಲಿ

**ರೂ.೨೫೦/-**

ಶ್ರೀ ಹಳದಂಕರ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಹ.ಬ.ಪ. ಪದ್ಮರಾಜ ಬೋಗಾರ, ಬೈಲಹೊಂಗಲ
ಶ್ರೀ ಮೋಹನರಾವ, ಸಂತೋಷ ಕೋಲ್ಡ್ರಿಂಕ್ಸ್, ದಾಂಡೇಲಿ
ಶ್ರೀ ಸತೀಶ ಕಾಮತ, ದಾಂಡೇಲಿ
ಶ್ರೀ ಎಸ್. ಸುಧೀಂದ್ರ, ಕೆ.ಪಿ.ಸಿ., ಅಂಬೇವಾಡಿ

**ರೂ. ೨೦೨/-**

ಶ್ರೀ ಎಸ್.ವಿ. ರಾಮಕೃಷ್ಣ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಎ. ಪ್ರಭಾಕರ ಭಟ್ಟ, ಕೆ.ಪಿ.ಸಿ., ಅಂಬೇವಾಡಿ

**ರೂ. ೨೦೦/-**

ಶ್ರೀ ಎನ್.ಟಿ. ದಾಬಡೆ, ಧಾರವಾಡ
ಪ್ರಾಚಾರ್ಯ ನಾಗರಾಜ, ದಾಂಡೇಲಿ
ಶ್ರೀ ಶಾಮರಾವ ಕುಲಕರ್ಣಿ, ಸಿಂದಗಿ
ಶ್ರೀ ರಾಮಮೂರ್ತಿ, ಬಸವನಗುಡಿ, ಬೆಂಗಳೂರು
ಶ್ರೀ ಎಂ.ಎಂ. ಗೋಣಿ, ನವನಗರ, ಹುಬ್ಬಳ್ಳಿ
ಶ್ರೀ ಎಸ್.ವಿ. ರಂಗರಾವ, ಕೆ.ಪಿ.ಸಿ., ಅಂಬೇವಾಡಿ

ಶ್ರೀ ಎನ್.ಬಿ. ಕುಲಕರ್ಣಿ, ವಿಜಯನಗರ, ಹುಬ್ಬಳ್ಳಿ
ಶ್ರೀ ಹೆಚ್.ಎಸ್. ಬೇವಿನಗಿಡದ, ಎಲ್.ಐ.ಸಿ., ದಾಂಡೇಲಿ
ಶ್ರೀ ಸಾಯಿನಾಥ ಹೆಚ್. ಬೇವಿನಗಿಡದ, ಎಲ್.ಐ.ಸಿ., ದಾಂಡೇಲಿ
ಶ್ರೀ ಎಸ್.ಕೆ. ನಿವರಿಗಿ, ಕೆ.ಎಸ್.ಆರ್.ಟಿ.ಸಿ., ಹಳಿಯಾಳ
ಶ್ರೀ ಶಿವರಾಜ ಎಂ. ಗೋಣಿ, ದಾಂಡೇಲಿ
ಶ್ರೀ ಎಚ್.ವಿ. ಸುಂದರ ಪ್ರಸಾದ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಪ್ರಜ್ವಲ ಕುಮಾರ ಅಂಬೇಡಕರ, ದಾಂಡೇಲಿ
ಶ್ರೀ ಕೆ.ಎನ್.ಮಾಡಧೂಳಕರ, ದಾಂಡೇಲಿ
ಶ್ರೀ ಬಕ್ತರು (ದಾ.ಸುಧಾಕರ ಪೈ), ದಾಂಡೇಲಿ
ಶ್ರೀ ಜಿ.ಎ.ಭಟ್ಟ, ಧಾರವಾಡ
ಶ್ರೀ ಎನ್.ಎ.ಭಟ್ಟ, ಧಾರವಾಡ
ಶ್ರೀ ಎ.ಎಸ್. ಸ್ವಾದಿ, ಸ್ವರ್ಗವಲ್ಲಿ
ಶ್ರೀ ಎಚ್.ಜಿ.ಪಾಟೀಲ, ಕೆ.ಪಿ.ಸಿ., ಅಂಬೇವಾಡಿ
ಶ್ರೀಮತಿ ಲೀಲಾ ಅಡಿಗ, ದಾಂಡೇಲಿ

ರೂ. ೧೫೧/-

ಶ್ರೀ ಎ. ಜಗನ್ನಾಥ, ಹಾಸನ
ಶ್ರೀ ಚಿನ್ನಮರಿ, ಕೆ.ಪಿ.ಸಿ., ಅಂಬೇವಾಡಿ
ಕುಮಾರ ಗುರುರಾಜ ಗೋಪಾಲ ಖಾಸನೀಸ, ಧಾರವಾಡ
ಶ್ರೀ ಅಪರಂಜಿ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಸಿ.ಹೆಚ್. ಗಂಗಾಧರ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಪಿ.ವಿ.ಮರಿಗೌಡರ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಬಿ.ಎ.ಕ್ಯಾಶಿಗೇರ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಎನ್.ಎಸ್. ಹೇಮಗಿರಿ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಎನ್.ಆರ್. ಯಡ್ಡಿ, ಕೆ.ಪಿ.ಸಿ., ಅಂಬೇವಾಡಿ
ಶ್ರೀಮತಿ ಜಿ.ಎಸ್. ಗಾಯತ್ರಿ, ಪ್ರಿನ್ಸಿಪಾಲ, ದಾಂಡೇಲಿ
ಶ್ರೀ ಭಾರತಿರಾಮ ಕುಲಕರ್ಣಿ, ದಾಂಡೇಲಿ
ಆರ್.ಎಲ್. ಲಕ್ಷ್ಮೇಶ್ವರ, ದಾಂಡೇಲಿ

ರೂ. ೧೦೦/-

ಶ್ರೀ ಆರ್.ಜಿ. ಪ್ರಭು, ಕೆ.ಪಿ.ಸಿ., ಕದ್ರಾ
ಶ್ರೀ ಎಮ್.ಎನ್. ಪಟ್ಟಾಭಿ, ಮೈಸೂರು

ರೂ. ೧೦೧/-

ಶ್ರೀ ಬಿ.ಟಿ.ಭಟ್ಟ, ಕೆ.ಪಿ.ಸಿ., ದಾಂಡೇಲಿ
ಶ್ರೀ ವಿಠ್ಠಲರಾವ ಕೌಜಲಗಿ, ವಿಜಾಪುರ
ಶ್ರೀಮತಿ ಗಿರಿಜಾ ಭಾಲಚಂದ್ರ, ಕಮಲಾಪುರ, ವಿಜಾಪುರ
ಶ್ರೀಮತಿ ಶ್ರೀದೇವಿ ಬಾಳಾಸಾಹೇಬ ಕಮಲಾಪುರ, ವಿಜಾಪುರ
ಶ್ರೀಮತಿ ವೀಣಾಬಾಯಿ ರಾಘವೇಂದ್ರರಾವ ಶಿರಹಟ್ಟಿ, ವಿಜಾಪುರ
ಶ್ರೀಮತಿ ಲಕ್ಷ್ಮೀಬಾಯಿ ಮಲ್ಹಾರರಾವ ಸೊಲಾಪೂರಕರ, ವಿಜಾಪುರ
ಶ್ರೀ ಕೆ.ಎನ್. ತಿಕೋಟೇಕರ, ವಿಜಾಪುರ
ಶ್ರೀ ಆರ್.ಆರ್. ಉಮರ್ಜಿ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ವಸಂತರಾವ ದಾನಿ, ಧಾರವಾಡ
ಶ್ರೀ ಗುರುನಾಥ ದೇಸಾಯಿ, ಧಾರವಾಡ
ಶ್ರೀ ವಿ.ಜಿ. ಪಾಟೀಲ, ಧಾರವಾಡ
ಶ್ರೀ ಎಸ್.ವಿ. ಸೊರಟೂರ, ಕೆ.ಪಿ.ಸಿ., ದಾಂಡೇಲಿ
ಶ್ರೀ ಎಮ್.ಆರ್. ಜ್ಯೋತಿ, ಕೆ.ಪಿ.ಸಿ., ದಾಂಡೇಲಿ
ಶ್ರೀ ಜಿ.ಆರ್. ರಾಯಚೂರ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಪಿ.ಪಿ.ಅಂಬಳ, ಹುಬ್ಬಳ್ಳಿ
ಶ್ರೀ ಬಿ.ಆರ್. ಪಾಟೀಲ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಎಮ್.ಎಲ್. ಜಹಗೀರದಾರ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಗುರುರಾಜ ಎಂ. ಥಾಣಕ ಶಿರೂರ, ಕೆ.ಪಿ.ಸಿ., ಅಂಬೇವಾಡಿ
ಶ್ರೀ ಹೆಚ್.ಡಿ.ಗೋಡಖಿಂಡಿ, ಕೆ.ಪಿ.ಸಿ., ಅಂಬಿಕಾನಗರ
ಶ್ರೀಮತಿ ಪಂಕಜ ಮುನವಳ್ಳಿ, ಕೆ.ಪಿ.ಸಿ., ಅಂಬಿಕಾನಗರ
ಶ್ರೀ ಎಂ.ಎಸ್. ರಟ್ಟಿಹಳ್ಳಿ, ಕೆ.ಪಿ.ಸಿ., ಗಣೇಶಗುಡಿ
ಶ್ರೀ ಎಸ್.ವಿ. ಮಠದ, ಕೆ.ಪಿ.ಸಿ., ಅಂಬಿಕಾನಗರ
ಶ್ರೀ ಎಸ್.ಎಸ್. ಹರ್ತಿಕರ, ಕೆ.ಪಿ.ಸಿ., ಗಣೇಶಗುಡಿ
ಶ್ರೀ ಡಿ.ಜಿ. ಸದರಜೋಶಿ, ಕೆ.ಪಿ.ಸಿ., ಗಣೇಶಗುಡಿ
ಶ್ರೀ ಕೆ.ಡಿ.ಗೋಡಖಿಂಡಿ, ಕೆ.ಪಿ.ಸಿ., ಗಣೇಶಗುಡಿ
ಶ್ರೀ ಆರ್.ಎಲ್.ಕನಕ, ದಾಂಡೇಲ
ಶ್ರೀ ಬಿ.ಕೆ.ಸುರೇಶ, ನೆಲಮಂಗಲ
ಶ್ರೀ ಎಮ್.ಎಮ್. ರಾಜು, ಬೆಂಗಳೂರು
ಶ್ರೀ ಕೆ.ಎನ್. ರಾವ, ದಾಂಡೇಲಿ
ಕು. ಸಹನಾ ಜೋಶಿ, ಅಂಬೇವಾಡಿ

ಕು. ಸ್ಮಿತಾ ಜೋಶಿ, ಅಂಬೇವಾಡಿ
ಶ್ರೀ ಎಂ.ವಿ.ಹಾವನೂರ,ಕೆ.ಪಿ.ಸಿ., ಅಂಬೇವಾಡಿ
ಶ್ರೀ ಪಿ.ಪಿ. ಪವಾರ, ವಿಜಾಪೂರ
ಶ್ರೀ ಡಿ.ಕೆ. ಕುಲಕರ್ಣಿ, ವಿಜಾಪೂರ
ಶ್ರೀ ವಿ.ಎಸ್. ಕುಲಕರ್ಣಿ, ಗದಗ
ಶ್ರೀ ವಿ.ಕೆ. ಇನಾಂದಾರ, ಕೊರ್ಲಹಳ್ಳಿ
ಶ್ರೀ ಆರ್.ಎಲ್. ಕುಂಠೆ, ಮೋಟೆಬೆನ್ನೂರ
ಶ್ರೀ ಬಿ.ಆರ್. ದೇಸಾಯಿ, ಹುಬ್ಬಳ್ಳಿ
ಶ್ರೀ ಹೆಚ್.ಕೆ. ಕುಂಠೆ, ಹುಬ್ಬಳ್ಳಿ
ಶ್ರೀ ಅರುಣ ದಾನಿ, ಹುಬ್ಬಳ್ಳಿ
ಶ್ರೀ ಎಸ್.ವಿ. ಪಾಟೀಲ, ಧಾರವಾಡ
ಶ್ರೀ ಜಿ.ಟಿ.ಕುಮಶೀಕರ, ಧಾರವಾಡ
ಶ್ರೀ ಆರ್.ಎಸ್. ಪೂಜಾರ, ಧಾರವಾಡ
ಶ್ರೀ ವೆಂಕಟೇಶ ಬುರ್ಲಿ, ಧಾರವಾಡ
ಶ್ರೀ ಸಿ.ಆರ್. ದೀಕ್ಷಿತ, ದಾಂಡೇಲಿ
ಶ್ರೀ ಎಲ್.ಆರ್. ಭಟ್ಟ, ದಾಂಡೇಲಿ
ಶ್ರೀ ಕೃಷ್ಣರಾವ ಗಣಪಯ್ಯ ಕಾಮತ, ದಾಸನಕೊಪ್ಪ
ಶ್ರೀ ಬಿ.ಡಿ. ಸ್ವಾದಿ
ಶ್ರೀ ಆರ್.ಎಂ. ಹಿರ್ಲೇಕರ, ಧಾರವಾಡ
ಶ್ರೀ ಶ್ರೀನಿವಾಸರಾವ, ಹುಬ್ಬಳ್ಳಿ
ಲಲಿತಾ ನಾರಾಯಣ ಮೆಣಸಿ, ಧಾರವಾಡ
ದಾಂಡೇಲಿ ವನಿತಾ ಸೇವಾ ಸಮಾಜ, ಹಳೇ ದಾಂಡೇಲಿ
ಶ್ರೀ ಎ.ಎಸ್. ದೀಕ್ಷಿತ, ದಾಂಡೇಲಿ
ಶ್ರೀ ಎಸ್.ಎಸ್. ಜೋಶಿ, ದಾಂಡೇಲಿ
ಶ್ರೀ ಪ್ರಭಾಕರ ರಾವ, ದಾಂಡೇಲಿ
ಶ್ರೀ ಕೆ.ಜಿ. ಗುರುರಾಜ, ದಾಂಡೇಲಿ
ಶ್ರೀ ಉದಯ ಭಾಸ್ಕರ, ದಾಂಡೇಲಿ
ಶ್ರೀ ಪಿ.ಎಸ್. ಅಪರಂಜಿ, ಅಂಬಿಕಾನಗರ
ಶ್ರೀ ದೇವೇಂದ್ರ ನಾಯಕ, ಅಂಬಿಕಾನಗರ
ಶ್ರೀ ಪಿ.ವಿ. ಚಲವಾದಿ, ಅಂಬಿಕಾನಗರ
ಶ್ರೀ ಎಮ್.ಎಮ್. ಗಡೆಪ್ಪನವರ, ಅಂಬಿಕಾನಗರ
ಶ್ರೀ ಎಸ್.ಎನ್. ಕಿಣಿ, ಅಂಬಿಕಾನಗರ
ಶ್ರೀ ಎಸ್.ಬಿ. ಕರ್ಜಗಿ, ಅಂಬಿಕಾನಗರ

ಶ್ರೀ ವಿ.ಎಮ್. ಗುಡಿ, ಅಂಬಿಕಾನಗರ
ಶ್ರೀ ವಿ.ಆರ್. ವಿಠಲ, ಅಂಬಿಕಾನಗರ
ಶ್ರೀ ಜಿ.ಸಿ. ನಾರಾಯಣ, ಅಂಬಿಕಾನಗರ
ಶ್ರೀ ಕೆ.ಡಿ. ಜೋಶಿ, ಅಂಬಿಕಾನಗರ
ಶ್ರೀ ಎಂ.ವಿ. ಪ್ರಕಾಶ, ಹುಬ್ಬಳ್ಳಿ
ಶ್ರೀ ಎಂ.ಎನ್. ಕಮಲಾಕರ ಮೂರ್ತಿ, ಅಂಬಿಕಾನಗರ
ಶ್ರೀ ಎಫ್.ಎ. ಚಪ್ಪರಮನಿ, ಅಂಬಿಕಾನಗರ
ಶ್ರೀ ಎಂ.ಆರ್. ಚಿಟಗುಪ್ಪಿ, ಅಂಬಿಕಾನಗರ
ಶ್ರೀ ಪಿ.ಬಿ.ಕುಲಕರ್ಣಿ, ಅಂಬಿಕಾನಗರ
ಶ್ರೀ ಸಿ.ಎನ್. ವಾಸುದೇವ ರಾವ, ಅಂಬಿಕಾನಗರ
ಶ್ರೀ ಬಿ. ರಾಮಪ್ಪ, ಅಂಬಿಕಾನಗರ
ಶ್ರೀ ಪಿ.ಎಸ್. ಹಿರೇಮಠ, ಅಂಬಿಕಾನಗರ
ಶ್ರೀ ಕೆ. ಪುಟ್ಟಯ್ಯ, ಬೆಂಗಳೂರು
ಶ್ರೀ ಎಸ್.ಎನ್. ಪಾಟಕರ, ಕದ್ರಾ
ಶ್ರೀ ಬಿ.ವಿ. ರಾಮಕೃಷ್ಣ, ಕದ್ರಾ
ಶ್ರೀ ಆರ್.ಸಿ. ಜೋಶಿ, ಕದ್ರಾ
ಶ್ರೀ ಪಿ.ಎ. ಚಾಂದಗುಡಿ, ಅಂಬೇವಾಡಿ
ಶ್ರೀ ಶಿದ್ದಣ್ಣ ಯಲಿಗಾರ, ಧಾರವಾಡ
ಶ್ರೀ ವಿ.ಎಸ್. ದೀಕ್ಷಿತ ಪುರಾಣಿಕ, ಅಂಬೇವಾಡಿ
ಶ್ರೀ ಜಿ.ಹೆಚ್. ಸಿದ್ಧೇಶ್ವರ, ಅಂಬೇವಾಡಿ
ಶ್ರೀ ಪಿ.ವಿ. ಹೆಗಡೆ, ದಾಂಡೇಲಿ
ಶ್ರೀ ಜಿ.ಆರ್. ಕೆರೂರ, ಅಂಬೇವಾಡಿ
ಶ್ರೀ ಎಂ.ಬಿ. ನ್ಯಾಮಣ್ಣವರ, ದಾಂಡೇಲಿ
ಶ್ರೀ ಬಸಪ್ಪ ಕೌಲಗಿ, ಅಂಬೇವಾಡಿ
ಶ್ರೀ ಶೇಖರ, ಅಂಬೇವಾಡಿ



# ಶ್ರೀ ರಾಮಾಯಣ ನಿತ್ಯ ಚಿಂತನ

ಕವಿ ಗ. ದಿ. ಮಾಡಗೂಳಕರರ ಮರಾಠಿ **ಗೀತ ರಾಮಾಯಣ**

## (ಕನ್ನಡ ಗದ್ಯದಲ್ಲಿ)

# ಸಪ್ತಾಹದ ೧ನೆಯ ದಿನ

ಶ್ರೀ ರಾಮ ಜಯರಾಮ ಜಯ ಜಯರಾಮ .........(೧೦ಸಾರೆ)
ಜಯ ಜಯ ರಘುವೀರ ಸಮರ್ಥ

**ಧ್ಯಾನ :- । ಧ್ಯಾಯೇದಾ ಜಾನು ಬಾಹುಂ ಧೃತ ಶರ ಧನುಷಂ ಬದ್ಧಪದ್ಮಾಸನಸ್ಥಂ ।**
**। ಪೀತಂ ವಾಸೋ ವಸಾನಂ ನವಕಮಲ ದಲ ಸ್ಪರ್ಧಿನೇತ್ರಂ ಪ್ರಸನ್ನಂ ॥**
**। ವಾಮಾಂಕಾ ರೂಢ ಸೀತಾ ಮುಖಕಮಲಮಿಲ್ಲೋಚನಂ ನೀರದಾಭಂ ।**
**। ನಾನಲಂಕಾರ ದೀಪ್ತಂ ದಧತ ಮುರುಜಟಾ ಮಂಡನಂ ರಾಮಚಂದ್ರಂ ॥**
**ಇತಿಧ್ಯಾನಂ-**

ಜಯ ಜಯ ರಘುವೀರ ಸಮರ್ಥ

ಪ್ರಸ್ತಾವಿಕ :- ಶ್ರೀ ರಾಮಚಂದ್ರನು ಪ್ರಾರಂಭಿಸಿದ ಅಶ್ವಮೇಧ ಯಜ್ಞಗಾಗಿ ಜನರ ಮಹಾ ಸಾಗರವೇ ೇರಿತ್ತು. ಆಗ ಮುನಿಗಳ ವೇಷ ಧರಿಸಿದ ವಟುಗಳಿಬ್ಬರು ಯಜ್ಞಮಂಟಪಕ್ಕೆ ಆಗಮಿಸಿ '' ವಾಲ್ಮೀಕಿ ುಹರ್ಷಿಗಳ ಶಿಷ್ಯರು ನಾವು, ಶ್ರೀರಾಮ ಚರಿತೆಯನ್ನು ಹಾಡುವೆವು '' ಎಂದರು. ಶ್ರೀರಾಮನಿಗೆ ತನ್ನೆದುರು ನ್ನ ಚರಿತೆಯನ್ನು ಹಾಡಲು ಬಂದ ಈ ವಟುಗಳು ತನ್ನ ಪುತ್ರರೇ ಎಂಬುದು ಗೊತ್ತಾಗಲಿಲ್ಲ.

## ಅಧ್ಯಾಯ ೧

## ಶ್ರೀರಾಮ ಚರಿತೆಯನ್ನು ಹಾಡಲು ಬಂದ ಕುಶ - ಲವರ ವರ್ಣನೆ.

(ನಿವೇದಕರಿಂದ)

ಸಮವಯದ ಆ ಕುಮಾರರಿಬ್ಬರು ಶ್ರೀ ರಾಮನ ತದ್ರೂಪರೇ ಆಗಿದ್ದರು. ಜ್ಯೋತಿಯು ತೇಜಕ್ಕೆ ಆರತಿ ಎತ್ತಿದಂತೆ ಮಕ್ಕಳೇ ತಂದೆಯ ಚರಿತೆ ಹಾಡಹತ್ತಿದರು.

ತಪೋವನದ ಗಂಧರ್ವರೇ ಆದ ವಟುಗಳಿಬ್ಬರು ಮುನಿಗಳ ವೇಷವನ್ನು ಧರಿಸಿದ್ದರಾದರೂ ಅವರ ಮುಖದ ಮೇಲೆ ರಾಜಕಳೆ ಉಕ್ಕುತ್ತಿತ್ತು. ವಾಲ್ಮೀಕಿ ಮಹಾಮುನಿಗಳ ಮನೋಭಾವನೆಯೇ ಮೂರ್ತಿವೆತ್ತಂತಿತ್ತು. ಕೋಗಿಲೆಯು ಮಾವಿನ ಮರದಲ್ಲಿ ಕುಳಿತು ವಸಂತ ಋತುವಿನ ಸೊಬಗನ್ನು ಒಳ್ಳೇ ವೈಭವದಿಂದ ಇಂಪಾಗಿ ಹಾಡುವಂತೆ, ಆ ಕುವರರ ಹಾಡು ಸಾಗಿತ್ತು. ಹಾಗೇ ಅವರು ಹಾಡುತ್ತಿದ್ದಂತೆ ಅವರ ತುಟಿಗಳು ಹೂವುಗಳಂತೆ ಅರಳಿ ಭುವನವೆಲ್ಲ ಸ್ವರಸುಗಂಧ ಸೂಸಿತು. ಕರ್ಣಕುಂಡಲಗಳು ಕುಣಿದವು. ಜೊತೆಗಿದ್ದ ವೀಣೆ ಝೇಂಕರಿಸಿತು. ಸಪ್ತಸ್ವರಗಳ ಸ್ವರ್ಗದಲ್ಲಿ ನವರಸಗಳುದಯಿಸಿ ಯಜ್ಞಮಂಟಪಕ್ಕಿಳಿದು ಹರಿದಾಗ ಶ್ರೋತೃಗಳೆಲ್ಲ ಅದರಲ್ಲಿ ಮಿಂದರು. ನಾಲ್ಕು ಪುರುಷಾರ್ಥಗಳಲ್ಲಿ ಮೂಡಿದ ನಿಜ ಜೀವನ ಪಟದ ಪ್ರತ್ಯಕ್ಷ ಮೂರ್ತಿಗಳನ್ನೇ ಕಂಡ ಪ್ರಭು ರಾಮಚಂದ್ರನ ಕಣ್ಣುಗಳು ಹನಿಗೂಡಿದವು. ಸಾಮ ವೇದದಲ್ಲಿ ಕುವರರ ಹಾಡು ಸಾಗಿದೆ. ಸರ್ಗದ ಹಿಂದೆ ಸರ್ಗ ಸರಿಯುತ್ತಿವೆ. ಆಲಿಸುತ್ತ ಕುಳಿತ ಸಚಿವರು, ಮುನಿಜನರು, ಸ್ತ್ರೀ ಪುರುಷರು ತಲೆದೂಗುತ್ತಿದ್ದಂತೆ ಅವರ ಕಣ್ಣುಗಳಿಂದ ಅಶ್ರುಗಳ ಧಾರೆ ಇಳಿದಿದೆ. ಹೀಗೆ ಕುವರರ ಇಂಪಾದ ಗೀತೆಗಳನ್ನಾಲಿಸುತ್ತ ಕುಳಿತ ರಾಘವನು ಸಿಂಹಾಸನದ ಮೇಲೆ ಕುಳಿತುಕೊಳ್ಳಲಾರದೇ ಕೆಳಗಿಳಿದು ಬಂದು ಹಾಡುತ್ತಿರುವ ಆ ಕುವರರನ್ನು ಬಿಗಿದಪ್ಪಿಕೊಂಡ . ಪಿತಾ ಪುತ್ರರ - ಮಿಲನದ ಮಹೋತ್ಸವ ಆದಾಗಿದ್ದರೂ ಉಭಯತರಿಗೂ ಅದು ಗೊತ್ತಿರಲಿಲ್ಲ.

ಆ ಅಶ್ವಮೇಧ ಯಜ್ಞ ಮಂಟಪದಲ್ಲಿ ಸೇರಿದ ಶ್ರೋತೃಗಳು ತಮ್ಮ ಪ್ರಾಣಗಳ ಶಕ್ತಿಯನ್ನೆಲ್ಲ ಕರ್ಣಗಳಲ್ಲಿ ಕೇಂದ್ರೀಕರಿಸಿ ಕುವರರ ಗೀತೆಗಳನ್ನು ಕೇಳುತ್ತಿದ್ದಾರೆ - ಸಾಕ್ಷಾತ ಶ್ರೀ ರಾಮಚಂದ್ರ ಸುವರ್ಣ ಸಿಂಹಾಸನದಲ್ಲಿ ಆಸೀನನಾಗಿ ಆಲಿಸುತ್ತಿದ್ದಾನೆ. ಮುನಿಗಳ ವೇಷದದಲ್ಲಿದ್ದ ರಾಜಪುತ್ರರೇ ಆದ ಕುಶ - ಲವರು ಶ್ರೀ ರಾಮ ಚರಿತೆಯನ್ನು ಹಾಡಲು ಪ್ರಾರಂಭಿಸಿದರು.

## ಅಧ್ಯಾಯ ೨

## ಸರಯೂ ನದಿಯ ತೀರದ ಮೇಲೆ ( ಕುಶ - ಲವ )

ಶ್ರೋತೃಗಳೇ ಕೇಳಿರಿ- ಸರಯೂ ನದಿಯ ತೀರದ ಮೇಲೆ ಮನು ಕಟ್ಟಿಸಿದ ಸುಂದರವಾದ ಅಯೋಧ್ಯೆ ಎಂಬ ಪಟ್ಟಣ ಒಂದಿದೆ. ಆ ಪಟ್ಟಣದ ವೈಭವವನ್ನು ನಾವೆಂತು ವರ್ಣಿಸೋಣ ? ಆ ವಿಶಾಲವಾದ ಪಟ್ಟಣವು ಸುಂದರವಾದ ಎತ್ತರವಾದ ಮನೆಗಳಿಂದ ತುಂಬಿದೆ. ಮಧ್ಯದಲ್ಲಿ ಸಮಾಂತರವಾಗಿ ಸೀಳು ಮಾರ್ಗಗಳಿವೆ. ಕುದುರೆಗಳು, ರಥಗಳು

ನೆಗಳು ಅಲ್ಲದೇ ಪಥಿಕರ ನಿತ್ಯ ಓಡಾಟಗಳಿಂದ ಈ ಮಾರ್ಗಗಳೆಲ್ಲ ಶೋಭಿಸುತ್ತಿದ್ದವು. ಪಟ್ಟಣದಲ್ಲಿಯ ಪ್ರತಿ ಮನೆಗೂ ರತ್ನದ ತೋರಣ ತೋರುತ್ತಿತ್ತು. ಮತ್ತು ಮನೆಯ ತ್ತಲು ರಮ್ಯ ಉಪವನಗಳಿಂದ ಕಂಗೊಳಿಸುತ್ತಿತ್ತು ಅಲಕಾನಗರಿಯಂತೆ. ಮನರಂಜಿಸುವ ತ್ಯ, ಗಾಯನಗಳು, ಮೃದಂಗ ವೀಣೆಯ ಗೀತೆಗಳು ನಿತ್ಯ ಅಲ್ಲಿ ಕೇಳಿ ಬರುತ್ತಿದ್ದವು.

ಈ ರೀತಿಯಾಗಿರುವ ಆ ಸುಂದರವಾದ ಪಟ್ಟಣದಲ್ಲಿ ಪತಿವ್ರತೆಯಾದ ಸ್ತ್ರೀಯರು ಮತ್ತು ಧಾರ್ಮಿಕ ವೃತ್ತಿಯ ಪುರುಷರು ವಾಸಿಸುತ್ತಿದ್ದರು. ಅಲ್ಲಿ ಜನಿಸುವ ಪುತ್ರರು ಜವಾಗಿಯೂ ಕುಲದೀಪಕರೇ ಅವರು. ನಿರ್ದಯನಾಗಲಿ, ನಾಸ್ತಿಕನಾಗಲಿ ಆ ಪಟ್ಟಣದಲ್ಲಿ ಕೇಳಬೇಡಿರಿ, ಒಬ್ಬನೂ ಸಿಗಲಾರ ನಿಮಗೆ. ಅಲ್ಲಿ ಅತೃಪ್ತಿಗೆ ಆಸರೆಯೇ ಇರಲಿಲ್ಲ. ಹೀಗೆ ಆ ಪಟ್ಟಣದಲ್ಲಿಯ ಎಲ್ಲ ಜನರು ಸಂತೃಪ್ತರಾಗಿ ಸುಖದಿಂದ ಇದ್ದರು.

ಇಕ್ಷ್ವಾಕು ಕುಲ ಕೀರ್ತಿಭೂಷಣನಾದ ಧರ್ಮಪಾರಾಯಣನಾದ ದಶರಥರಾಯನು ಆ ಮಹಾನಗರದ ರಕ್ಷಣವನ್ನು ಮಾಡುತ್ತಿದ್ದ. ಆತನು ಗೃಹದಲ್ಲಿ ಚಂದ್ರನಂತೆ ಶಾಂತನೂ, ನಗರದಲ್ಲಿ ಇಂದ್ರನಂತೆ ಶೋಭಿಸುವಂತಹನೂ, ಸಂಗ್ರಾಮದಲ್ಲಿ ಸೂರ್ಯನಂತೆ ತೇಜಪುಂಜನೂ ಆಗಿದ್ದ. ದಶರಥರಾಯನಿಗೆ ಮೂವರು ಪತ್ನಿಯರು. ಹಿರಿಯವಳು ಕೌಸಲ್ಯೆ, ಎರಡನೆಯವಳು ಸುಮಿತ್ರೆ, ಮೂರನೆಯವಳು ಕೈಕೇಯಿ. ಈ ಮೂವರೂ ಒಳ್ಳೆಯ ವಂಶಜರು, ರೂಪವತಿಯರು ಮತ್ತು ಸುಶ್ರುತೆಯರು, ಪತಿಸೇವೆಯಲ್ಲಿ ಮೂವರು ಸತಿಯರು ನಿತ್ಯ ನಿರತರಾಗಿದ್ದರು. ದಶರಥರಾಯನ ಈ ಪತ್ನೀತ್ರಯರ ಪ್ರೀತಿಯ ಸಂಗಮ, ರಾಜಭವನದಲ್ಲಿ ಮೂರು ಲೋಕಗಳ ಸುಖವನ್ನೇ ತಂದಿರಿಸಿತ್ತು.

ಆದರೇನು, ಅವರ ಈ ಸೌಖ್ಯದ ಬಾಳಿನಲ್ಲಿ ಒಂದೇ ಒಂದು ಕೊರತೆಯೆಂದರೆ ಈ ವರೆಗೂ ಯಾರಿಂದಲೂ ಪುತ್ರೋತ್ಸವವಾಗದಿದ್ದುದು. ಕೌಸಲ್ಯೆಗೆ ಮಕ್ಕಳಿಲ್ಲದ ಆ ಕೊರಗು, ಬಾಣದಂತೆ ಸದಾ ಚುಚ್ಚುತ್ತಿತ್ತು . ಸುಮಿತ್ರೆಯೋ, ಮನದಲ್ಲಿಯೇ ನಿತ್ಯ ಬೇಯುತ್ತಿದ್ದಳು ಕೈಕೇಯಿಗಂತೂ, ಮಕ್ಕಳಿಗಾಗಿ ಹರಕೆ ಹೊತ್ತು ಹೊತ್ತು ಸಾಕಾಗಿ ಹೋಗಿತ್ತು. ಅರಸನ ಸೌಖ್ಯವೇ - ತಮ್ಮ ಸೌಖ್ಯವೆಂದು ಬಗೆದ ಅಯೋಧ್ಯೆಯ ಪ್ರಜೆಗಳಿಗೆಲ್ಲ, ಒಂದೇ ಒಂದು ಚಿಂತೆ, '' ತಮ್ಮ ರಾಜನಿಗೆ ಈ ವರೆಗೂ ಸಂತತಿ ಆಗಲಿಲ್ಲ'' - ಎಂಬುದು . ''ಏನರ್ಥ ನಮ್ಮ ರಾಜನ ಈ ಬರೀ ಸಂಪತ್ತಿಗೆ ? ವಸಂತ ಋತುಗಳು ಹಾಗೆ ಸರಿಯುತ್ತ ನಡೆದವಲ್ಲ? ಕಲ್ಪತರುವಿಗೆ ಒಮ್ಮೆಯಾದರೂ ಪುಷ್ಪಗಳು ಬಿಡಬೇಡವೇ ? ಹಾಗಾದರೆ ನಮ್ಮ ರಾಜನಿಗೆ ಪುತ್ರೋತ್ಸವವೆಂದಿನ್ನು ?'' ಎಂಬುದು ಅಯೋಧ್ಯೆಯ ಪ್ರಜೆಗಳ ನಿತ್ಯ ಹಂಬಲ.

ದಶರಥರಾಜ ಸಮಸ್ತ ತನ್ನ ಪ್ರಜೆಗಳನ್ನು ಸರ್ವಸುಖಗಳಿಂದ ಎರೆಯುತ್ತಿದ್ದ. ಆದರೆ ಆತನ ಮನೆಯಲ್ಲಿ ಒಂದು ತೊಟ್ಟಿಲು ತೂಗಬಾರದೆಂಬುದು ಎಂತಹ ದೈವ ದುರ್ವಿಲಾಸ? ಈ ಪ್ರಶ್ನೆ ತಿಳುವಳಿಕೆಯುಳ್ಳ ಪ್ರತಿಯೊಬ್ಬ ಪ್ರಜೆಯ ಮನದಲ್ಲಿ ಮೇಲಿಂದ ಮೇಲೆ ಏಳುತ್ತಿತ್ತು. ಹೀಗಿರಲು, ದಶರಥರಾಜನ ರಾಣಿಯರ ಅವಸ್ಥೆ ಏನಾಗಿರಬೇಡ ? ಗ್ರೀಷ್ಮಕಾಲದ ನದಿಯಂತೆ- ಕೌಸಲ್ಯೆ ಮೇಲು ನೋಟಕ್ಕೆ ತುಸು ಕೃಶಳಾಗಿ ಕಂಡರೂ, ಶಾಂತಳಾಗಿಯೇ ಇದ್ದಳು. ಆದರೆ ಅವಳು ಮನದಲ್ಲಿಯೇ ಕೊರಗುತ್ತಿದ್ದ ರೀತಿ ಕೇಳಿರಿ.

# ಅಧ್ಯಾಯ ೩

## ಕಾರಣವಿಲ್ಲದೆ ಇಂದು ನನ್ನ ಹೃದಯವೇಕೆ ವ್ಯಾಕುಲಗೊಂಡಿದೆ ? (ಕೌಸಲ್ಯೆ)

ಈ ಬಳ್ಳಿಯ ಹೂವು ಗೊಂಚಲವನ್ನು ಕಂಡೊಡನೆ ನನ್ನ ಮನ ಯಾಕೆ ವ್ಯಾಕುಲಗೊಂಡಿತು ? ನನ್ನ ಅಂತರಂಗ ಅದೆಂದೂ ಮಲಿನವಾಗಿಲ್ಲ. ಸವತಿಯ ಮತ್ಸರ, ಅದೆಂದೂ ನನ್ನನ್ನು ಸೋಂಕಿಲ್ಲ. ಹೀಗಿದ್ದರೂ ಆ ಬಳ್ಳಿಯ ವೈಭವ ನನಗೆ ಚುಚ್ಚುತ್ತಿದೆಯಲ್ಲ ಏನು ಕಾರಣ ? ಏನು ನನ್ನ ಈ ಮನದ ತವಕ ? ಆ ಚಿಗುರೆ ಆದರ ಚಿಕ್ಕಮರಿ ಸೇರದೇ ನನಗೆ ? ನನ್ನ ಕಣ್ಣಿವೆ ತೊಯ್ದುವಲ್ಲ ಏನದು ? ಹಸು ತನ್ನ ಕರುವಿಗೆ ಮೊಲೆಯುಣಿಸಿ ಅದರ ಮೈ ನೆಕ್ಕಿ ಪ್ರೀತಿಸುವುದನ್ನು ನೋಡಿ ನನಗೇಕೆ ಅಸೂಯೆ ? ಅಂತರಂಗದಲ್ಲಿ ಈ ವಿಪ್ಲವೇಕೆ ? ಪಕ್ಷಿಯೊಂದು ತನ್ನ ಮರಿಗೆ ಗುಟುಕನ್ನೀಯುವವನ್ನು ನೋಡಿ ನನ್ನನ್ನು ಬೇಗುದಿಗೊಳಿಸುವುದಲ್ಲ ? ಏನು ವಿಪರೀತವಿದು ? ನನ್ನನ್ನು ನಾನೇ ವಂಚಿಸಿಕೊಳ್ಳುವುದೇ ?

ಹಾ !, ತಿಳಿಯಿತೇನಗೆ, '' ಹಡೆಯದ ಹೆಂಗದ - ಹೆಣ್ಣಿನ ಜೀವನ ಅಪೂರ್ಣ''. ''ವಾತ್ಸಲ್ಯದಿಂದಲೇ ನಾರಿಯ ಜನ್ಮ ಸಾರ್ಥಕವೆಂಬುದನ್ನು ತಿಳಿದೆ.'' ಕಲ್ಲಿನಲ್ಲಿ ಕೂಡ ಮೂರ್ತಿಗಳು ಜನ್ಮವೆತ್ತುವವು. ಹಾಗಾದರೆ ಈ ಕೌಸಲ್ಯೆ ಆ ಕಲ್ಲಿಗಿಂತ ಕಡೆಯೇ ? ಅಕಾರಣವಾಯಿತು, ವ್ಯರ್ಥವಾಯಿತು ನನ್ನ ಜೀವನ. ಮುಗಿಲು ನಮಗಿಂತಲೂ ಮುಪ್ಪಿನದು. ಅದು ಆದೆಷ್ಟು ತಾರೆಗಳಿಗೆ ನಿತ್ಯ ಜನ್ಮವಿಯುತ್ತದೆಯಲ್ಲ! ಆದರೆ ನನ್ನ ಜನ್ಮ, ನನ್ನ ಬಾಳ್ವೆ, ಎಲ್ಲ ವ್ಯರ್ಥವಾಯಿತಲ್ಲ ಏನು ಮಾಡಲಿ ?

ಹೀಗೆ, ಮಕ್ಕಳಿಲ್ಲದ ತನ್ನ ಬಾಳುವೆ ವ್ಯರ್ಥವಾಯಿತಲ್ಲ ! ಎಂದು ಹಳ ಹಳಿಸುತ್ತ ಕೌಸಲ್ಯೆ ಕೊರಗುತ್ತ ಕುಳಿತಿರುವಾಗಲೇ ದಶರಥಮಹಾರಾಜನು ಅವಳ ಅಂತಃಪುರ

ಪ್ರವೇಶಸಿದ. ಅವಳ ಉದಾಸೀನತೆಯು ಕಾರಣವನ್ನರಿತ ಆತನು ಅವಳನ್ನು ಸಮಾಧಾನಪಡಿಸುತ್ತ ಹೇಳುತ್ತಾನೆ.

# ಅಧ್ಯಾಯ ೪

## ಕೌಸಲ್ಯೇ, ಇಷ್ಟು ಉದಾಸೀನಳೇಕೆ ನೀನು ? (ದಶರಥ)

ಪ್ರಿಯ ಕೌಸಲ್ಯೆ, ನೀನಿಷ್ಟು ಉದಾಸೀನಳೇಕಿಂದು ? ಏನಿದು ಏಕೆ ಕಂಬನಿ ? ಮಕ್ಕಳಿಲ್ಲವೆಂಬ ಕೊರಗಲ್ಲವೇ ನಿನ್ನದು ? ಗೊತ್ತು ನನಗೆ, ಕೇಳಿಲ್ಲಿ. ಋತುರಾಜ ವಸಂತನಾಗಮಿಸಿದ. ಗಿಡಗಳಿಗೆಲ್ಲ ಹೊಸ ಚಿಗುರುಗಳು ಒಡೆದವು. ನನ್ನ ಮನದಲ್ಲಿಯೂ ಇಂದು ಒಂದು ಹೊಸ ಆಶೆ ಕೊನರಿದೆ. ಅದರ ಶಬ್ದ ರಹಿತ ವಾಣಿಯೊಂದು ನನ್ನ ಕಿವಿಗಳಲ್ಲಿ ಏನು ಹೇಳಿತು ಗೊತ್ತೇ ? '' ದಶರಥಾ, ಅಶ್ವಮೇಧಯಜ್ಞ ಮಾಡು. ನಿನ್ನ ಧರ್ಮರತ ಗೃಹದಲ್ಲಿ ನಾಲ್ಕು ವೇದಗಳಂತೆ ನಾಲ್ವರು ಪುತ್ರರು ಜನಿಸುವರು'' ಎಂದು ಹೇಳಿದೆ. ಆದುದರಿಂದ ಪ್ರಿಯೇ, ಸರಯೂ ನದಿಯ ತೀರದ ಮೇಲೆ ಆ ಮಹಾನ್ ಅಶ್ವಮೇಧ ಯಜ್ಞವನ್ನು ಋಷಿ ಮುನಿಗಳನ್ನು ಕೂಡಿಕೊಂಡು ಯಥಾವಿಧಿಯಾಗಿ ಸಾಂಗಗೊಳಿಸಿ ಅವಭೃತ ಸ್ನಾನ ಮಾಡೋಣ. ಪ್ರಿಯೇ , ಪುತ್ರೋತ್ಸವಕ್ಕಾಗಿ ಇದೊಂದು ಕಡೆಯ ಪ್ರಯತ್ನ ನಮ್ಮದು ನಡೆಯಲಿ. ಆಗ ನಮ್ಮ ಯಜ್ಞದಿಂದ ಅಗ್ನಿದೇವ ಸಂತುಷ್ಟನಾಗಿ ನಮ್ಮ ಇಚ್ಛೆಯನ್ನು ಪೂರ್ಣಮಾಡುತ್ತಾನೆ. ವಿಶ್ವಾಸವನ್ನಿರಿಸು - ನನ್ನ ಮಾತುಗಳಲ್ಲಿ. ಯೋಚನೆ ಬಿಡಿನ್ನು ಪ್ರಿಯೇ'' ಎಂದ.

ಹೀಗೆ ಆ ಶಬ್ದ ರಹಿತ ವಾಣಿಯು ದಶರಥ ಮಹಾರಾಜನನ್ನು ಬಡಿದೆಬ್ಬಿಸಿತು. ಆ ಧ್ವನಿಯನ್ನು ನೆನಪಿನಲ್ಲಿಟ್ಟುಕೊಂಡು - ಅವನು ತನ್ನ ಮಂತ್ರಿ ಸುಮಂತನಿಗೆ ಹೇಳುತ್ತಾನೆ. '' ಸುಮಂತಾ, ಋಷಿಗಳಾದ ವಸಿಷ್ಠರು, ಕಶ್ಯಪರು ಮತ್ತು ಜಾಬಾಲಿ ಇವರನ್ನು ಕರೆದು ಕೊಂಡು ಬಾ. ಆ ಗುರು ಜನರು ಜ್ಞಾನಿಗಳು ನನಗೆ ಇಷ್ಟವಾದುದನ್ನು ಹೇಳುವರು.'' ಎಂದ. ಆಯಿತು . ರಾಜಾಜ್ಞೆಯಂತೆ ಸುಮಂತ ಮಂತ್ರಿ ಋಷಿಗಳನ್ನು ಬರಮಾಡಿಕೊಂಡ ಆ ಗುರು ಜನರು ಆಗಮಿಸಿದಾಗ ದಶರಥರಾಜ ಅವರ ಸಮ್ಮುಖದಲ್ಲಿ ತನ್ನ ಮನವನ್ನು ಮಥಿಸಿಕೊಂಡು, ತನ್ನ ಮನದ ಇಂಗಿತವನ್ನೆಲ್ಲ ಅವರೆದುರು ಉಸುರಿದ. ಆಗ ಆ ಋಷಿಗಳು ತಮ್ಮ ಸ್ನಿಗ್ಧ ಮತ್ತು ಮಧುರವಾದ ನುಡಿಗಳಿಂದ '' ದಶರಥಾ, ನಿನ್ನ ಮನೋರಥವು ಪೂರ್ಣವಾಗುವುದು. ಅಶ್ವಮೇಧ ಯಜ್ಞವನ್ನು ಯಥಾವಿಧಿಯಾಗಿ ಸಾಂಗಗೊಳಿಸೋಣ ಅದಕ್ಕಾಗಿ ಇಂದಿನ ಈ ಶುಭಮುಹೂರ್ತದಲ್ಲಿಯೇ ಅಶ್ವವನ್ನು ಬಿಡು. ಸತ್ವರದಿಂದ ಅದು

ಹೋಗಲಿ'' - ಎಂದು ಹೇಳಿದರು. ಆಗ ದಶರಥರಾಜನು ಕೈಜೋಡಿಸುತ್ತ '' ಗುರುಗಳೇ ತಮ್ಮ ಆಜ್ಞೆ ನನಗೆ ಮಾನ್ಯವಿದೆ''. ಎಂದು ಹೇಳಿ ಸತ್ವರ ಅಶ್ವವನ್ನೇ ಬಿಡುವ ವಿಧಾನವು ಮಾಡಿದ. ಮತ್ತು ಅತ್ಯಂತ ಉತ್ಸಾಹಭರಿತನಾಗಿ '' ಗುರುಗಳೇ, ಅಂಗದೇಶದ ಋಷ್ಯಶೃಂಗರನ್ನು ನಾನು ಬರಮಾಡಿಕೊಳ್ಳುವೆ. ಅವರ ಅಮೃತ ಹಸ್ತದಿಂದ ಯಜ್ಞನೆರವೇರಲಿ - ಯಜ್ಞಧೂಮದಿಂದ ಮತ್ತು ಜೊತೆಯ ಮಂತ್ರೋಚ್ಚಾರದ ಧ್ವನಿಯಿಂದ ನಗರವೆಲ್ಲ ತುಂಬಿ ಹೋಗಲಿ'', ಎಂದ ದಶರಥರಾಜ.

ಹೀಗೆ ಅಶ್ವಮೇಧ ಯಜ್ಞ ನೆರವೇರಿಸಬೇಕೆಂಬ ಇಚ್ಛೆಯನ್ನಿರಿಸಿಕೊಂಡ ದಶರಥರಾಜ ಅಶ್ವವನ್ನು ಬಿಟ್ಟ. ಅದು ಎಲ್ಲ ದೇಶಗಳನ್ನು ಸುತ್ತುವರಿದು ಒಂದು ವರ್ಷದ ನಂತರ ಮರಳಿ ರಾಜಧಾನಿಗೆ ಸೇರಿತು. ರಾಜನ ಇಚ್ಛೆಯಂತೆ ಋಷ್ಯಶೃಂಗರ ಹಸ್ತದಿಂದ ವಿಧಾನೋಕ್ತವಾಗಿ ಅಶ್ವಮೇಧಯಜ್ಞವು ಸಾಂಗವಾಯಿತು. ಶುಭ ಮುಹೂರ್ತದಲ್ಲಿ ಯಜ್ಞದ ಜ್ವಾಲೆಯಿಂದ ರಕ್ತವರ್ಣದ ತೇಜಸ್ವಿ, ಮಹಾನ್ ಪುರುಷನೊಬ್ಬ ಪ್ರಕಟನಾದ. ದುಂಧುಭಿಯಂತೆ ದೃಢವಾದ ಮತ್ತು ಅಷ್ಟೇ ಮಧುರವಾದ ತನ್ನ ಸ್ವರದಲ್ಲಿ ಆ ಯಜ್ಞಪುರುಷ ದಶರಥರಾಜನಿಗೆ ಹೇಳಲು ಪ್ರಾರಂಭಿಸಿದ.

## ಅಧ್ಯಾಯ ೫

## ದಶರಥಾ, ತೆಗೆದುಕೋ ಈ ಪಾಯಸದಾನ (ಯಜ್ಞಪುರುಷ)

ದಶರಥಾ ಇಕೋ ತೆಗೆದುಕೋ ಈ ಪಾಯಸ ದಾನವನ್ನು. ನಿನ್ನ ಯಜ್ಞದಲ್ಲಿ ನಾನು ಪ್ರಕಟನಾದುದು ನನಗೆ ಸನ್ಮಾನ. ಯಥಾವಿಧಿಯಾಗಿ ಸಾಂಗವಾದ ನಿನ್ನ ಯಜ್ಞದಿಂದ ಎಲ್ಲ ದೇವತೆಗಳು ತೃಪ್ತರಾಗಿರುವರು. ಶ್ರೀ ವಿಷ್ಣು ನಿನ್ನ ಮೇಲೆ ತುಂಬಾ ಪ್ರಸನ್ನನಾಗಿರುತ್ತಾನೆ. ರಾಜಾ ಆತನ ಆಜ್ಞೆಯಂತೆ ನಿನಗಾಗಿ ಈ ಪಾಯಸದ ಪ್ರಸಾದವನ್ನು ತಂದಿರುವೆ ತುಂಬಾ ಓಜಸ್ವಿ ಇದು. ಇದಕ್ಕೆ ಸರಿಸಮಾನವಾದುದು, ಅಥವಾ ಹೆಚ್ಚಿನದು ತ್ರಿಲೋಕಗಳಲ್ಲಿ ಬೇರಾವುದೂ ಇಲ್ಲ. ಇಕೋ, ಹಿಡಿ ನಿನ್ನ ಕೈಗಳಲ್ಲಿ ಈ ಬಂಗಾರದ ಬಟ್ಟಲವನ್ನು ಇದರಲ್ಲಿಯ ಪಾಯಸವನ್ನು ನಿನ್ನ ರಾಣಿಯಾರಿಗೆ ಕೊಡು. ಕಾಮಧೇನುವಿನ ಹಾಲಿಗಿಂತ ಬಲಶಾಲಿ, ಶಕ್ತಿಶಾಲಿ ಇದು. ನಿನ್ನ ಮೂವರು ರಾಣಿಯರು ಇದನ್ನು ಸೇವಿಸಲಿ. ಆಗ ಅವರು ಗರ್ಭವತಿಯರು ಆಗುವರು. ಮತ್ತು ಅವರ ಉದರದಿಂದ ನಾಲ್ವರು ಯೋಧರು ಜನ್ಮಿಸುವರು. ದಶರಥಾ, ಆ ನಿನ್ನ ನಾಲ್ವರು ಪುತ್ರರೂ ಮಾನವ ರೂಪದಲ್ಲಿ ವಿಷ್ಣುವಿನ ಅಂಶಜರು. ಅಂದಮೇಲೆ, ದೇವಪಿತನಾಗುವ ಮಾನ ನಿನಗೆ ಲಭಿಸಿತು ಭಾಗ್ಯವಂತ ನೀನು,

ಧನ್ಯ ಧನ್ಯ. ನಿನ್ನ ಕಣ್ಣುಗಳಲ್ಲಿ ಕೃತಾರ್ಥತೆ ಕಂಡು ಬರುವದು ನಿನ್ನ ದರ್ಶನದಿಂದ ನಾನು ಕೃತಾರ್ಥನಾದೆ. ಆದುದರಿಂದ ರಾಜಾ ನನಗಿನ್ನು ಅಪ್ಪಣೆ ಕೊಡು. ನಾನು ಯಜ್ಞದಲ್ಲಿ ಪುನಃ ಅಂತರ್ಧಾನ ಹೊಂದುವೆ'' ಎಂದು ನುಡಿದು ಆ ತೇಜಸ್ವಿ ಯಜ್ಞಪುರುಷ ಯಜ್ಞಕುಂಡವನ್ನು ಪ್ರವೇಶಿಸಿ ಕಾಣದಂತಾದ.

ಆ ಯಜ್ಞಪುರುಷನಿತ್ತ ಪಾಯಸ ಸೇವನೆಯಿಂದ ದಶರಥರಾಜನ ಮೂವರು ಅರಸಿಯರು ಗರ್ಭವತಿಯರಾದರು. ಯೋಗ್ಯಕಾಲಕ್ಕೆ ಅವರು ಪ್ರಸೂತರಾದರು. ಕೌಸಲ್ಯೆಗೆ ಶ್ರೀರಾಮ, ಸುಮಿತ್ರೆಗೆ ಲಕ್ಷ್ಮಣ -ಶತ್ರುಘ್ನ ಅವಳಿ, ಮತ್ತು ಕೈಕೇಯಿಗೆ ಭರತ. ಹೀಗೆ ನಾಲ್ವರು ಪುತ್ರರಾದರು. ಅರಸು - ಅರಸಿಯರ ಇಚ್ಛೆ ಪೂರ್ಣವಾಯಿತು. ರಾಜಭವನದಲ್ಲಿಯ ಸುಖದ ಸೀಮೆ ಮೀರಿತು. ಎಲ್ಲಿಡೆ ಆನಂದವೇ ಆನಂದ. ನಾಲ್ವರು ಬಂಧುಗಳು ಅಂಬೇಗಾಲಿಕ್ಕ ಹತ್ತಿದರು. ಆದರೂ ಅಯೋಧ್ಯೆಯ ಮಹಿಳೆಯರು ಮತ್ತೆ ಮತ್ತೆ ಶ್ರೀ ರಾಮಜನ್ಮ ಗೀತೆಯನ್ನು ಹಾಡುತ್ತಲೇ ಇದ್ದರು.

# ಅಧ್ಯಾಯ ೬

## ಸಖಿಯರೇ ರಾಮಜನ್ಮವಾಯಿತು (ಮಹಿಳೆಯರು)

ಸಖಿಯರೇ ಚೈತ್ರ ಶುದ್ಧ ನವಮಿ ಇಂದು. ಈ ಮಧ್ಯಾಹ್ನ ಕಾಲದಲ್ಲಿ ಸೂರ್ಯ ನೆತ್ತಿಯ ಮೇಲೆ ನಿಂತನೇಕೆ ಗೊತ್ತೇ ? ರಾಮಜನ್ಮವಾಯಿತೆಂದು ! ತಿಳಿಯಿತೇ ? ಕೌಸಲ್ಯೇ ಮೆಲ್ಲಗೆ ತನ್ನ ಕಣ್ಣುಗಳನ್ನು ತೆರೆದು ತನ್ನ ಮಗನನ್ನು ನೋಡಿದಳು. ಪುತ್ರ ದರ್ಶನದಿಂದ ಅವಳ ಕಣ್ಣುಗಳು ಕುಕ್ಕಿದವು. ಸಂತೋಷದಿಂದ ಉಬ್ಬಿ ನಿಂತಿತವಳ ಕಂಠ, ಆನಂದಾಶ್ರುಗಳು ಉದುರಿದವು.

ಸಖಿಯರೇ, ರಾಜಗೃಹದಲ್ಲಿ ಸೌಖ್ಯದ ಹೊಸ ಪರ್ವ ಬಂದಂತಾಯಿತು. ಹಸುಗಳ ಹಂಬರವ ಜೊತೆಗೆ ದುಂದುಭಿಯ ನಾದ ಸೇರಿ ಆಕಾಶವನ್ನೆಲ್ಲ ತುಂಬಿತು. ಸಖಿಯರೇ ರಾಮಜನ್ಮವಾದೊಡನೆ ಮತ್ತೇನಾಯಿತು ಗೊತ್ತೇ? ಬಿಸಿಲಿನ ಬೇಗೆಗೆ ಬಾಡಿದ ಮೊಗ್ಗುಗಳು '' ಏನು ಏನು'' ಅನ್ನುತ್ತ ಅಚ್ಚರಿಯಿಂದ ಹುಚ್ಚರಂತಾಗಿ ಅರಳಿ ನಿಂತವು ! ಇದನ್ನು ಕಂಡು ವಾಯುದೇವ ದೊಡ್ಡ ಧ್ವನಿಯಲ್ಲಿ ನಗುತ್ತ ಅವುಗಳನ್ನು ಹಿಡಿದು ಅಲುಗಾಡಿಸಿದ !

ಈ ಹರ್ಷದ ವಾರ್ತೆ ನಗರದಲ್ಲಿಯ ಜನಕ್ಕೆ ತಲುಪುವುದೊಂದೆ ತಡ, ತಂಡ ತಂಡಗಳಲ್ಲಿ ಅವರು ರಾಜಭವನಕ್ಕೆ ಧಾವಿಸಿದರು. ಯುವತಿಯರ ಸಂಘವೊಂದು ಬಂದು ಹಾಡಲಾರಂಭಿಸಿತು. ಇನ್ನೂ ಕೆಲವರು ಪುಷ್ಪಾಂಜಲಿಯನ್ನು ಅರ್ಪಿಸಿದರು. ಹಲವರು ತಮ್ಮ

ನಗೆಗಡಲಲ್ಲಿ ಮುಳುಗಿ ಶಬ್ದಗಳನ್ನೇ ಮರೆತರು ! ವಾದ್ಯಗಳು ದ್ರುತ ತಾಳದಲ್ಲಿ ಮೊಳಗತೊಡಗಿದವು. ನೂಪುರದ ಧ್ವನಿಯಲ್ಲಿ ವೀಣೆ ಕೇಳಿಸದಂತಾಯಿತು. ಕಹಳೆಯ ಮೊಳಗಿನಲ್ಲಿ ಅಬ್ಬರವೆಲ್ಲ ಅಡಗಿತು. ಮಾವಿನ ಮರದಲ್ಲಿದ್ದ ಕೋಗಿಲೆ ಗಾಬರಿಗೊಂಡು ಮೂಕವಾಯಿತು. ಈ ಮಹಾ ಸಂಭ್ರಮವನ್ನು ನೋಡಬೇಕೆಂಬ ಆಸೆ ದಿಗ್ಗಜರಿಗೆ ಆಗಿ ಅವರೂ ತುಸು ಸರಿದು ಈ ಸಂತಸದ ಚಿತ್ರವನ್ನು ಕಂಡು ಹರುಷಪಟ್ಟರು.

ಗಗನಕ್ಕೆ ಇಂದು ಹೊಸ ಬಣ್ಣ ಬಂತು. ರಾಶಿ ರಾಶಿ ಮುತ್ತುಗಳು ನಭದಲ್ಲಿ ಹೊಳೆದವು. ನಗರವೆಲ್ಲ ನೃತ್ಯಗಾಯನದಲ್ಲಿ ಮುಳುಗಿತು. ರಾಗ ಸ್ವರಗಳಲ್ಲಿ ಮೇದಿನಿ ಮಗ್ನಳಾಗಿ ತಲೆದೂಗಿದಳು. ಅವಳನ್ನು ಅನುಸರಿಸಿ ಶೇಷನೂ ತುಸು ಅಲುಗಾಡಿದ.

ಈ ರೀತಿಯಾಗಿ ಆನಂದಮಯ ಗೀತೆಯಲ್ಲಿ - ಅಯೋಧ್ಯೆ ಮೈಮರೆತಿತ್ತು. ಅರಮನೆಯಲ್ಲಿ ಶ್ರೀರಾಮ ದಿನಗಳೆದಂತೆ ಬೆಳೆಯತೊಡಗಿದ. ತಪ್ಪು ಹೆಜ್ಜೆ ಇಡಲು ಆರಂಭಿಸಿದ. ತೊದಲು ನುಡಿ ಆಡತೊಡಗಿದ ಕೌಸಲ್ಯೆಗೋ, ತಂಗಿಯರಂತಿದ್ದ ತನ್ನ ಸವತಿಯರೆದುರು ತನ್ನ ಮಗನನ್ನು ಅದೆಷ್ಟು ವರ್ಣಿಸಿದರೂ ಅವಳಿಗೆ ತೃಪ್ತಿ ಇಲ್ಲ.

## ಅಧ್ಯಾಯ ೭
## "ನೀಲ ವರ್ಣದ ನಮ್ಮ ರಾಮಚಂದ್ರ" (ಕೌಸಲ್ಯೆ)

ತಂಗಿಯರೇ ನೋಡಿರೇ, ಶ್ಯಾಮ ವರ್ಣದ ನಮ್ಮ ರಾಮಚಂದ್ರ ರತ್ನ ಮಂಚದಲ್ಲಿ ಹೇಗೆ ಮಲಗಿದ್ದಾನೆ. ಹಾಗೆ ಮಲಗಿದ್ದಾಗ ಚಂದ್ರ ಆತನನ್ನು ನೋಡಿ ನಾಚಿ ಮೋಡದಲ್ಲಿ ಅಡಗುತ್ತಾನೆ. ತಮ್ಮಂದಿರೊಡನೆ ಆತ ಬೆರೆತು ಆಡುತ್ತಿರುವಾಗ ಹೀರಕಗಳ ಮಧ್ಯೆ ನೀಲ ಮಣಿಯಂತೆ ಆತ ಶೋಭಿಸುತ್ತಾನೆ. ತನ್ನ ತಮ್ಮಂದಿರನ್ನು ಆತ ಹೇಗೆ ಪ್ರೀತಿಸುತ್ತಾನೆ ನೋಡಿರೆ ನಮ್ಮ ರಾಮ ! ಸಖಿಯರೇ ದೊಡ್ಡವರೂ ಕೂಡ ಅವನು ಪ್ರೀತಿಸುವ ರೀತಿಯನ್ನು ಕಲಿಯಬೇಕು ನೋಡಿರೇ.

ರಾಮ ಮತ್ತು ಆತನ ಮೂವರು ಅನುಜರು ಸೇರಿ ಈ ನಾಲ್ವರು ನಮ್ಮೆಲ್ಲರ ಭಾಗ್ಯದ ಅಖಂಡ ಚರಣಗಳೇ ಅಲ್ಲವೇ ? ಇನ್ನು ನಮ್ಮ ರಾಮಚಂದ್ರನ ತೊದಲು ನುಡಿಗಳ ಪ್ರಭಾವವನ್ನೇನು ಹೇಳಲಿ ! ತೊದಲು ಮಾತು ಆಡುವ ರಾಮಚಂದ್ರನ ಜೊತೆ ಮಾತನಾಡುವಾಗ ನಮ್ಮ ಮಾತು ತೊದಲಾಗುವುದು. ಇಷ್ಟೇ ಅಲ್ಲ. ವಿಪ್ರರು ಈತನ ತೊದಲು ನುಡಿಗಳನ್ನು ಕೇಳಿ ಕೇಳಿ ಮಂತ್ರ ಪಠಿಸುವಾಗ ಅವರೂ ತೊದಲ ಹತ್ತಿದರು. ಸಖಿಯರೇ ಏನು ಹೇಳಲಿ! ಅಂದು ಆತ ಆಕಾಶದಲ್ಲಿಯ ಚಂದ್ರನನ್ನು ಬೇಡಿ ಅಳಹತ್ತಿದಾಗ

ನಮ್ಮೆಲ್ಲರಿಗೆ ಆ ದಿನ ಇರುಳೆಲ್ಲ ಅರಮನೆಯಲ್ಲಿ ಜಾಗರಣೆ.

''ನಾಳೆ ನಮ್ಮ ರಾಮಚಂದ್ರ ದೊಡ್ಡವನಾದನೆಂದರೆ ತನ್ನ ದೇವಕೃಪೆಯ ವೃಷ್ಟಿಯನ್ನು ಆತ ನಮ್ಮೆಲ್ಲರ ಮೇಲೆ ಸುರಿಸುತ್ತಾನೆ'' ಅನ್ನುತ್ತಾಳೆ ಕೌಸಲ್ಯೆ. ಹೀಗೆ ಅವಳಿಗೆ ರಾಮನ ಸಂಭ್ರಮವೇ ಸಂಭ್ರಮ.

ಹೀಗೆ - ಮಹಾರಾಣಿ ಕೌಸಲ್ಯೆಯ ಶ್ಯಾಮವರ್ಣ ರಾಮಚಂದ್ರ ದಿನಗಳೆದಂತೆ ಬೆಳೆದು ನಿಂತ ಚಿಕ್ಕವನಿರುವಾಗಲೇ ಧನುರ್ವಿದ್ಯೆಯಲ್ಲಿ ಪರಿಣತಿ ಪಡೆದ. ಧಾರ್ಮಿಕ ಗ್ರಂಥಗಳನ್ನು ಅಭ್ಯಸಿಸಿದ. ಈಗ ಆತ ರಾಜ್ಯಸಭೆಯಲ್ಲಿ ಬಂದು ಕುಳಿತುಕೊಳ್ಳಲು ಪ್ರಾರಂಭಿಸಿದ. ಅವನ ಜೊತೆಯಲ್ಲಿ ಲಕ್ಷ್ಮಣಾದಿ ಅವನ ತಮ್ಮಂದಿರೂ ನಿಷ್ಣಾತರಾದರು.

ಹೀಗೆ ಒಮ್ಮೆ ದಶರಥರಾಜ ತನ್ನ ಮಕ್ಕಳೊಂದಿಗೆ ರಾಜ ಸಭೆಯಲ್ಲಿ ಕುಳಿತಿದ್ದಾಗ ಆಕಸ್ಮಾತ್ತಾಗಿ ಮಹರ್ಷಿ ವಿಶ್ವಾಮಿತ್ರರು ಆಗಮಿಸಿದರು. ರಾಜನು ಮುನಿಗಳನ್ನು ಆನಂದದಿಂದ ಬರಮಾಡಿಕೊಂಡ. ಪಾದಪ್ರಕ್ಷಾಲನಾದಿಗಳನ್ನು ಪೂರೈಸಿ, ಅವರನ್ನು ಉಚ್ಚಾಸನದ ಮೇಲೆ ಕುಳ್ಳಿರಿಸಿದ, ಮತ್ತು ನಮ್ರಭಾವದಿಂದ ''ಮುನಿವರ್ಯರೇ, ತಾವು ಯಾವ ಕಾರ್ಯದ ನಿಮಿತ್ತ ಆಗಮಿಸಿರುವಿರಿ ಎಂಬುದನ್ನು ಹೇಳಿದರೆ ನಾನದನ್ನು ಸರ್ವಸ್ವವಾಗಿ ಪೂರೈಸುವೆ'' ಎಂದ ದಶರಥರಾಜ.

## ಅಧ್ಯಾಯ ೮

## ದಶರಥಾ ನಿನ್ನ ಜ್ಯೇಷ್ಠ ಪುತ್ರ ಶ್ರೀರಾಮಚಂದ್ರನನ್ನು ನನಗೆ ಕೊಡು (ವಿಶ್ವಾಮಿತ್ರ)

ದಶರಥರಾಜನ ಮಾತುಗಳಿಂದ ತುಂಬಾ ಹರ್ಷಿತರಾದ ವಿಶ್ವಾಮಿತ್ರರು ಹೇಳುತ್ತಾರೆ. '' ರಾಜಾ ನನ್ನ ಯಜ್ಞಕಾರ್ಯದಲ್ಲಿ ರಾಕ್ಷಸರಿಂದ ತುಂಬಾ ವಿಘ್ನವುಂಟಾಗಿದೆ. ಏನು ಮಾಡಿದರೂ ನನ್ನ ಯಜ್ಞ ಸಾಂಗವಾಗಲೊಲ್ಲದು. ಅವರಿಂದ ತುಂಬಾ ತೊಂದರೆ ನನಗೆ, ಆದುದರಿಂದ ಯಜ್ಞ ರಕ್ಷಣಾರ್ಥವಾಗಿ ನಿನ್ನ ಜ್ಯೇಷ್ಠ ಪುತ್ರ ರಾಮಚಂದ್ರನನ್ನು ನನಗೆ ಕೊಡು. ಯಜ್ಞ ಸಂರಕ್ಷಣಾ ಕಾರ್ಯಕ್ಕೆ ಆತ ಸರ್ವಥಾ ಯೋಗ್ಯನಿದ್ದಾನೆ. ನಿತ್ಯ ಕ್ಷಮಾಶೀಲನಾದ ದೀಕ್ಷಿತ ನಾನು. ರಾಕ್ಷಸರಿಗೆ ಶಾಪವನ್ನು ಹೇಗೆ ಹೇಗೆ ಕೊಡಲಿ ಎಂದು ಹೂಡಿದ ಯಜ್ಞವನ್ನು ಮುಗಿಸಿಕೊಂಡು ಬೇರೆ ಸ್ಥಳಕ್ಕೆ ಹೋಗಿ ಪುನಃ ಯಜ್ಞವನ್ನು ಪ್ರಾರಂಭಿಸುತ್ತೇನೆ. ಯಜ್ಞಮಂಟಪದಲ್ಲಿ ಯಜ್ಞಕುಂಡವನ್ನು ಪ್ರಜ್ವಲಿಸುವುದೊಂದೇ ತಡ, ಅಲ್ಲಿ ಕೂಡ ರಾಕ್ಷಸರು ಪುನಃ ಪ್ರಕಟರಾಗಿ ಯಜ್ಞಕ್ಕೆ ವಿಘ್ನವನ್ನುಂಟು ಮಾಡುವರು.

ವೇದಿಕೆಯ ಮೇಲೆ ಅವರು ರಕ್ತ ಮಾಂಸಗಳನ್ನು ತಂದು ಒಗೆಯುವರು. ರಾಜಾ, ಏನು ಹೇಳಲಿ ? ಆಗ ನಮ್ಮ ಮಂತ್ರ ತಂತ್ರಗಳೆಲ್ಲ ನಿಂತು ಹೋಗುವವು ಆಗ ರಾಕ್ಷಸರು ಮನಬಲ್ಲಂತೆ ಕುಣಿದಾಡಿ ಅದೃಶ್ಯರಾಗುವರು.

ರಾಜಾ, ಇಂತಹ ಬಲಾಢ್ಯ ರಾಕ್ಷಸರನ್ನು ನಿನ್ನ ಬಾಲಕ ರಾಮ ಹೇಗೆ ಎದುರಿಸಬಲ್ಲನೆಂದು ಸಂಶಯವೇ ನಿನಗೆ? ಹಾಗೆಂದೂ ತಿಳಿಯಬೇಡ. ಬಾಲವೀರನಾತ. ರಾಕ್ಷಸರನ್ನು ಸರಿಯಾಗಿ ಶಿಕ್ಷಿಸಬಲ್ಲ. ಚಿಕ್ಕವನಾದರೂ ನಿನ್ನ ಜ್ಯೇಷ್ಠಪುತ್ರನ ಯೋಗ್ಯತೆ ಬಹುದೊಡ್ಡದು ತಿಳಿಯಿತೇ ? ಯಾಕೆ ಸಂಶಯ ಪಡುವಿ ರಾಜಾ ? ರಾಜನ ಕೃಪೆಯನ್ನು ನಾನು ಬೇಡಿಕೊಂಡೆ, ಬೇಡಿಕೆ ಪೂರೈಸುವುದಾಗಿ ನೀನು ವಚನ ಕೊಟ್ಟಿರುವಿ. ರಾಜಾ, ಕೊಟ್ಟ ವಚನ ಪಾಲಿಸುವಲ್ಲಿ ನಿನಗೆ ಭಯವೇ ? ರಘುವಂಶಜರಾದ ನಿಮಗೆ ಪ್ರಾಣಕ್ಕಿಂತ ವಚನ ಹೆಚ್ಚು ಮೆಚ್ಚು ಎಂಬುದನ್ನು ನೆನೆದುಕೋ, ಅಗೋ ನೋಡಲ್ಲಿ, ರಾಮನಲ್ಲಿಯಂತೂ ನನ್ನ ಜೊತೆ ಬರುವ ಸಿದ್ಧತೆಗಳು ತೋರುತ್ತವೆ. ಯಾಕೆ ಕೌಸಲ್ಯೆ ಈ ಅಳುವು ? ವೀರಮಾತೆ ನೀನು ಕಣ್ಣೀರಿಡುವುದೇ ಇಂಥ ಸಮಯದಲ್ಲಿ ? ನಿನ್ನ ಪುತ್ರ ರಣದಲ್ಲಿ ಹೋರಾಡುತ್ತಿರುವುದು ಉಭಯ ವಂಶಕ್ಕೆ ಧನ್ಯತೆಯಲ್ಲವೇ ? ನಿಲ್ಲಿಸು ಅಳುವನ್ನು ಮಾರೀಚ, ಸುಬಾಹು ಮೊದಲಾದ ರಾಕ್ಷಸರು ರಾಮನನ್ನು ಕಂಡೊಡನೆ ತಮ್ಮ ಶಸ್ತ್ರಗಳನ್ನು ಕೆಳಗಿಡುವರು.

ಏನಪ್ಪಾ, ರಾಮಚಂದ್ರಾ, ನನ್ನ ಜೊತೆಗೆ ಬರಲು ಸಿದ್ಧನಿರುವೆಯಾ ? ನಡೆ ಹಾಗಾದರೆ ನಿನ್ನ ಬಿಲ್ಲು ಬಾಣಬತ್ತಳಿಕೆಗಳನ್ನು ತೆಗೆದುಕೋ. ಅಗೋ ನೋಡಲ್ಲಿ , ನಿನ್ನ ತಮ್ಮ ಲಕ್ಷ್ಮಣನೂ ನಿನ್ನ ಜೊತೆ ಬರಬೇಕೆಂದು ತವಕಪಡುತ್ತಿದ್ದಂತೆ ಕಾಣಿಸುತ್ತದೆ. ಬರಲಿ ಅವನೂ.

ವಿಶ್ವಾಮಿತ್ರರು ಈ ರೀತಿ ನುಡಿವುದೊಂದೇ ತಡ, ರಾಮ-ಲಕ್ಷ್ಮಣರಿಬ್ಬರೂ ಅವರ ಜೊತೆ ಹೊರಡಲು ಸಿದ್ಧರಾದರು - ಎಂದು ಗೀತಾ ರಾಮಾಯಣದ ೮ ನೆಯ ಅಧ್ಯಾಯದೊಂದಿಗೆ **ಶ್ರೀ ರಾಮಾಯಣ ನಿತ್ಯ ಚಿಂತನ** ಸಪ್ತಾಹದ ೧ನೆಯ ದಿನ ಮುಗಿದುದು.

ಶ್ರೀರಾಮಚಂದ್ರಾರ್ಪಣ ಮಸ್ತು

ರಾಮರಕ್ಷಾಭಾಗ

ಧ್ಯಾತ್ವಾನೀಲೋತ್ಪಲಶ್ಯಾಮಂ ರಾಮಂ ರಾಜೀವಲೋಚನಂ ।
ಜಾನಕೀಲಕ್ಷ್ಮಣೋಪೇತಂ ಜಟಾಮುಕುಟಮಂಡಿತಂ ॥ ೧ ॥

ಸಾಸಿತೂಣಧನುರ್ಬಾಣಪಾಣಿಂ ನಕ್ತಂಚರಾಂತಕಂ ।
ಸ್ವಲೀಲಯಾ ಜಗತ್ತ್ರಾತುಂ ಆವಿರ್ಭೂತಮಜಂ ವಿಭುಂ ॥ ೨ ॥

ರಾಮರಕ್ಷಾಂ ಪಠೇತ್ ಪ್ರಾಜ್ಞಃ ಪಾಪಘ್ನೀಂ ಸರ್ವಕಾಮದಾಂ ।
ಶಿರೋ ಮೇ ರಾಘವಃ ಪಾತು ಭಾಲಂ ದಶರಥಾತ್ಮಜಃ ॥ ೩ ॥

ಕೌಸಲ್ಯೇಯೋ ದೃಶೌ ಪಾತು ವಿಶ್ವಾಮಿತ್ರಪ್ರಿಯಃ ಶ್ರುತೀ ।
ಘ್ರಾಣಂ ಪಾತು ಮಖತ್ರಾತಾ ಮುಖೌ ಸುಮಿತ್ರಿ ವತ್ಸಲಃ ॥ ೪ ॥

**ಜಾನಕೀ ಜೀವನ ಸ್ಮರಣ ಜಯಜಯ ರಾಮ**
**ಶ್ರೀರಾಮ ಜಯರಾಮ ಜಯ ಜಯ ರಾಮ (೧೦ ಸಾರೆ)**
**ಜಯ ಜಯ ರಘುವೀರ ಸಮರ್ಥ**

# ಸಪ್ತಾಹದ ೨ ನೆಯ ದಿನ

ಶ್ರೀ ರಾಮ ಜಯರಾಮ ಜಯ ಜಯರಾಮ ( ೧೦ ಸಾರೆ )

''ಜಯ ಜಯ ರಘುವೀರ ಸಮರ್ಥ''

**ಧ್ಯಾನ್ಯ ಶ್ಲೋಕ :-**

**ಧ್ಯಾಯೇದಾ ಜಾನುಬಾಹುಂ --------- ಮಂಡನಂ ರಾಮಚಂದ್ರಂ**

**ಇತಿಧ್ಯಾನಂ**

''ಜಯ ಜಯ ರಘುವೀರ ಸಮರ್ಥ''

**ಪೂರ್ವಕಥಾನುವಾದ**:- ಶ್ರೀ ರಾಮಚಂದ್ರ ಅಯೋಧ್ಯೆಯಲ್ಲಿ ಪ್ರಾರಂಭಿಸಿದ ಅಶ್ವಮೇಧ ಯಜ್ಞಕ್ಕಾಗಿ ಜನರ ಮಹಾಸಾಗರವೇ ಸೇರಿದೆ. ಆಕಾಲಕ್ಕೆ ಮುನಿಗಳ ವೇಷ ಧರಿಸಿದ ಇಬ್ಬರು ಕುವರರು ಬಂದು ''ನಾವು ವಾಲ್ಮೀಕಿ ಋಷಿಗಳ ಶಿಷ್ಯರು ನಾವು ರಾಮಚರಿತೆ ಹಾಡುವೆವು'' ಎಂದರು. ಅವರ ಮುಖದಲ್ಲಿ ರಾಜಕಳೆ ಉಕ್ಕುತ್ತಿದೆ! ವಾಲ್ಮೀಕಿ ಮಹರ್ಷಿಗಳ ಶಿಷ್ಯರೆನ್ನುತ್ತಾರೆ. ಆಗ ಶ್ರೀರಾಮಚಂದ್ರನಿಗೆ ಏನೋ ಕೇಳಬೇಕೆಂಬ ಕುತೂಹಲವಾಯಿತು. ಕುವರರ ಇಂಪಾದ ಹಾಡುಗಳನ್ನು ಕೇಳಿ ಶ್ರೀ ರಾಮಚಂದ್ರನಿಗೆ ಸಿಂಹಾಸನದ ಮೇಲೆ ಕುಳಿತುಕೊಳ್ಳಲು ಆಗದೇ ಕೆಳಗಿಳಿದು ಬಂದು ಕುವರರನ್ನು ಅಪ್ಪಿಕೊಂಡ. ಪಿತಾ-ಪುತ್ರರ ಮಿಲನವಿವಾಗಿದ್ದರೂ ಉಭಯತರಿಗೂ ಅದು ಗೊತ್ತಾಗಲಿಲ್ಲ ಎಂಬುದು ಈ ಸನ್ನಿವೇಶದ ವಿಶೇಷ.

ಕುವರರು ತಮ್ಮ ರಾಮಚರಿತೆಯನ್ನು ಮುಂದುವರಿಸಿ - ಪ್ರಾರಂಭದಲ್ಲಿ ಸರಯೂ ನದಿಯ ತೀರದ ಮೇಲಿರುವ ಅಯೋಧ್ಯಾನಗರದ ಸೌಂದರ್ಯವನ್ನು ವರ್ಣನೆ ಮಾಡುತ್ತಾರೆ. ಅಲ್ಲಿ ಇರುವವರಲ್ಲಿ ದುಷ್ಟರಾಗಲಿ, ನಿರ್ದಯನಾಗಲಿ, ನಾಸ್ತಿಕನಾಗಲಿ ಯಾರೂ ಇರಲಿಲ್ಲ. ಪ್ರಜೆಗಳೆಲ್ಲ ಧರ್ಮಪಾರಾಯಣ ದಶರಥರಾಜನ ಆಡಳಿತದಲ್ಲಿ ಸಂತೃಪ್ತರಾಗಿ ಸುಖದಿಂದ ಇದ್ದರು. ಅಲ್ಲಿ ಅತೃಪ್ತಿಗೆ ಆಸ್ಪದವೇ ಇರಲಿಲ್ಲ. ಆದರೆ ಒಂದೇ ಒಂದು ಕೊರತೆಯೆಂದರೆ - ಅರಸನ ಮೂವರು ಅರಸಿಯರಾದ ಕೌಸಲ್ಯೆ, ಸುಮಿತ್ರೆ, ಕೈಕೇಯಿ ಇವರಾರಿಂದಲೂ ಈವರೆಗೂ ಪುತ್ರೋತ್ಸವ ಆಗಲಿಲ್ಲವಲ್ಲ ಎಂಬುದು. '' ಏನರ್ಥ ನಮ್ಮ ರಾಜನ ಬರೀ ಸಂಪತ್ತಿಗೆ ? ಸಂತತಿ ಇಲ್ಲವಲ್ಲ'' ಎಂಬುದು ಅಯೋಧ್ಯಾ ಪ್ರಜೆಗಳ ನಿತ್ಯ ಹಂಬಲ.

ಹೀಗಿರುವಾಗ ದಶರಥರಾಜನಿಗೆ ಅಶ್ವಮೇಧ ಯಜ್ಞಮಾಡಲು ಪ್ರೇರಣೆ ಆಗುತ್ತದೆ. ತದನಂತರ ಋಷಿ ಮುನಿಗಳ ಸಾನಿಧ್ಯದಲ್ಲಿ ಅಶ್ವಮೇಧ ಯಜ್ಞವು ಯಥಾಸಾಂಗವಾಗಿ ನೆರವೇರಿತು. ಯಜ್ಞಕುಂಡದ ಜ್ವಾಲೆಯಿಂದ ಯಜ್ಞಪುರುಷ ಪ್ರತ್ಯಕ್ಷನಾಗಿ ಪಾಯಸ ಪ್ರಸಾದವನ್ನಿತ್ತ. ಮೂವರು ರಾಣಿಯರು ಅದನ್ನು ಸೇವಿಸಿದರು. ಪರಿಣಾಮವಾಗಿ ಕೌಸಲ್ಯೆಗೆ - ಶ್ರೀರಾಮ, ಸುಮಿತ್ರೆಗೆ - ಲಕ್ಷ್ಮಣ, ಶತ್ರುಘ್ನ, ಕೈಕೆಯಿಗೆ - ಭರತ. ಹೀಗೆ ನಾಲ್ವರು ವಿಷ್ಣುವಿನ ಅಂಶರಾದ ಪುತ್ರರ ಜನ್ಮವಾಯಿತು. ಅವರ ಬಾಲಲೀಲೆಗಳೆಲ್ಲ ಮುಗಿದು ಪ್ರೌಢರಾದರು, ಪ್ರವೀಣರಾದರು.

ಒಂದು ದಿನ ವಿಶ್ವಾಮಿತ್ರರು ಅನಿರೀಕ್ಷಿತವಾಗಿ ಆಗಮಿಸಿ ಯಜ್ಞಸಂರಕ್ಷಣಾರ್ಥ ವಾಗಿ ಶ್ರೀರಾಮನನ್ನು ಬೇಡಿದರು. ಲಕ್ಷ್ಮಣನೂ ಅವನನ್ನು ಹಿಂಬಾಲಿಸಿದ. ಹೀಗೆ ರಾಮ - ಲಕ್ಷ್ಮಣರಿಬ್ಬರೂ ತಮ್ಮ ಬಿಲ್ಲು ಬಾಣಗಳನ್ನೆತ್ತಿಕೊಂಡು ಯಜ್ಞಸಂರಕ್ಷಣಾರ್ಥವೆಂದು ಪ್ರಪ್ರಥಮವಾಗಿ ಅಯೋಧ್ಯಾನಗರದಿಂದ ಹೊರ ಹೊರಟರು - ಎಂಬುದು ನಿನ್ನಿನ ಕಥೆ, **ಇನ್ನು ಇಂದಿನ ಕಥೆ ಕೇಳೋಣ.**

ಕರ್ತವ್ಯಕ್ಕಾಗಿ ಮಕ್ಕಳ ಮೇಲಿನ ತನ್ನ ಮಮತೆಯನ್ನು ಬದಿಗೆ ಸರಿಸಿ ''ವಿಜಯಿಗಳಾಗಿ ಬನ್ನಿ'' ಎಂದು ಕೌಸಲ್ಯೆ ರಾಮ-ಲಕ್ಷ್ಮಣರಿಗೆ ಆಶೀರ್ವದಿಸಿದಳು. ದಶರಥರಾಜ ಇಬ್ಬರು ಮಕ್ಕಳ ನೆತ್ತಿಯನ್ನು ಮೂಸಿ ಅವರನ್ನು ಬೀಳ್ಕೊಟ್ಟ. ಮಹರ್ಷಿ ವಿಶ್ವಾಮಿತ್ರರಂತಹ ಜ್ಞಾನಸಂಪನ್ನ ನೇತಾರರ ಜೊತೆಯಲ್ಲಿ ರಾಮ ಲಕ್ಷ್ಮಣರಿಬ್ಬರೂ ತಮ್ಮ ಪರಾಕ್ರಮ ಪ್ರದರ್ಶಿಸಲು ಪ್ರಥಮ ಬಾರಿ ಅಯೋಧ್ಯಾ ಪಟ್ಟಣದಿಂದ ಹೊರ ಹೊರಟರು. ಪ್ರವಾಸದಲ್ಲಿ ಗುರುದೇವ ವಿಶ್ವಾಮಿತ್ರರು ಅವರಿಬ್ಬರಿಗೂ ಅನೇಕ ಕಥೆಗಳನ್ನು ಹೇಳಿ ಜ್ಞಾನವನ್ನು ಮಾಡಿಕೊಡುತ್ತಿದ್ದರು. ಹಾಗೇ ಮುಂದಕ್ಕೆ ಸಾಗುತ್ತಿದ್ದಂತೆ ಮಲದ - ಕರುಷ ದೇಶವನ್ನು ಪ್ರವೇಶಿಸಿದರು. ಆಗ ಸಿಡಿಲು ಬಿದ್ದಂತೆ, ಭೀಷಣ ಶಬ್ದ ಬಿದ್ದು ಮಹಾ ರಾಕ್ಷಸಿಯೊಬ್ಬಳು ದಾರಿಗೆ ಅಡ್ಡಾಗಿ ನಿಂತಳು.

# ಅಧ್ಯಾಯ ೬

## ರಾಮಚಂದ್ರಾ, ಸಂಹರಿಸು ತಾಟಕೀಯನ್ನು (ವಿಶ್ವಾಮಿತ್ರ)

ಸಂತಪ್ತರಾದ ವಿಶ್ವಾಮಿತ್ರರು ಗುಡುಗಿದರು - ''ರಾಮಾ ತತ್‌ಕ್ಷಣ ಬಿಲ್ಲು ಹೆದೆಯನ್ನೇರಿಸಿ ಬಾಣ ಬಿಡು. ಸಂಹರಿಸು ಈ ತಾಟಕಿಯನ್ನು ಏನು ನೋಡುವಿ ? ಅಭದ್ರೆ ಇವಳು. ದುಷ್ಟಳು, ಮಾಯಾವಿಯು. ಇವಳ ನೋಟ ಮಾಟ ನಿನಗೆ ಗೊತ್ತಿಲ್ಲ. ಕೆಂಡವನ್ನೇ ಕಾರುತ್ತಿರುವ ಇವಳ ಕಣ್ಣುಗಳ ಝಳಕ್ಕೆ ಮರದ ಎಲೆಗಳೆಲ್ಲ ಕಮರುತ್ತಿರುವವು. ಕಾನನ ದಹಿಸಹತ್ತಿದೆ. ತಾನು ಅತುಲ ಬಲಶಾಲಿ ಎಂದು ಮಹಾಗರ್ವ ಇವಳಿಗೆ. ಮೂರ್ತಿಮಂತ ಕ್ರೂರಳಿವಳು. ರಾಮಾ, ಇವಳ ಹಾಸ್ಯವನ್ನು ಕೇಳು. ಇವಳ ಹಲ್ಲು ಒಸಡೆಗಳನ್ನು ನೋಡು. ಗಜವನ್ನು ಕೊಂದು ಗುಹೆಯಲ್ಲಿ ತುರುಕಿದಂತಾಗಿದೆ. ಮೃತ್ಯುವಿನ ನೆರಳೇನೋ ಎಂಬಂತೆ, ಹೇಗೆ ಸಾಗಿ ಬರುತ್ತಿರುವಳು ನೋಡು. '' ತಡೆದುದೇಕೆ ರಾಮಚಂದ್ರಾ ? ಬಿಡು ಬಾಣವನ್ನು. ನೀನೇ ಅವಳಿಗೆ ಮೃತ್ಯು ಎಂಬುದನ್ನು ನಾನು ಬಲ್ಲೆ. ಅವಳು 'ನಾರಿ' ಎಂದು ಸಂಹರಿಸಲು ಸಂಕೋಚವೇ ನಿನಗೆ ? '' ಜನ ಸೌಖ್ಯಕ್ಕಾಗಿ ನಾರಿ ವಧೆ ಕ್ಷಮ್ಯ'' - ಎಂದು ಧರ್ಮ ಹೇಳುತ್ತದೆ. ಮಾನವೇಂದ್ರಾ, ನಿನಗೆ ಗೊತ್ತಿಲ್ಲವೇ ? ಹಿಂದೆ ದೇ-

ಮುಂಥಲೆಯು ಭೂಮಿಯುನ್ನು ನುಂಗ ಬಯುಸಿದಾಗ, ದೇವೇಂದ್ರ ಅವಳನ್ನು ಸಂಹರಿಸಲಿಲ್ಲವೇ ? ಧರ್ಮಸಾಗರನೇ ಆದ ಶ್ರೀವಿಷ್ಣುವು ಶುಕ್ರಮಾತೆಯುನ್ನು ಕೊಲ್ಲಲಿಲ್ಲವೇ ? ಅಂದಮೇಲೆ ಹಿಂದು ಮುಂದು ನೋಡದೇ ಸಂಹರಿಸು ಇವಳನ್ನು. ಅಗೋ, ಅತಿ ಕ್ರೋಧದಿಂದ ನಮ್ಮೆಡೆಗೆ ಧಾವಿಸಿ ಬರುತ್ತಿರುವಳವಳು. ಕಳಿಸವಳನ್ನು ನರಕಕ್ಕೆ ಈ ಕ್ಷಣವೇ. ನಿನ್ನ ಈ ವಿಕ್ರಮುವನ್ನೇ ದೇವಗಂಧರ್ವರು ಆತುರದಿಂದ ನೋಡುತ್ತಿರುವರು, ಶೌರ್ಯಚಂದ್ರನ ಹುಣ್ಣಿವೆ ಬೆಳಗಲಿಂದು ಎಂದು ವಿಶ್ವಾಮಿತ್ರರು ಹೇಳುತ್ತಿರುವಾಗಲೇ ಶ್ರೀರಾಮನು ನೇರವಾಗಿ ತಾಟಕಿಗೆ ಬಾಣಬಿಟ್ಟಾಗ ಆ ರಾಕ್ಷಸಿ ನೆಲಕ್ಕುರಳಿದಳು.

ಮಹರ್ಷಿ ವಿಶ್ವಾಮಿತ್ರರ ಆಜ್ಞೆಯಂತೆ ಶ್ರೀರಾಮನು ತಾಟಕಾ ರಾಕ್ಷಸಿಯನ್ನು ವಧೆ ಮಾಡಿದಾಗ, ದೇವಗಂಧರ್ವರು ಸಂತೋಷಭರಿತರಾಗಿ ಆಕಾಶದಿಂದ ಶ್ರೀರಾಮನ ಮೇಲೆ ಪುಷ್ಪವೃಷ್ಟಿ ಮಾಡಿದರು.

ಹಾಗೇ ಮುಂದೆ ಸಾಗಿ - ಶ್ರೀರಾಮ- ಲಕ್ಷ್ಮಣರು ಮಹರ್ಷಿ ವಿಶ್ವಾಮಿತ್ರರೊಂದಿಗೆ ಅವರ ಸಿದ್ಧಾಶ್ರಮಕ್ಕೆ ಬಂದು ತಲುಪಿದರು. ಯಜ್ಞದಲ್ಲಿ ವಿಘ್ನ ಮಾಡುತ್ತಿದ್ದ ರಾಕ್ಷಸ ಮಾರೀಚನನ್ನು ಶ್ರೀರಾಮನು ಮಾನವಾಸ್ತ್ರ ಪ್ರಯೋಗದಿಂದ ಆತನನ್ನು ಸಮುದ್ರದಲ್ಲಿ ಮುಳುಗಿಸಿಬಿಟ್ಟ. ಮತ್ತು ಆಗ್ನೇಯಾಸ್ತ್ರದಿಂದ ಸುಬಾಹು ರಾಕ್ಷಸನ ವಧೆ ಮಾಡಿದ. ಇದರಿಂದಾಗಿ ವಿಶ್ವಾಮಿತ್ರರ ಯಜ್ಞವು ಯಥಾಸಾಂಗವಾಗಿ ಕೊನೆಗೊಂಡು ಅವರು ತುಂಬಾ ಸಮಾಧಾನ ಹೊಂದಿದರು.

ಇದೇ ಸಮಯಕ್ಕೆ ಮಿಥಿಲಾಧಿಪತಿ ಜನಕರಾಜ ಮಿಥಿಲಾಪಟ್ಟಣದಲ್ಲಿ ಒಂದು ಮಹಾ ಯಜ್ಞವನ್ನು ನೇರವೇರಿಸಲಿದ್ದ. ಸಿದ್ಧಾಶ್ರಮದ ಆಶ್ರಮೀಯರೆಲ್ಲ ಅಲ್ಲಿಗೆ ಹೊರಟರು. ತಮ್ಮ ಜೊತೆಯಲ್ಲಿ ರಾಮಲಕ್ಷ್ಮಣರೂ ಮಿಥಿಲೆಗೆ ಬರಬೇಕೆಂದು ಬಯಸಿ ಅವರು ಶ್ರೀ ರಾಮನ ಮನವನ್ನು ಒಲಿಸುವ ಪ್ರಯತ್ನ ಮಾಡಹತ್ತಿದರು.

## ಅಧ್ಯಾಯ ೧೦

## ಮಿಥಿಲೆಗೆ ಹೊಗೋಣ ನಡೆ ರಾಘವಾ ( ಆಶ್ರಮೀಯರು)

ನಡೆ ರಾಘವಾ, ಜನಕರಾಜನ ಮಿಥಿಲಾಪುರವನ್ನು ನೋಡಿ ಬರೋಣ ನಡೆ. ಮಿಥಿಲೆಗಿಂತ ನೃಪ ಜನಕರಾಜ ದರ್ಶನೀಯ. ಆ ನರಾಧಿಪನು ರಾಜರ್ಷಿಯೇ ಸರಿ. ಆತ ತನ್ನ ನಗರದಲ್ಲಿ ಒಂದು ಹೊಸ ಯಜ್ಞವನ್ನು ಹೂಡಿದ್ದಾನೆ. ಆ ಯಜ್ಞಮಂಟಪದಲ್ಲಿಯು

ಶಿವಧನುಸ್ಸನ್ನು ಶಿವನು ಮಾತ್ರ ಎತ್ತಬಲ್ಲ. ಆ ಧನುಸ್ಸಿನಿಂದೇ ಅವನು ತ್ರಿಪುರಾಸುರನನ್ನು ಸಂಹರಿಸಿದ್ದು. ಪೂಜನೀಯವಾದ ಆ ಶಿವಧನುವಿಗೆ ಲೋಕದ ಮೇಲಿನ ಬೇರಾವ ಧನುವೂ ಸರಿಗಟ್ಟಲಾರದು. ಜನಕರಾಜ ನಿತ್ಯ ಅದರ ಪೂಜೆ ಮಾಡುತ್ತಿರುತ್ತಾನೆ.

ಅನೇಕ ದೇಶದ ಅರಸರು ಅಲ್ಲಿಗೆ ಬಂದು ಆ ಮಹಾನ್ ಧನುಸ್ಸನ್ನು ಕಂಡು ಚಕಿತರಾಗುವರು. ಅದನ್ನು ಕಂಡೊಡನೆ ಅವರಿಗೆ ಅದನ್ನು ಎತ್ತುವ ಮೋಹ ಅವರನ್ನು ಆವರಿಸುವುದು. ಆದರೆ ಈ ವರೆಗೆ ದೇವರಾಗಲಿ, ದೈತ್ಯರಾಗಲಿ, ಸುರರಾಗಲಿ, ನರರಾಗಲಿ ಯಾರೂ ಅದನ್ನು ಒಂದು ಅಂಗುಲ ಕೂಡ ಎತ್ತಲು ಸಮರ್ಥರಾಗಿಲ್ಲ. ಧನುವನ್ನು ಮಣಿಸುವ ಮಾತಂತೂ ದೂರೇ ಉಳಿಯಿತು. ಅಂದಮೇಲೆ ಅದನ್ನು ಬಾಗಿಸಿ ಎಳೆಯುವರಾರು ? ಅದರ ಹೆದೆಯನೇರಿಸಿ ಬಾಣವನ್ನು ಹೂಡುವರಾರು ? ಇಂತಹ ಸಮರ್ಥರು ಈ ವರೆಗೂ ಯಾರೂ ಕಂಡುಬಂದಿಲ್ಲ.

ಆದರೆ ರಾಘವಾ, ನೀನೋ ಜನ್ಮದಿಂದ ಧನುರ್ಧರ. ಒಮ್ಮೆ ಪ್ರತ್ಯಕ್ಷವಾಗಿ ಆ ಧನುಷ್ಷವನ್ನು ನೋಡೊಮ್ಮೆ. ಇತ್ತ ನೋಡು ಲಕ್ಷ್ಮಣನೂ ಬರುವ ತವಕವನ್ನು ತೋರಿಸುತ್ತಿದ್ದಾನೆ ಆಶ್ರಮವಾಸಿಗಳಾದ ನಾವೆಲ್ಲರೂ ಹೊರಟಿರುವೆವು. ನೀವೂ ನಮ್ಮ ಜೊತೆಯಲ್ಲಿ ನಡೆಯಿರಿ, ಹೋಗೋಣ. ನೀವು ನಮ್ಮ ಸಹ ಪ್ರವಾಸಿಗಳಾದರೆ ನಮ್ಮ ಭಾಗ್ಯತರು ಫಲ ಬಿಟ್ಟಂತೆ. ನಮ್ಮೆಲ್ಲರಿಗೆ ತುಂಬಾ ಸಂತಸ ಎಂದು ಸಿದ್ಧಾಶ್ರಮ ವಾಸಿಗಳು ಶ್ರೀ ರಾಮನನ್ನು ಆಗ್ರಹ ಪಡಿಸಿದಾಗ, ಅವನಿಗೆ ಒಪ್ಪಿಕೊಳ್ಳಲೇ ಬೇಕಾಯಿತು

ಸಿದ್ಧಾಶ್ರಮೀಯರ ಆಗ್ರಹವನ್ನು ಮುರಿಯಲಾಗದೇ ಶ್ರೀ ರಾಮಚಂದ್ರ ಲಕ್ಷ್ಮಣ ಸಮೇತನಾಗಿ ಅವರೊಡನೆ ಮಿಥಿಲೆಗೆ ಹೊರಟ. ದಾರಿಯುದ್ದಕ್ಕೂ ವಿಶ್ವಾಮಿತ್ರರು ಅವರೆಲ್ಲರಿಗೂ ಅನೇಕ ಕಥೆಗಳನ್ನು ಹೇಳಿದರು. ಹೀಗೆ ಅವರೆಲ್ಲರೂ ಸೇರಿ ಮಾರ್ಗಕ್ರಮಿಸುತ್ತಿದ್ದಾಗ ಒಂದು ನಿರ್ಜನವಾದ ಆಶ್ರಮದ ಹತ್ತಿರ ಬಂದರು. ಆಗ ಶ್ರೀರಾಮಚಂದ್ರನು ''ಗುರುಗಳೇ, ಈ ಆಶ್ರಮವು ಹೀಗೆ ನಿರ್ಜನವೇಕಾಗಿದೆ ?'' ಎಂದು ಮಹರ್ಷಿ ವಿಶ್ವಾಮಿತ್ರರನ್ನು ಪ್ರಶ್ನಿಸಿದಾಗ, ಆಗ ಅವರು ಅವನಿಗೆ ಅಹಲ್ಯೆಯ ಕಥೆ ನಿರೂಪಿಸಿ ''ರಾಮಚಂದ್ರಾ ನಿನ್ನ ಚರಣ ಸ್ಪರ್ಶದಿಂದ ಇವಳು ಶಾಪಮುಕ್ತಳಾಗ ಬೇಕಾಗಿದೆ. ಕಾರಣ ಈ ಶಿಲೆಗೆ ನಿನ್ನ ಚರಣ ಸ್ಪರ್ಶವಾಗಲಿ ಎಂದು ಆಜ್ಞಾಪಿಸಿದರು. ತದುಸಾರ ರಾಮಚಂದ್ರನು ಆ ಶಿಲೆಗೆ ಪಾದ ಸ್ಪರ್ಶಿಸಿ '' ಏಳು ಅಹಲ್ಯೆ '' ಎಂದು ಹೇಳುವುದೊಂದೇ ತಡ ಆ ಶಿಲೆಯಿಂದ ಅಹಲ್ಯೆಯು ಪ್ರಕಟಳಾಗಿ, ಎದ್ದು ನಿಂತು ಕೈ ಜೋಡಿಸಿ ಕೃತಜ್ಞತೆಯಿಂದ ಮಂಜುಳವಾದ ಸ್ವರದಲ್ಲಿ - '' ರಾಮಾ ನಿನ್ನ ಚರಣ ಸ್ಪರ್ಶದಿಂದ ನಾನು ಶಾಪ ಮುಕ್ತಳಾದೆ'' ಎಂದರು.

# ಅಧ್ಯಾಯ ೧೧
## ನಾನಿಂದು ಶಾಪ ಮುಕ್ತಳಾದೆ (ಅಹಲ್ಯೆ)

ರಾಮಾ ನಿನ್ನ ಕೃಪೆ ಎಂಬ ಸತ್‌ಶಿಲ್ಪ ಕೃತಿಯಿಂದ ನನ್ನ ಮೊದಲಿನ ಆಕೃತಿ ನನಗೆ ಪುನಃ ಇಂದು ದೊರಕಿತು. ನನ್ನ ಕಣ್ಣುಗಳಿಗೆ ದೃಷ್ಟಿ ಲಭಿಸಿತು. ನೀನು ನನಗೆ ಕಾಣಿಸುತ್ತಿರುವಿ ನೀನಿತ್ತ ದೃಷ್ಟಿಯಿಂದ ನಿನ್ನಲ್ಲಿ ಎಲ್ಲ ಸೃಷ್ಟಿ ಇರುವುದನ್ನು ಕಂಡೆ. ಕಿವಿಗಳು ಪುನಃ ತಮ್ಮ ಪೂರ್ವ ಶಕ್ತಿಯನ್ನು ಪಡೆದು '' ಏಳು ಅಹಲ್ಯೆ'' ಎಂಬ ನಿನ್ನ ಕರುಣೆಯ ವಚನ ನನಗೆ ಸ್ಪಷ್ಟವಾಗಿ ಕೇಳಿಸಿತು. ಮನದಲ್ಲಿ ಅಮೂಲ್ಯವಾದ ಉಕ್ತಿಗಳು ಹೊರಹೊಮ್ಮಿದವು. ಪುಲಕಿತವಾದ ಈ ನನ್ನ ಶರೀರವು ನಿನ್ನ ಚರಣವನ್ನು ಸ್ಪರ್ಶಿಸಿತು. ಇದೋ ನೋಡು, ನಿನ್ನ ಚರಣ ರಜವೇ ಈ ಅಹಲ್ಯೆಗೆ ಕುಂಕುಮ. ಹಾಗೇ ಮೌನವಾಗಿರುವಾಗಲೇ ಭಾಷಣ ಸ್ಫುರಿಸಿತು ನನಗೆ. ಶ್ರೀರಾಮಾ, ಪತಿತ ಪಾವನ ನೀನು ನಿನ್ನ ದಯೆಯಿಂದ ಇಂದು ಹಾಲಾಹಲವು ಅಮೃತದಲ್ಲಿ ಮಿಂದಿತು. ನಿನ್ನ ಪೂಜೆಯನ್ನು ನಾನೆಂತು ಮಾಡಬಲ್ಲೆ ? ''ಪುನರ್ಜೀವಿತವಾದ ಈ ನನ್ನ ಜೀವನವನ್ನು ನಿನ್ನ ಅಡಿಯಲ್ಲಿ ಅರ್ಪಿಸಿರುವೆ'' ಎಂದಿಷ್ಟೇ ಹೇಳಬಲ್ಲೆ ಎಂದಳು ಅಹಲ್ಯೆ.

ಈ ರೀತಿಯಾಗಿ ಸತಿ ಅಹಲ್ಯೆಯು ತನ್ನ ಉದ್ಧಾರವಾದುದನ್ನು ಸ್ಮರಿಸಿ ಕೃತಜ್ಞತೆಯನ್ನು ವ್ಯಕ್ತ ಮಾಡಿದ ನಂತರ ಗೌತಮಾಶ್ರಮದಲ್ಲಿ ಕೆಲ ಕಾಲ ವಿಶ್ರಮಿಸಿದರು. ಆಮೇಲೆ ಪುನಃ ಆಶ್ರಮೀಯರೊಡನೆ ಮುಂದೆ ಸಾಗಿ ಮಿಥಿಲಾನಗರ ತಲುಪಿದರು. ಜನಕರಾಜ ಅತ್ಯಾನಂದದಿಂದ ಅವರೆಲ್ಲರನ್ನು ಸ್ವಾಗತಿಸಿದ. ಆಗ ವಿಶ್ವಾಮಿತ್ರರು ರಾಮ ಲಕ್ಷ್ಮಣರನ್ನು ಪರಿಚಯ ಮಾಡಿಕೊಡುತ್ತ '' ಜನಕರಾಜನೇ, ನಮ್ಮ ಆಶ್ರಮೀಯರ ಜೊತೆ ಬಂದಿರುವ ಈ ಇಬ್ಬರು ಕುಮಾರರು ಅಯೋಧ್ಯಾಪತಿ ನಮ್ಮ ದಶರಥ ರಾಜನ ಪರಮ ಪ್ರತಾಪಿಗಳಾದ ಪುತ್ರರಿವರು. ಶಿವಧನುಷ್ಯವನ್ನು ನೋಡಲು ಬಂದಿರುವರು'' ಎಂದರು. ವಿಶ್ವಾಮಿತ್ರರ ಈ ನುಡಿಗಳನ್ನು ಕೇಳಿದ ರಾಜರ್ಷಿ ಜನಕರಾಜನಿಗೆ ತುಂಬಾ ಸಂತೋಷವಾಯಿತು.

ಸಹಸ್ರಾರು ರಾಜರು ನೋಡುತ್ತಿದ್ದಂತೆಯೇ ಜನಕರಾಜನು ಅನೇಕ ಮಲ್ಲರ ನೆರವಿನಿಂದ ಶಿವಧನುಷ್ಯವನ್ನು ಆಸ್ಥಾನಕ್ಕೆ ತಂದಿರಿಸಿದ. ರಾಮ ಲಕ್ಷ್ಮಣರಿಬ್ಬರೂ ಬೃಹದಾಕಾರದ ಆ ಶಿವಧನುಷ್ಯಕ್ಕೆ ನಮಸ್ಕರಿಸಿದರು. ಆಗ ಶ್ರೀರಾಮನು ''ಜನಕ ಮಹಾರಾಜರೇ ಧನುಷ್ಯವನ್ನೆತ್ತಲು ಅಪ್ಪಣೆ ದಯಪಾಲಿಸಬೇಕು'' ಎಂದು ನಮ್ರದಿಂದ

ಕೇಳಿಕೊಂಡ. ಆಗ ಜನಕಮಹಾರಾಜನು '' ಅವಶ್ಯ ಆಗಲಿ'' ಎಂದು ಆಜ್ಞೆಯನ್ನಿತ್ತ

ಶ್ರೀರಾಮನು ಶಿವಧನುಷ್ಯವನ್ನು ಸಹಜವಾಗಿ ಲೀಲಾಜಾಲವಾಗಿ ಎತ್ತಿಬಿಟ್ಟ. ಬಾಣವನ್ನು ಹೂಡಲು ಶಿವಧನುಷ್ಯವನ್ನು ಬಾಗಿಸತೊಡಗಿದಾಗ ಸಿಡಿಲೆರಗಿದಂತೆ - ಪ್ರಚಂಡನಾದಕೇಳಿ ಬಂದು, ಶಿವಧನುಷ್ಯವು ಮಧ್ಯದಲ್ಲಿಯೇ ಭಂಗವಾಯಿತು. ನೆರೆದಿದ್ದ ರಾಜರಿಗೆಲ್ಲ ಮಹಾದಾಶ್ಚರ್ಯ ! ಲೋಕವಿಲಕ್ಷಣವಾದ ಈ ದೃಶ್ಯವನ್ನು ಕಂಡು ಜನಕರಾಜನಿಗೆ ಅತ್ಯಾನಂದವಾಯಿತು. ತಾನು ಪಾಲನೆ ಮಾಡಿದ ಮತ್ತು ಶೌರ್ಯದ ತುಲ್ಯವನ್ನು ಬಯಸಿದ ಮಗಳು ಸೀತೆಯನ್ನು ಆ ಮಹಾವೀರನಾದ ಶ್ರೀರಾಮನಿಗೆ ಕೊಡುವ ತನ್ನ ನಿಶ್ಚಯವನ್ನು ಆತ ಬಹಿರಂಗ ಪಡಿಸಿದ. ಮಹರ್ಷಿ ವಿಶ್ವಾಮಿತ್ರರು ಅತ್ಯಂತ ಸಂತೋಷದಿಂದ ಅದನ್ನು ಮಾನ್ಯ ಮಾಡಿದರು.

ಯೋಗ್ಯಕಾಲಕ್ಕೆ ಭೂಕನ್ಯೆಯಾದ ಸೀತೆಯ ಜೊತೆ ಶ್ರೀರಾಮನ ವಿವಾಹವಾಯಿತು. ಜನಕರಾಜ ತನ್ನ ಭ್ರಾತೃ ಕನ್ಯೆಯರಾದ ಊರ್ಮಿಳೆ, ಮಾಂಡವಿ, ಶುತ-ಕೀರ್ತಿ ಇವರನ್ನು ಅನುಕ್ರಮವಾಗಿ ಲಕ್ಷ್ಮಣ, ಭರತ ಮತ್ತು ಶತ್ರುಘ್ನರಿಗೆ ಧಾರೆ ಎರೆದುಕೊಟ್ಟ. ದಶರಥರಾಜನ ಸರ್ವ ಪರಿವಾರವನ್ನು ಬರಮಾಡಿಕೊಂಡು ಅವರ್ಣನೀಯವಾದ ರೀತಿಯಲ್ಲಿ ವಿವಾಹ ಸಮಾರಂಭವು ಜರುಗಿತು. ಪ್ರಥಮ ಪರಾಕ್ರಮಕ್ಕೆಂದು ಹೊರ ಹೊರಟ ರಾಮಲಕ್ಷ್ಮಣರು ತಮ್ಮ ನವ ವಧುಗಳೊಂದಿಗೆ ಅಯೋಧ್ಯೆಗೆ ಮರಳಿ ಬಂದರು. ಮಿಥಿಲೆಯಿಂದ ಅವರು ಮರಳಿ ತಿಂಗಳುಗಳುರುಳಿದರೂ ಮಿಥಿಲೆಯ ಹೊಗಳುಭಟ್ಟರು ಸೀತೆಯ ಸ್ವಯಂವರವನ್ನು ನೆನೆದುಕೊಂಡು '' ಎಂತಹ ಅನುಪಮ ಸಂಬಂಧವಿದು ರಾಮಸೀತೆಯರದು ! ಆಕಾಶವನ್ನು ಭೂಮಾತೆ ವರಿಸಿದಂತಾಯಿತು '' ಎಂದು ಹಾಡುತ್ತಲೇ ಇದ್ದರು.

# ಅಧ್ಯಾಯ ೧೨
## ''ಸೀತಾದೇವಿಯ ಸ್ವಯಂವರವಾಯಿತು''
## (ಮಿಥಿಲೆಯ ಹೊಗಳುಭಟ್ಟರು)

ಶ್ರೀರಾಮನು ಸಹಜವಾಗಿ ಶಿವಧನುಷ್ಯವನ್ನು ಎತ್ತಿದ್ದನ್ನು ಕಂಡಾಗಿ ಜನಕರಾಜನಿಗೆ ತನ್ನ ಅಂತರಂಗದಲ್ಲಿಯ ಉದ್ದೇಶ ಪೂರ್ಣವಾದಂತೆನಿಸಿತು. ಸೀತೆಯ ಭಾಗ್ಯದಂತಿದ್ದ ಶ್ಯಾಮವರ್ಣದ ಶ್ರೀರಾಮ ಮೂರ್ತಿ ಅವರ ಕಣ್ಣಮುಂದೆ ನಿಂತಿತು. ಆ ಮುಗ್ಧ ಜನಕಿಯು ತನ್ನ ಕಣ್ಣುಗಳ ಶಕ್ತಿಯನ್ನೆಲ್ಲ ಕೇಂದ್ರೀಕರಿಸಿ ದೂರದಿಂದಲೇ

ಶಿವಧನುಷ್ಯದ ಹತ್ತಿರ ನಿಂತಿದ್ದ ಶ್ರೀರಾಮನೆಡೆಗೆ ತನ್ನ ದೃಷ್ಟಿಯನ್ನು ಬೀರಿದಾಗ ಅವಳ ಗಲ್ಲಗಳ ಮೇಲೆ ಲಜ್ಜೆಯ ಕಮಲಗಳು ಅರಳಿದಂತಾದವು. ಹುಬ್ಬುಗಳನ್ನು ಏರಿಸಿ ಈ ರೀತಿಯಾಗಿ ಸೀತೆಯು ಶ್ರೀರಾಮನನ್ನು ನೋಡುತ್ತಿರುವಾಗಲೇ ಸಿಡಿಲೆರಗಿದಂತಹ ಪ್ರಚಂಡ ನಾದ ಹೊರಟು ಶ್ರೀರಾಮನು ಧನುಷ್ಯ ಭಂಗಿಸಿದನ್ನು ಅವಳು ಕಂಡಳು. ಶಿವಧನುಷ್ಯ ಭಂಗವಾದುದರಿಂದ ಉತ್ಪನ್ನವಾದ ಭಯಂಕರ ನಾದದಿಂದ ನೆರೆದ ರಾಜರ ಕಣ್ಣುಗಳಿಗೆ ಕತ್ತಲೆ ಕವಿದಂತಾಯಿತು. ಭಯದಿಂದ ಅವರೆಲ್ಲ ನಡುಗಿದರು. ಆದರೆ ಜಾನಕಿಗೆ ಸಹಜವಾಗಿಯೇ ನಗೆ ಬಂದು ಮನದಲ್ಲಿಯೇ ನಾಚಿದಳು. ಜನಕನ ಸಂಚಿತ ನಯನಗಳು ತೃಪ್ತಿಯಿಂದ ಹನಿಗೂಡಿ ತುಂಬಿದವು. ಆಗ ತೃಪ್ತನಾದ ಜನಕರಾಜ ವಿಶ್ವಾಮಿತ್ರರಿಗೆ ''ಮಹರ್ಷಿಗಳೇ, ಜಾನಕಿಯನ್ನು ನಾನು ಇಂದು ದಶರಥರಾಜನ ಮಗ ಶ್ರೀರಾಮನಿಗೆ ಅರ್ಪಿಸಿದೆ'' ಎಂದು ಆತ್ಮಾನಂದದಿಂದ ಕಣ್ಣುಗಳನ್ನು ಮುಚ್ಚಿದ.

ತಂದೆ ಜನಕರಾಜನ ಆಜ್ಞೆಯಂತೆ ಮಂತ್ರಮುಗ್ಧಳಂತಾಗಿದ್ದ ಗೌರವರ್ಣ ಜಾನಕಿ, ಸೌಖ್ಯದ ಮಂದಿರವಾದ ಶ್ರೀರಾಮನನ್ನು ತಲುಪಿ ಅವನ ಕೊರಳೊಳಗೆ ಮಾಲೆ ಹಾಕಲು ಹೊರಟಳು. ಆಗ ಅವಳ ಕೈ ಜೊತೆ - ಕೈಯಲ್ಲಿಯ ಮಾಲೆಯೂ ನಡುಗುತ್ತಿತ್ತು. ನೀಲಾಕಾಶದಲ್ಲಿ ಉಷಃ ಪ್ರಭೆಯ ಕೆಂಪು ತುಂಬಿದಂತೆ ಶ್ರೀರಾಮ ಜಾನಕಿಯರ ಜೋಡಾಯಿತು. ಸಭಾಮಂಟಪದಲ್ಲಿ ಮಾಯಾಬ್ರಹ್ಮರ ಮಿಲನವಾಯಿತು. ಶ್ರೀರಾಮ ತುಸು ಬಾಗಿದನೋ ಸೀತೆಯು ಅವನ ಕೊರಳಿಗೆ ಮಾಲೆಯನ್ನು ಹಾಕಿದಳು. ಸ್ವರ್ಗಲೋಕದ ದೇವತೆಗಳು ಸಂತೋಷದಿಂದ ಚಪ್ಪಾಳೆ ತಟ್ಟಿದರು. ಇಲ್ಲಿಯ ಮಂಗಲ ವಾದ್ಯಗಳಿಂದ ಅಲ್ಲಿಯ ಅವರ ಕಿವಿಗಳು ಗಡಚಿಕ್ಕಿದವು. ಶ್ರೀರಾಮ ವಿಷ್ಣುವಿನ ಅಂಶ. ಸೀತೆ ವಸುಧೆಯ ಮಗಳು. ಎಂತಹ ದಿವ್ಯ ಸಂಬಂಧವಿದು! ಆಕಾಶವನ್ನು ಭೂಮಾತೆ ವರಿಸಿದಂತಾಯಿತೆಂದು ಗಂಧರ್ವರು ಜಯ ಜಯಕಾರ ಮಾಡಿದರು.

## ಅಧ್ಯಾಯ ೧೩

## ಶ್ರೀರಾಮನಾಗಲಿಹ ನಾಳೆ ಅಯೋಧ್ಯಾಪತಿ

### (ಉರ್ಮಿಳೆ, ಮಾಂಡವಿ, ಶ್ರುತ -ಕೀರ್ತಿ)

ಸೀತೆಯೊಂದಿಗೆ ಅಯೋಧ್ಯೆಗೆ ಮರಳಿದ ಶ್ರೀರಾಮನು ವಿಶಾಲವಾದ ತನ್ನ ಅರಮನೆಯಲ್ಲಿ ಸುಖವಾಗಿ ಗ್ರಹಸ್ಥಾಶ್ರಮವನ್ನು ಭೋಗಿಸಹತ್ತಿದ. ಏಕವಚನಿಯೂ, ಜ್ಞಾನಿಯೂ, ಮಹಾಪರಾಕ್ರಮಿಯಾಗಿದ್ದರೂ ಅವನು ವಿನಯಶೀಲನಾಗಿದ್ದ. ಇದರಿಂದ

ಅವು ಪ್ರಜಾಜನಕ್ಕೆಲ್ಲ ಬಹು ಪ್ರಿಯನಾದ. ಶ್ರೀರಾಮನ ಈ ರೀತಿಯ ಸದಾಚಾರ ಸಂಪನ್ನ ಜೀವನ ಕಂಡು ವೃದ್ಧನಾದ ದಶರಥರಾಜನಿಗೆ ತುಂಬಾ ಆನಂದ.

ಒಮ್ಮೆ ಸಹಜವಾಗಿಯೇ ಕುಳಿತಾಗ ರಾಜ್ಯವನ್ನು ಇನ್ನು ರಾಮನಿಗೆ ಒಪ್ಪಿಸಿ ತಾನು ವಿಶ್ರಾಂತಿ ಸುಖಪಡೆಯಬೇಕೆಂಬ ವಿಚಾರ ದಶರಥರಾಜನ ಮನಸ್ಸಿನಲ್ಲಿ ಸುಳಿಯಿತು. ಆಗ ಅವನು ಗುರುಜನರು, ಮಂತ್ರಿವರ್ಗ, ಪುರಪ್ರಮುಖರು ಅಲ್ಲದೇ ತನ್ನ ಮೂವರು ಪತ್ನಿಯರು ಇವರೆಲ್ಲರನ್ನು ಬರಮಾಡಿಕೊಂಡು ಅವರೆಲ್ಲರೆದುರು ತನ್ನ ಈ ವಿಚಾರವನ್ನು ಇಡಬಯಸಿ ಹೇಳುತ್ತಾನೆ.

''ಪೂಜ್ಯ ಋಷಿಮುನಿಗಳೇ, ಸಚಿವರೇ ಮತ್ತು ಪುರಪ್ರಮುಖರೆ ಬಹು ದಿವಸಗಳಿಂದ ನಾನು ಚಿಂತಿಸುತ್ತಿದ್ದ ಒಂದು ಮಹತ್ವದ ವಿಷಯವನ್ನು ತಮ್ಮೆಲ್ಲರ ಮುಂದೆ ಮಂಡಿಸಬೇಕೆಂದು ಬಯಸಿ ತಮ್ಮೆಲ್ಲರನ್ನು ಇಲ್ಲಿಗೆ ಬರಮಾಡಿಕೊಂಡಿರುವೆ. ನನಗೆ ವಯಸ್ಸಾಗುತ್ತ ಬಂದುದು ತಮ್ಮೆಲ್ಲರಿಗೂ ಗೊತ್ತು. ರಾಜ್ಯ ಕಾರಭಾರ ನನಗೆ ಭಾರವಾಗಹತ್ತಿದೆ. ಆದುದರಿಂದ ನನ್ನ ಹಿರಿಯ ಮಗನಾದ ರಾಮನಿಗೆ ರಾಜ್ಯವನ್ನು ಒಪ್ಪಿಸಿ ಮುಕ್ತನಾಗಿ ವಿಶ್ರಾಂತಿ ಪಡೆಯಬೇಕೆನ್ನುವೆ ಮತ್ತು ಶೇಷಾಯುಷ್ಯವನ್ನು ದೇವರ ಧ್ಯಾನದಲ್ಲಿ ಕಳೆದು ಜನ್ಮಸಾರ್ಥಕ ಮಾಡಿಕೊಳ್ಳಬೇಕೆನ್ನುವೆ. ಆದುದರಿಂದ ಈ ಕುರಿತು ತಮ್ಮಗಳ ಅಭಿಪ್ರಾಯ ತಿಳಿಯ ಬಯಸುವೆ '' ಎಂದ ರಾಜನ ಈ ವಿಚಾರಗಳನ್ನು ತಿಳಿದು ವಿಶ್ವಾಮಿತ್ರಾದಿ ಋಷಿ ಮುನಿಗಳು ''ರಾಜಾ ನಿನ್ನ ಈ ಪರಿಪಕ್ವ ವಿಚಾರಗಳು ನಿನ್ನ ಈ ಇಳಿವಯಸ್ಸಿಗೆ ತಕ್ಕದಾಗಿವೆ. ರಾಜನಲ್ಲಿ ಇರಬೇಕಾದ ಎಲ್ಲ ಗುಣಗಳು ರಾಮನಲ್ಲಿವೆ. ಅಲ್ಲದೇ ಅವನು ಜ್ಯೇಷ್ಠ ಪುತ್ರನೂ ಹೌದು. ತಮ್ಮಂದಿರ ನೆರವಿನೊಂದಿಗೆ ರಾಜ್ಯವನ್ನು ಆತ ಸಮರ್ಥವಾಗಿ, ಸುಸೂತ್ರವಾಗಿ ಸಾಗಿಸಿಕೊಂಡು ಹೋಗಬಲ್ಲ. ರಾಜಾ, ರಾಮರಾಜ್ಯವನ್ನು ನೋಡುವ ಭಾಗ್ಯ ನಿನಗೆ ಒದಗಿ ಬಂದಿದೆ. ಆದುದರಿಂದ ರಾಮನಿಗೆ ರಾಜ್ಯಪಟ್ಟಾಭಿಷೇಕವನ್ನು ನೇರವೇರಿಸಿ ನೀನು ಮುಕ್ತನಾಗು. ನಿನ್ನ ಇಚ್ಛೆಯಂತೆ ನಿನ್ನ ಶೇಷಾಯುಷ್ಯವನ್ನು ವಿಶ್ರಾಂತಿಯೊಂದಿಗೆ ದೇವರ ಧ್ಯಾನದಲ್ಲಿ ಕಳೆಯುವುದು ಅತ್ಯಂತ ಯೋಗ್ಯ'' ಎಂದರು. ಆಗ ದಶರಥರಾಜ '' ತಮ್ಮಗಳ ಆಶೀರ್ವಾದಗಳಿರಲಿ ಪೂಜ್ಯರೇ, ಸುಮಂತಾ ಪುರ ಪ್ರಮುಖರ ಅಭಿಪ್ರಾಯವೇನೆಂಬುದನ್ನು ತಿಳಿಸುವಿಯಾ ?'' ಎಂದ. ಅದಕ್ಕೆ ಸುಮಂತ '' ರಾಜರೇ, ತಮ್ಮ ಹಿರಿಯ ಮಗ ರಾಮನಿಗೆ ರಾಜ್ಯವನ್ನು ಒಪ್ಪಿಸಬೇಕೆಂಬ ತಮ್ಮ ಇಂದಿನ ವಿಚಾರ ಪುರಪ್ರಮುಖರೆಲ್ಲರಿಗೂ ತುಂಬಾ ಸಂತೋಷವನ್ನುಂಟುಮಾಡಿದೆ. ಗುರುಗಳ ಸಲಹೆಯಂತೆ ರಾಮರಾಯನ ಪಟ್ಟಾಭಿಷೇಕದ ಸಿದ್ಧತೆಗೆ ಅಪ್ಪಣೆ ಇತ್ತರೆ ಆ ಪ್ರಕಾರ ಸರ್ವಸಿದ್ಧತೆ ಮಾಡಲು ಅನುಕೂಲ '' ಎಂದುದಕ್ಕೆ ಆಗಲಿ ಎಂದ ದಶರಥರಾಜ

ಮತ್ತು ತನ್ನ ರಾಣಿಯರ ಅಭಿಪ್ರಾಯವನ್ನು ಪಡೆಯಲು ಅವನು ಮರೆಯಲಿಲ್ಲ. '' ರಾಜರೇ ತಮ್ಮ ಸಮಾಧಾನವೆ ನಮ್ಮ ಸಮಾಧಾನ ಅದರಂತೆ ನಡೆಯುವುದು ನಮ್ಮಗಳ ಕರ್ತವ್ಯ. ಇದರಲ್ಲಿ ನಮ್ಮ ಅಭಿಪ್ರಾಯ ಕೇಳುವ ಅವಶ್ಯವೇ ಇಲ್ಲ ರಾಜರೇ. ಅದು ತಾವು ಕೇಳಿದಿರಿ ಎಂದು ಹೇಳುವೆವು - ರಾಮನ ರಾಜ್ಯ ಪಟ್ಟಾಭಿಷೇಕ ಶುಭಕಾರ್ಯ ಶೀಘ್ರ ನೇರವೇರುವಂತಾಗಲಿ'' ಎಂದು ಮೂವರುರಾಣಿಯರು ಮುಕ್ತ ಮನಸ್ಸಿನಿಂದ ತಮ್ಮ ಅಭಿಪ್ರಾಯವನ್ನು ಹೇಳಿದರು.

ಹೀಗೆ ಸಕಲರೂ ಈ ವಿಚಾರವನ್ನು ಸ್ವಾಗತಿಸಿದರು. ಆಗ ದಶರಥರಾಜ ಸರ್ವ ಸಿದ್ಧತೆಯೊಂದಿಗೆ ಚೈತ್ರಮಾಸದ ಪುಷ್ಯನಕ್ಷತ್ರದಲ್ಲಿ ಶ್ರೀರಾಮನು ಸಿಂಹಾಸನಸ್ಥನಾಗುವನೆಂದು ಪ್ರಕಟಪಡಿಸಿದ. ಇದನ್ನು ಕೇಳಿ ಪ್ರಜಾಜನರಂತೂ ಹರ್ಷೋನ್ಮತ್ತರಾದರು. ಊರ್ಮಿಳೆ ಮೊದಲಾದ ಸಖಿಯರಿಗೆ ಬಹು ಆನಂದವಾಗಿದೆ. ಆಗ ಅವರು ಸೀತೆಯ ಮಂದಿರವನ್ನು ಪ್ರವೇಶಿಸಿ ಅವಳೊಡನೇ ವಿನೋದ ಮಾಡಲಾರಂಭಿಸಿದರು.

ಸಖಿ ಸೀತೆ, ನಾಳೆ ನಿನ್ನ ಪತಿ, ಅಯೋಧ್ಯಾಪತಿ ಆಗಲಿರುವನೆಂಬುದು ನಮಗೆ ತಿಳಿದು ನಮ್ಮ ಆನಂದಕ್ಕೆ ಇಂದು ಮಿತಿ ಇಲ್ಲದಂತಾಗಿದೆ. ಆಗ ನೀನು ನಿನ್ನ ರಾಜ್ಞೀ ಪದಕ್ಕೆ ಭೂಷಣವಾಗುವಂತೆ ತುಸು ಗರ್ವದಿಂದ ತುಸು ಲಜ್ಜಿತಳಾಗಿ ಶ್ರೀರಾಮನ ಜೊತೆಗೆ ಶೋಭಿಸುವಿ. ಈ ರೀತಿಯಾಗಿ ನೀನು ಶ್ರೀರಾಮನೊಡನೆ ಸಿಂಹಾಸನದ ಮೇಲೆ ಶೋಭಿಸುತ್ತಿರುವಾಗ ಗುರುಜನರು, ಮುನಿಜನರು ನಿಮ್ಮಗಳ ಸಮೀಪಕ್ಕೆ ಬಂದು ಸಪ್ತನದಿಗಳಿಂದ ತಂದ ಜಲದಿಂದ ನಿಮ್ಮಿಬ್ಬರಿಗೂ ಸಿಂಚನ ಮಾಡುವರು. ಆಗ ಉಭಯ ಕುಲಗಳೂ ಕೃತಾರ್ಥವಾಗುವವು. ಮೇಘನಾದಕ್ಕಿಂತ ಹೆಚ್ಚಾಗಿ ನಗಾರಿ ನೌಬತ್ತುಗಳ ಧ್ವನಿ ಆಗ ಕೇಳಿಬರುವುದು. ಈ ರೀತಿಯಿಂದ ರಾಜ್ಯಾಭಿಷೇಕವು ಆದಮೇಲೆ ಶ್ರೀರಾಮನು ಪ್ರಜೆಗಳಿಗಲ್ಲ ರಾಜ, ನೀನು ಅವನ ರಾಣಿ - ರಾಜ್ಞಿ ಆಗುವಿ. ರಾಣಿಯ ಪದ ನಿನಗೆ ದೊರಕಿದಾಗ ಜನತೆಯಲ್ಲಿ ಪತಿಗೆ ಸಮನಾದ ಮಾನ್ಯತೆಯನ್ನು ನೀನು ಪಡೆಯುವಿ. ಅಖಿಲ ಪ್ರಜೆಗಳ ಮಾತೆಯ ಪದ ನಿನಗೆ ಲಭಿಸುವುದು. ಸಖೀ, ಪುತ್ರರಿಲ್ಲದೇ ಮಾತೆಯಾಗುವ ಭಾಗ್ಯ ನಿನ್ನದು ಸಾಮಾನ್ಯವೇ ಇದು ಇನ್ನೇನು?, ಈ ಧರಣಿ ಎಲ್ಲ ನಿನ್ನ ಅಂಕಿತದಲ್ಲಿ. ಅಂದಮೇಲೆ ಭೂಮಾತೆ ನಿನ್ನ ಕನ್ಯೆ. ಸಖಿ ಇಂತಹ ಭಾಗ್ಯವನ್ನು ಯಾರಾದರೂ ಭೋಗಿಸುವರೇ ಹೇಳು? ನಿನ್ನ ಈ ಧರಣಿ ಹೂವು ಕಾಯಿ ಹಣ್ಣುಗಳಿಂದ ಸದಾ ತುಂಬಲಿ ಎಂದು ನಾವೆಲ್ಲರೂ ಹಾರೈಸುವೆವು. ಹೇ ಸುಭಗೇ ಸೀತೇ, ಶ್ರೀರಾಮ ಪತಿತ ಪಾವನ. ಅವನ ಜೊತೆಗೆ ನೀನು ಪತಿತಪಾವನಳು. ಈ ಪೃಥ್ವಿಯ ಮೇಲೆಯೇ ನಿನಗೆ ಸ್ವರ್ಗ ಸುಖ ! ನಿನ್ನ ಈ ಯಶದ

ಕೀರ್ತಿಯಿಂದ ಮೂರು ಲೋಕಗಳು ತುಂಬಲಿ. ಸೀತಾದೇವಿ ಇನ್ನೇನು ಇಷ್ಟರಲ್ಲಿಯೇ ನೀನು ಮಹಾರಾಣಿ ಆಗುವೆ. ನಾವೋ ನಿನ್ನ ಚರಣ ದಾಸಿಯರು, ನಿನ್ನ ಆಜ್ಞೆಯನ್ನು ಶಿರಸಾವಹಿಸುವೆವು. '' ನಮ್ಮ ಬುದ್ಧಿ ನಿನ್ನ ಚರಣಗಳಲ್ಲಿ ಸದಾ ಲೀನವಾಗಿರಲೆಂದಷ್ಟೇ ನಮ್ಮ ಹಾರೈಕೆ''.

ಆಗ ಸೀತಾದೇವಿ, '' ಇದೇನೇ ಉರ್ಮಿಳೇ ಎಂತಹ ವಿನೋದ ನಿಮ್ಮದಿದು?'' ಎಂದಾಗ ಉರ್ಮಿಳೇ ಹೇಳುತ್ತಾಳೆ ''ಅಕ್ಕಾ ವಿನೋದವಲ್ಲವಿದು ನಮ್ಮಗಳ ಸದಿಚ್ಛೆಯೇ ಇದಾಗಿದೆ. ನಿನ್ನ ಭಾಗ್ಯ ಮೇರೆ ಮೀರಲಿ. ದೇವ ದೇವತೆಗಳು ನಿನಗೆ ರಕ್ಷಣೆ ನೀಡಲಿ, ಎಂಬುದೇ ನಮ್ಮೆಲ್ಲರ ಇಂದಿನ ಅಪೇಕ್ಷೆ. ದೇವಿ, ನಿನ್ನ ಈ ಮಹಾಭಾಗ್ಯಕ್ಕೆ ನಮ್ಮ ದೃಷ್ಟಿತಾಗುವುದು, ಬೇಡಮ್ಮ. ಇದೋ ನೋಡು, ಕೇಳಿಸದೇ ನಿನಗೆ ಸೀತಾದೇವಿ, ನಿನ್ನ ಪರಿಚಿತ ಪಾದಗಳ ಸಪ್ಪಳ? ರಾಘವನು ನಿನ್ನ ಕಾಣಲು ಇತ್ತಕಡೆಗೆ ಬರುತ್ತಿದ್ದಾನೆಂದು ತೋರುತ್ತದೆ. ನಿನಗೆ ಆತನ ನೆರಳಿನಲ್ಲಿಯೇ ಸೌಖ್ಯವ ಕಂಡುಬರುವುದಿಲ್ಲವೇ ? ನಿನ್ನ ಕಣ್ಣುಗಳಲ್ಲಿ ಲಜ್ಜೆಗೆ ನವಜಾಗೃತಿ ಬಂದಿತೇನೇ ಸೀತೆ ? ಈ ರೀತಿಯಾಗಿ ಬಗೆ ಬಗೆಯಿಂದ ಸಖಿಯರೆಲ್ಲ ವಿನೋದ ಮಾಡುತ್ತಿರುವಾಗಲೇ ರಾಘವ ಅಲ್ಲಿಗೆ ಆಗಮಿಸಿದ.

# ಅಧ್ಯಾಯ ೧೪
# ವಚನ ಮುರಿಯಬೇಡಿರಿ ನಾಥಾ (ಕೈಕೇಯಿ)

ಶ್ರೀರಾಮನು ನಾಳೆ ಅಯೋಧ್ಯಾಪತಿ ಆಗುವನೆಂಬ ವಾರ್ತೆಯಿಂದಾಗಿ ಅರಮನೆಯಲ್ಲಿಯಂತೆಯೇ, ಅಯೋಧ್ಯಾನಗರದಲ್ಲಿಯೂ ಆನಂದಕ್ಕೆ ಉಕ್ಕು ಬಂದಿತ್ತು. ಪ್ರಜಾಜನರು ಆನಂದೋತ್ಸಾಹಗಳಲ್ಲಿ ಮಗ್ನರಾಗಿ ಹೋಗಿದ್ದರು. ಅದರಂತೆ ಶ್ರೀರಾಮನ ಇಬ್ಬರು ಮಲತಾಯಿಯಂದಿರೂ ಕೌಸಲ್ಯೆಯಷ್ಟೇ ಆನಂದದಲ್ಲಿ ಇದ್ದರು ಆದರೇ ऽऽ ಈ ಮಹಾನ್ ಸಂಭ್ರಮ ಮಂಥರೆ ಎಂಬ ದುಷ್ಟ ದಾಸಿಗೆ ಯಾಕೆ ಸಹಿಸಬಾಯಿತೋ ದೇವರೇ ಬಲ್ಲ. ಇವಳು ಶ್ರೀರಾಮಚಂದ್ರನ ಪಟ್ಟಾಭಿಷೇಕದ ಮಂಗಲ ಕಾರ್ಯಕ್ಕೆ ಯಾವ ರೀತಿಯಾಗಿ ವಿಘ್ನವನ್ನುಂಟು ಮಾಡಬೇಕೆಂಬುದನ್ನೇ ನೆನೆದು ಕೊಂಡು , ಒಳ್ಳೇ ಸಮಯಕ್ಕೆ, ಕೈಕೇಯಿಯಲ್ಲಿ ಬುದ್ಧಿ ಭೇದವನ್ನು ಕಲ್ಪಿಸುವ ವಿಚಾರವನ್ನಿಟ್ಟುಕೊಂಡು ಕೈಕೇಯಿಯ ಮಂದಿರಕ್ಕೆ ಬಂದು ಕೇಳುತ್ತಾಳೆ.

ಕೈಕೇಯಿ ರಾಣಿಯುವರೇ, ಸಂತೋಷದ ಸುದ್ಧಿ ನಾಳೇಯೇ ರಾಮನ ಪಟ್ಟಾಭಿಷೇಕವಂತೆ ಕೇಳಿದಿರಾ ?

ಕೈಕೇಯಿ- ಹೌದು ಮಂಥರೇ, ನಮ್ಮೆಲ್ಲರಿಗೂ ಬಹಳ ಸಂತೋಷವಾಗಿದೆ. ಹಿರಿಯನಾತ. ರಾಜ್ಯಕಾರಭಾರ ನೋಡಿಕೊಂಡು ಹೋಗಲು ಸಮರ್ಥನಿದ್ದಾನೆ. ಮಹಾರಾಜರಿಗೂ ವಯಸ್ಸಾಯಿತು. ರಾಜ್ಯ ಕಾರಭಾರ ಅವರಿಗೆ ಈಗ ಭಾರವೆನಿಸಹತ್ತಿದೆ. ಸಮಾರಂಭವೆಲ್ಲ ಸಂಭ್ರಮದಿಂದ ನೆರವೇರಬೇಕೆಂಬುದೇ ನಮ್ಮೆಲ್ಲರ ಇಚ್ಛೆ.

ಮಂಥರೆ- ಕಾರ್ಯ ಸಂಭ್ರಂಮದಿಂದಲೇ ನೆರವೇರಲಿ ತಾಯಿ ಆದರೆ ನನಗೇಕೋ ಒಂದು ಸಂದೇಹ ಬಂದು ನಿಮ್ಮನ್ನು ಕಾಣಲು ಬಂದೆನಷ್ಟೇ.

ಕೈಕೇಯಿ- ಸಂದೇಹ ! ಅದೇನು ಸಂದೇಹ ಮಂಥರೇ ?

ಮಂಥರೆ- ತುಸು ಆಳವಾಗಿ ವಿಚಾರಿಸಿ ನೋಡಿರಿ. ಭರತ ಶತ್ರುಘ್ನರು ತಮ್ಮ ಅಜ್ಜನ ಮನೆಗೆ ಹೋಗಿರುವುರಲ್ಲ. ಅವರಿಲ್ಲದಾಗ ಸಂಧಿಸಾಧಿಸಿ ರಾಜರು ಈ ಪಟ್ಟಾಭಿಷೇಕ ಯೋಜನೆ ಮಾಡಿಲ್ಲವಷ್ಟೇ ?

ಕೈಕೇಯಿ- ಇಲ್ಲಾ ಇಲ್ಲಾ ಮಂಥರೇ ಹಾಗೇನೂ ರಾಜರು ವಿಚಾರ ಮಾಡುವವರಲ್ಲ, ಮಾಡಿಯೂ ಇಲ್ಲ. ಭರತ ಶತ್ರುಘ್ನರನ್ನು ನಾಳೆಯೇ ಬರಮಾಡಿಕೊಳ್ಳಲಾಗುವುದು ಎಂದು ರಾಜರೇ ಹೇಳಿರುವರು ನನಗೆ. ಅದರಂತೆ ಅವರನ್ನು ಕರೆತರಲು ಈಗಾಗಲೇ ದೂತರನ್ನು ಕಳಿಸಿಯೂ ಆಗಿದೆ.

ಮಂಥರೆ- ಇರಲಿ. ನೀವು ಭರತನ ತಾಯಿಯಾಗಿ ಅವನ ಕಲ್ಯಾಣ ಕುರಿತು ಏನು ವಿಚಾರ ಮಾಡಿರುವಿರಿ ಹೇಳಿರಿ ಮೊದಲು. ಅದನ್ನು ನೀವು ಕಡೆಗಣಿಸಿದಂತೆ ಅನಿಸುವುದಿಲ್ಲವೇ ನಿಮಗೆ ? ಏನೇ ಆದರೂ ನಾನು ದಾಸಿ ಹೆಚ್ಚಿಗೆ ಹೇಳಲಾರೆ. ಈಗಾದರೂ ಸಾವಧಾನದಿಂದ ವಿಚಾರ ಮಾಡಿರಿ ಎಂದಿಷ್ಟೇ ಹೇಳುವೆ.

ಕೈಕೇಯಿ- ಮಂಥರೇ, ಮಹಾರಾಜರು ಯೋಗ್ಯ ವಿಚಾರಮಾಡಿ ಸರ್ವರ ಸಮ್ಮತಿಯಿಂದ ರಾಮನಿಗೆ ಪಟ್ಟಾಭಿಷೇಕ ಎಂದು ನಿರ್ಣಯ ಮಾಡಿರುವರು. ನಾವು ಮೂವರು ರಾಣಿಯರು ಸಂತೋಷದಿಂದ ಒಪ್ಪಿಗೆಯನ್ನಿತ್ತು ಆಗಿದೆ. ಇನ್ನುಸಾವಧಾನವಾಗಿ ವಿಚಾರ ಮಾಡುವುದಾದರೂ ಏನಿದೆ ? ಯೋಗ್ಯವಾದುದೇ ನಡೆಯಲಿದೆ ಮಂಥರೆ, ಯಾವುದಕ್ಕೂ ಯೋಚನೆ ಮಾಡಬೇಕಿಲ್ಲ.

ಮಂಥರೆ- ಏನೇ ಆಗಲಿ ಈಗಾದರೂ ನಿಮಗೊಂದು ಸಂಧಿ ತಂದು ಕೊಟ್ಟು ಭರತ ರಾಜನಾಗುವಂತೆ ಮಾಡಬೇಕೆಂದು ನನ್ನ ಇಚ್ಛೆ ಇದಕ್ಕೆ ನೀವು ಏನನ್ನುವಿರಿ? ಸ್ವಂತ ಮಗನ ರಾಜ್ಯ ಪಟ್ಟಾಭಿಷೇಕ ನಿಮ್ಮ ಕಣ್ಣುಗಳು ನೋಡಲಾರವೇ ?

ಕೈಕೇಯಿ- ಏನು ಮಂಥರೇ ನೀನು ಹೇಳುವುದಾದರೂ ಏನು ? ಅದೆಂತಹ ಸಂಧಿ, ರಾಜರನ್ನು ಇಂಥ ಸಂದರ್ಭದಲ್ಲಿ ವಿಚಾರಿಸುವುದಾದರೂ ಹೇಗೆ ಹೇಳು

ನೋಡೋಣ ?

ಮಂಥರೆ- ಹೇಳಲಾ ಹಾಗಾದರೆ ರಾಣಿಯವರೇ ? ನಿಮ್ಮ ಸ್ವಂತ ಮಗ ಭರತನಿಗೆ ರಾಜ್ಯಾಭಿಷೇಕವಾದುದನ್ನು ನೀವು ನೋಡಬೇಕೆಂಬುದಿಷ್ಟೇ ನನ್ನ ಇಚ್ಛೆ. ಇದರಲ್ಲಿ ನನ್ನ ಸ್ವಾರ್ಥವಿಲ್ಲ. ರಾಣಿಯವರೇ ಪ್ರತಿಜ್ಞೆ ಮಾಡಿ ಹೇಳುತ್ತೇನೆ ಬೇಕಾದರೆ.

ಕೈಕೇಯಿ- ಹೀಗೋ , ಹೇಳು ಹಾಗಾದರೆ ಮಂಥರೆ ನೋಡೋಣ. ಸಂಕೋಚ ಮಾಡಿ ಕೊಳ್ಳಬೇಡ. ನಿನ್ನ ಸಂಧಿಯ ಸದುಪಯೋಗ ಮಾಡಿಕೊಳ್ಳಲು ಸಾಧ್ಯವಾದರ ನೋಡೋಣ.

ಮಂಥರೆ- ಅಂದು ಇಂದ್ರನಿಗಾಗಿ ಶಂಬರನೊಡನೆ ದಶರಥರಾಜರು ಯುದ್ಧದಲ್ಲಿ ಇದ್ದಾಗ ರಥದ ಗಾಲಿಗೆ ನೀವು ಕೈ ಆಸರೆ ಇತ್ತಿರೆಂದು ರಾಜನಿಗೆ ವಿಜಯ ದೊರೆಕಿತು. ಆಗ ರಾಜನಿಗೆ ತುಂಬಾ ಸಂತೋಷವಾಗಿ ನಿಮಗೆ ಎರಡು ವರಗಳನ್ನು ಕೊಟ್ಟಿರುವರೆಂಬುದು ಜ್ಞಾಪಕವಿದೆಯೇ ನಿಮಗೆ ?

ಕೈಕೇಯಿ- ಹಾ ! ಹೌದು ऽ ಹೌ ऽ ऽ ದು. ನೆನಪಾಯಿತೀಗ ನನಗೆ. ಆದರೆ ಮಂಥರೇ. ಈಗ ಆ ಎರಡು ವರಗಳನ್ನು ನಾನು ಏನೆಂತು ಕೇಳುವುದು.?

ಮಂಥರೆ- ರಾಣಿಯವರೇ ಆ ಎರಡು ವರಗಳಲ್ಲಿ ಒಂದರಿಂದ ಭರತನಿಗೆ ರಾಜ್ಯಪಟ್ಟಾಭಿಷೇಕವಾಗಬೇಕೆಂದು ಬೇಡಿಕೊಳ್ಳಲಾರಿರಾ ? ನಿಮ್ಮ ಹೆತ್ತ ಮಗನಿಗಾಗಿ ಇಷ್ಟು ಕೂಡ ಮಾಡಲಾರಿರಾ ? - ಮೊದಲನೆಯ ವರದಿಂದ ಭರತನಿಗೆ ರಾಜ್ಯವಾಯಿತು. ಇನ್ನು ಅವನಿಗೆ ರಾಮನಿಂದ ತೊಂದರೆಯಾಗಬಾರದೆಂದು, ಎರಡನೆಯ ವರದಿಂದ ರಾಮನು ಹದಿನಾಲ್ಕು ವರುಷ ವನವಾಸಕ್ಕೆ ಹೋಗಬೇಕೆಂದು ಕೇಳಿಕೊಳ್ಳಿರಿ ಭರತ ಸಿಂಹಾಸನದ ಮೇಲೆ ಕುಳಿತುದನ್ನು ನೀವು ಕಣ್ತುಂಬ ನೋಡಿ ಸಂತೋಷಪಡುವಂತಾಗಲಿ ಹೇಗಿದೆ ನನ್ನ ಯೋಜನೆ ?

ಕೈಕೇಯಿ- ಮಂಥರೇ ಆದೆಷ್ಟು ಚತುರಳೇ ನೀನು ! ಒಳ್ಳೇ ಸಕಾಲಕ್ಕೆ ನನ್ನನ್ನು ಎಚ್ಚರಿಸಿದೆ ಇಲ್ಲದಿದ್ದರೆ ತಾಯಿ ಮಗನ ಕುತ್ತಿಗೆ ಕೊಯ್ದಂತಾಗುತ್ತಿತ್ತು ನೋಡು. ಇರಲಿ ಇನ್ನು ಮುಂದುವರೆಯುವುದು ಹೇಗೆ ?

ಮಂಥರೆ- ರಾಣಿಯರೇ ನಿಮ್ಮ ಕಾರ್ಯ ಹಗುರಾಗಿ ಆಗುವಂತೆ ಹೇಳುವೆ ಕೇಳಿರಿ. ರಘುವಂಶಜರು ವಚನ ಕೊಟ್ಟಿದ್ದನ್ನು ಪ್ರಾಣ ಹೋದರೂ ತಪ್ಪಿಸುವುದಿಲ್ಲ. ಆದುದರಿಂದ '' ವಚನದಂತೆ ನಡೆಯುತ್ತಿರಲ್ಲವೇ ?'' ಎಂದು ರಾಜರನ್ನು ಮೊದಲಿಗೆ ಕೇಳಿರಿ. ಅದಕ್ಕೆ ಅವರು ಹಿಂದು ಮುಂದು ನೋಡದೇ ವಚನ

ಪಾಲಿಸುವುದಾಗಿ ಆಶ್ವಾಸನೆ ಕೊಡುವರು. ಆಗ ನಿಮ್ಮ ಈ ಯೋಜನೆ ಅವರೆದರು ಇಡಿರಿ. ಕೇಳಿರಿಲ್ಲಿ ಹಟದಲ್ಲಿ ಎಷ್ಟೂ ಸಡಿಲಾಗಬಾರದು. ಹಾಗಾದರೆ ಕೆಲಸ ಕೆಟ್ಟೀತು ಎಚ್ಚರಿಕೆ.

ಕೈಕೇಯಿ- ಹಾ ! ತಿಳಿಯಿತು ಮಂಥರೆ ತಿಳಿಯಿತು ನನಗೆ ನಡೆ ನೀ ಇನ್ನು ನಾನು ಈಗಲೇ ರಾಜರನ್ನು ಬರಮಾಡಿಕೊಂಡು ನಿನ್ನ ಸಲಹೆಯಂತೆ ನಡೆಯುವೆ. ಎಂದಳು ಹೀಗೆ -

ಪ್ರಾರಂಭದಲ್ಲಿ ಕೈಕೇಯಿ ಅದೆಷ್ಟೋ ಬಗೆಯಿಂದ ವಿರೋಧಿಸಿದಳಾದರೂ ಕೊನೆಗೆ ಮಂಥರೆಯು ಬೀಸಿದ ಬಲೆಯಲ್ಲಿ ಅವಳು ಬಿದ್ದಳು. ಅವಳ ಮನದಲ್ಲಿಯೂ ಅಸೂಯೆ ನರ್ತಿಸತೊಡಗಿತು ಹಿಂದೆ ತಾನು ಎರಡು ವರಗಳನ್ನು ಸ್ಮರಿಸುತ್ತ ''ಯಾಕಾಗಬಾರದು ? ಒಂದು ವರದಿಂದ ಸ್ವಂತ ಮಗನಿಗೆ ರಾಜ್ಯ, ಎರಡನೆಯ ವರದಿಂದ ರಾಮನಿಗೆ ಹದಿನಾಲ್ಕು ವರುಷ ವನವಾಸ'' ಹೀಗೆ ತನ್ನ ಬೇಡಿಕೆಯನ್ನು ನಿರ್ಧರಿಸಿಕೊಂಡೇ ದಶರಥರಾಜನನ್ನು ಬರಮಾಡಿಕೊಂಡಳು ಮತ್ತು ಕ್ಷುದ್ರವಾದ ಧ್ವನಿಯಲ್ಲಿಯೇ ಆತನಿಗ ಎಚ್ಚರಿಕೆಯನ್ನಿತ್ತಳು.

ಕೈಕೇಯಿ- ''ನಾಥಾ ನೀವು ನನಗೆ ಎರಡು ವರಗಳನ್ನು ಕೊಟ್ಟಿರುವಿರಿ, ಜ್ಞಾಪಕವಿದೆಯಲ್ಲವೇ ?''

ದಶರಥರಾಜ- ಜ್ಞಾಪಕವಿದೆ ಕೈಕೇಯಿ. ರಾಮನ ಪಟ್ಟಾಭಿಷೇಕದ ಸಂತೋಷದ ಈ ಸಮಯದಲ್ಲಿ ನೀನು ಬೇಡಿದ್ದನ್ನು ಕೊಡುವೆ ಹೇಳು.

ಕೈಕೇಯಿ- ಕೇಳಿರಿ ಹಾಗಾದರೆ ಮೊದಲನೆಯ ವರದಿಂದ ನನ್ನ ಮಗ ಭರತನಿಗೆ ರಾಜ್ಯ ಪಟ್ಟಾಭಿಷೇಕವಾಗಬೇಕು. ಎರಡನೆಯ ವರದಿಂದ ರಾಮ ಹದಿನಾಲ್ಕು ವರುಷ ವನವಾಸಿಯಾಗಬೇಕು.

ದಶರಥರಾಜ- ಹಾಯ್-ಹಾಯ್ ಘಾತಮಾಡಿದಿ ಕೈಕೇಯಿ ऽ ऽ ಎಂತಹ ಸಂಭ್ರಮದ ಪ್ರಸಂಗದಲ್ಲಿ ಎಂತಹ ಹೀನ ವರಗಳನ್ನು ಕೇಳಿದೆಯಲ್ಲಾ ऽ ऽ ಕಿವಿಯಿಂದ ನಾನು ಕೇಳಲಾರೆ... ಹಾಯ್ ಹಾಯ್ ಏನಾಯಿತು ಇದು! ಎನ್ನುತ್ತಿದ್ದಂತೆ ದಶರಥರಾಜ ಮೂರ್ಛೆಹೋದ.

ಮೂರ್ಛೆತಿಳಿದೆದ್ದು - ಕೈಕೇಯಿಯನ್ನು ನೋಡಲಾಗದೇ ಕೆಳಗೆ ಮುಖಮಾಡಿಕೊಂಡು ಮಾತಾಡಲು ಬಾರದಾಗಿದ್ದರೂ ಹೇಗೋ ಚೇತರಿಸಿಕೊಂಡು - ದಶರಥರಾಜ '' ಕೈಕೇಯಿ ಕೇಳಿಲ್ಲಿ ಎಂತಹ ಸಂತೋಷದ...'' ಎಂದು ಹೇಳುತ್ತಿದ್ದಂತೆಯೇ ಮಧ್ಯ ಕೈಕೇಯಿ ''ಮುಂದೆ ನಿಮ್ಮ ಒಂದು ಶಬ್ದಕೂಡ ಬೇಡ ಎಚ್ಚರಿಕೆ ರಾಮನ

ಪ್ರೇಮಾಸಕ್ತರಾಗಿ ವಚನ ಭಂಗ ಮಾಡಲು ಹೊಯ್ದಾಡುವಿರಾ ? ಸಾಂತ್ವನ ಕಳವಳಗಳಿಗೆ ಎಷ್ಟೂ ಅವಕಾಶವಿಲ್ಲ. ಅದೆಲ್ಲ ನಿರರ್ಥಕ ಎಂದು. ಕೊಟ್ಟ ಮಾತು ಮೊದಲು ಪಾಲಿಸಿರಿ ಈಗಿಂದೀಗಲೇ ನನ್ನ ಮಗ ಭರತನನ್ನು ಅವರ ಅಜ್ಜನ ಮನೆಯಿಂದ ಕರೆದು ತರುವುದಾಗಲಿ. ಮಗನ ಸ್ನೇಹದ ಉನ್ಮಾದದಿಂದ ಅಡ್ಡ ತಿಡ್ಡ ಹೊಯ್ದಾಡುತ್ತಿರುವಿರಲ್ಲ ! ರಾಜರೇ ರಘುವಂಶದ ವೀರರಾದ ನಿಮಗೆ ವಚನ ಭಂಗ ಶೋಭಿಸುವುದೇ ? ಹೇಳಿರಿ ನಾಥಾ, ವಚನವೇನು ಯಾವಾಗ ಎಂಬುದು ನಿಮಗೆ ನೆನಪಾಗಲೊಲ್ಲದೇ ಹೇಳುತ್ತೇನೆ ಕೇಳಿರಿ. ಅಂದು ದಂಡಕ ವನದಲ್ಲಿ ಇಂದ್ರನಿಗಾಗಿ ಶಂಬರನನ್ನು ಎದುರಿಸಿದಾಗ ನಿಮ್ಮ ರಥ ಬೀಳುವುದರಲ್ಲಿ ಇತ್ತು. ಅಂತಹ ದುರ್ಬರ ಪ್ರಸಂಗದಲ್ಲಿ ಆ ರಥಕ್ಕೆ ನನ್ನ ಬಾಹುಗಳ ಸಾಂತ್ವನ ಆಶ್ರಯ ಕೊಟ್ಟವರಾರು ? ತುಸು ಜ್ಞಾಪಿಸಿಕೊಳ್ಳುವಿರಾ ? ನಾಥಾ ಆಗ ನೀವು ರಣದಲ್ಲಿ ವಿಜಯಿಗಳಾದಿರಿ. ಆ ಸಂಭ್ರಮದಲ್ಲಿ ನೀವು ನನಗೆ '' ಪ್ರಿಯೇ ನಿನ್ನ ಪ್ರಸಂಗಾವಧಾನವನ್ನು ತುಂಬಾ ಮೆಚ್ಚಿದೆ. ನಿನಗೆ ಎರಡು ವರಗಳನ್ನು ಕೊಡುವೆ ಬೇಡಿಕೋ ಎಂದು ಆಗ ಹೇಳಿದಿರಲ್ಲವೇ ? ಮಾತಾಡಿರಿ '' ಎಂದಳು ಕೈಕೇಯಿ. ಆದರೆ ದಶರಥರಾಜ ಮಾತನಾಡಲು ಅವಕಾಶವಿಲ್ಲದಂತಾಗಿ ಸ್ಥಬ್ದನಾಗಿ ಕುಳಿತು ಬಿಟ್ಟ. ಆದರೆ ಕೈಕೇಯಿ ಪುನಃ ತನ್ನ ಮಾತನ್ನು ಮುಂದುವರಿಸಿ - '' ಕೇಳಿರಿಲ್ಲಿ ರಾಜರೇ ನಾರಿಯರಲ್ಲಿ ಸ್ವಾಭಾವಿಕವಾಗಿಯೇ ಇರುವ ಚತುರತನದಿಂದ ನೀವಿತ್ತ ಆ ವರಗಳನ್ನು ಈ ವರೆಗೂ ಕಾಯ್ದಿರಿಸಿಕೊಂಡು, ಸಮಯ ಸಾಧಿಸಿ ಇಂದು ಅವುಗಳನ್ನು ಬೇಡುತ್ತಿರುವೆ ತಿಳಿಯಿತೇ ? ಮೊದಲಿನ ವರದಿಂದ ಈ ಸಿಂಹಾಸನ ಭರತನಿಗಾಗಲಿ, ಎರಡನೆಯ ವರದಿಂದ ರಾಮ ಹದಿನಾಲ್ಕು ವರುಷ ವನವಾಸಕ್ಕೆ ಹೋಗಲಿ. ಆಗ ಮಧ್ಯದಲ್ಲಿ ಮಾತನಾಡಲು ಪ್ರಯತ್ನ ಪಡುತ್ತಿದ್ದ ದಶರಥರಾಜನನ್ನು ತಡೆದು '' ರಾಜರೇ ಕೇಳುವುದಕ್ಕೂ ಹೇಳುವುದಕ್ಕೂ ಅವಕಾಶವಿಲ್ಲೀಗ. ಯಾಕೆಂದರೆ , ನಿಮ್ಮ ಪ್ರೇಮವೇ ಈ ಪಕ್ಷಪಾತಾವನ್ನು ಮಾಡಹಚ್ಚಿದೆ. ಇದರಲ್ಲಿ ಹೆಚ್ಚು ಕಡಿಮೆ ಏನೂ ಆಗತಕ್ಕದ್ದಲ್ಲ. ನಿಮ್ಮ ದೊಡ್ಡ ಬಾಯಿಂದ ನೀವೇ ಅಂದು ವರ ಕೊಟ್ಟಿರುವಿರಿ ಇಂದು ಅದನ್ನು ಪಾಲಿಸುವಾಗ ಈಗ ನಿಟ್ಟುಸಿರು ಬಿಡುತ್ತಿರುವುದೇಕೆ ನಾಥಾ ? ಮೊದಲು ಅರಮನೆಯಿಂದ ರಾಮನನ್ನು ಹೊರತೆಗೆಯಿರಿ. ಇಲ್ಲವೇ ವಂಶದ ರೀತಿಯನ್ನು ಮುರಿಯಿರಿ. ನೀವಿತ್ತ ಭಾಷ್ಯವನ್ನು ನೆನೆದುಕೊಂಡು ಧನ್ಯತೆಯನ್ನು ಗಳಿಸಿರಿ ದೇವಾ'' ಎಂದಳು ಕೈಕೇಯಿ.

ದಶರಥರಾಜನಿಗೆ ಕೈಕೇಯಿಯ ಕಠೋರ ಕರ್ಕಶ ಮಾತುಗಳನ್ನು ಸಹಿಸಲಾಗದೇ ಆತನಿಗೆ ಗ್ಲಾನಿಬಂದಂತಾಯಿತು. ಕೈಕೇಯಿ ''ನಾಥಾ, ನಿಮ್ಮ ಈ ಮೂರ್ಛೆ, ಕಣ್ಣೀರು ಇವೆಲ್ಲ ತೋರಕಿಯವು, ಸುಳ್ಳು , ಸೋಗು ಇವಲ್ಲ. ಐಶ್ವರ್ಯ ಪಿಪಾಸೆ ನಿಮ್ಮ

ಮಗ ರಾಮನಿಗುಂಟಾಗಿದೆ. ಅವನನ್ನು ತೃಪ್ತಿ ಪಡಿಸಬೇಕೆಂಬ ಹವ್ಯಾಸ ನಿಮಗುಂಟಾಗಿದೆ. ಇಷ್ಟೇ, ಇನ್ನೇನೂ ಇಲ್ಲ. ಆದುದರಿಂದ ರಾಜರೇ, ಪುನಃ ಹೇಳಿದ್ದನ್ನೇ ಹೇಳಲಾರೆ. ಆಕಾಶ ಹರಿದು ಬೀಳಲಿ, ಏನೇ ಆದರೂ ಈ ಎರಡು ವರಗಳನ್ನು ನಾನು ಪಡೆದುಕೊಂಡೇ ತೀರವೆ. ಪ್ರಾಣ ಹೋದರೂ ಬಿಡುವುದಿಲ್ಲ ತಿಳಿಯಿತೇ ನಾಥಾ'' ಎಂದು ಕರ್ಕಶವಾಗಿ ನುಡಿದಾಗ ದಶರಥರಾಜ ದಿಗ್ಮೂಢನಾಗಿ ಕುಳಿತುಬಿಟ್ಟ.

## ಅಧ್ಯಾಯ ೧೫

## '' ರಾಮಾ ನೀನು ಅದೆಂತು ವನಕ್ಕೆ ತೆರಳುವಿ ? '' ಕೌಸಲ್ಯೆ

ಕೈಕೇಯಿಯ ಕಠೋರ ನುಡಿಗಳು ದಶರಥರರಾಜನ ತಲೆಗೆ ವಜ್ರಾಘಾತ ಮಾಡಹತ್ತಿದವು. ಅವನ ಅವಸ್ಥೆ ತುಂಬಾ ದೀನವಾಯಿತು. ಅವನು ಕೈಕೇಯಿಗೆ ಅನೇಕ ರೀತಿಯಾಗಿ ಭಿನ್ನವಿಸಿ ನೋಡಿದ. ಬೇಡಿಕೊಂಡು ನೋಡಿದ . ಆದರೆ ಅವಳ ಮನ ಪರಿವರ್ತನ ಮಾಡಬೇಕೆಂಬ ಅವನ ಪ್ರಯತ್ನಗಳೆಲ್ಲ ವ್ಯರ್ಥವಾದವು. ಅವಳ ಹಟ ಅಣು ಮಾತ್ರವೂ ಕಡಿಮೆಯಾಗಲಿಲ್ಲ. ಮುಂದೆ ಏನು ಮಾಡಬೇಕೆಂಬುದೇ ರಾಜನಿಗೆ ತಿಳಿಯದಂತಾಗಿ ಸ್ತಬ್ಧನಾಗಿ ಕುಳಿತು ಬಿಟ್ಟ. ಇಷ್ಟರಲ್ಲಿಯೇ ಮಂತ್ರಿ ಸುಮಂತ ಕೈಕೇಯಿಯ ಬಾಗಿಲಿಗೆ ಬಂದ. ತತ್ಕ್ಷಣ ಕೈಕಕೇಯಿ ''ಸುಮಂತಾ, ಸತ್ವರದಲ್ಲಿ ರಾಮನನ್ನು ಇತ್ತ ಕಡೆಗೆ ಕರೆದುಕೊಂಡು ಬಾ '' ಎಂದು ಆಜ್ಞೆ ಇತ್ತಳು. ಯುವರಾಜ್ಯಾಭಿಷೇಕಕ್ಕೆ ವಸ್ತ್ರಭೂಷಣಗಳೊಂದಿಗೆ ಸಿದ್ಧನಾಗಿ ನಿಂತ ಶ್ರೀರಾಮನನ್ನು ಸುಮಂತ ಕೈಕೇಯಿಯ ಮಂದಿರಕ್ಕೆ ಕರೆತಂದು ನಿಲ್ಲಿಸಿದ.

ರಾಜಾ ದಶರಥರಾಜನ ಮ್ಲಾನ ವದನ, ಮುಖಕಳೆಗೆ, ಮಾತುಗಳೇ ಇಲ್ಲ. ಇವೆಲ್ಲವನ್ನು ಕಂಡ ಶ್ರೀರಾಮನಿಗೆ ಆಶ್ಚರ್ಯದ ಧಕ್ಕೆಯಾಯಿತು. ಕೈಸನ್ನೆಯಿಂದಲೇ ಅವನು ಕೈಕೇಯಿಗೆ ಇದರ ಕಾರಣವನ್ನು ಕೇಳಿದ. ಅವಳು ಎಲ್ಲ ವಿಷಯವನ್ನು ನಿವೇದಿಸಿ ಕೊನೆಗೆ '' ರಾಮಾ ಕೇಳು, ಇದೆಲ್ಲವನ್ನು ಸ್ಪಷ್ಟವಾಗಿ ನಿನ್ನೆದುರು ಹೇಳಲು ಇವರಿಗೆ ಧೈರ್ಯ ಸಾಲಲೊಲ್ಲದು. ಆದರೆ ಭರತನಿಗೆ ರಾಜ್ಯವಾಗಬೇಕು, ಮತ್ತು ನೀನು ಹದಿನಾಲ್ಕು ವರುಷ ವನವಾಸಕ್ಕೆ ಹೋಗಬೇಕೆಂಬುದೇ ಇವರ ಇಚ್ಛೆ'' ಎಂದು ಹೇಳಿದಳು. ಆಗ ಶ್ರೀರಾಮನು ಕೈಕೇಯಿಗೆ '' ತಾಯೀ ಕೈಕೇಯಿ, ಸಮರ್ಥಳು ನೀನು. ನಿನ್ನ ವರಗಳ ಬೇಡಿಕೆಯನ್ನು ನನ್ನ ಮುಂದೆ ಇಡದೇ ರಾಜನ ಮುಂದೆ ಯಾಕೆ ಇಟ್ಟೆ ? ರಾಜರು ನಿನಗಿತ್ತ ವಚನಗಳನ್ನು ನಾನು ಪಾಲಿಸುತ್ತಿರಲಿಲ್ಲವೇ ? ಇದರಿಂದ ನಿಶ್ಚಯವಾಗಿಯೂ ನೀನು ನನ್ನ ಸದ್ಗುಣಗಳ ಕುರಿತು

ಹ ತಾಳುವಿ ಎಂದು ನನಗೆ ನೋವಾಯಿತು. ಇರಲಿ ನಿನ್ನ ಆಜ್ಞೆಯಂತೆ ಇಂದೇ ವನಕ್ಕೆ ತೆರಳುವೆ. ನನ್ನ ತಮ್ಮ ಭರತನೇ ರಾಜ್ಯವಾಳಲಿ'' ಎಂದ ಶ್ರೀರಾಮ. ಮನ ಈ ನುಡಿಗಳನ್ನು ಕೇಳಿಯೂ ದಶರಥರಾಜ ಒಂದು ಮಾತು ಕೂಡ ಆಡದೇ ವನ್ನು ಗಮನಿಸಿ ರಾಜನ ಮೌನವೇ ತನಗೆ ವನಕ್ಕೆ ತೆರಳಲು ಅನುಮತಿ ಎಂದು ಮನು ತಿಳಿದು ಅತ ತತ್‌ಕ್ಷಣ ವನಕ್ಕೆ ಹೊರಡಲು ಅಣಿಯಾದ. ಇದರಿಂದ ಭಿಷೇಕ ಆನಂದದ ಮೇಲೆ ಒಮ್ಮೆಲೆ ಹುಳಿ ಹಿಂಡಿದಂತಾಯಿತು. ನಡೆದ ಯನ್ನು ತಾಯಿಗೆ ಅರುಹಿ ವನಕ್ಕೆ ತೆರಳಲು ಅಪ್ಪಣೆ ಪಡೆಯಲೆಂದು ಶ್ರೀರಾಮ ಯ ಮಂದಿರಕ್ಕೆ ಬಂದ. ಕೌಸಲ್ಯೆಗೆ ಇದಾವುದರ ಸುಳಿವೂ ಇರಲಿಲ್ಲ. ಇಂದಿನ ತನ್ನ ರಾಜ್ಯಾಭಿಷೇಕವನ್ನು ನೆನೆಯುತ್ತ ಅವಳು ಶುಭ್ರವಸ್ತ್ರವನ್ನು ಧರಿಸಿ ಅಗ್ನಿಗೆ ಆಹುತಿ ಸುತ್ತಿದ್ದಳು. ರಾಮ ಬಂದೊಡನೆ ಹರ್ಷಿತಳಾಗಿ ಕುಳಿತುಕೊಳ್ಳಲು ಅವನಿಗೆ ಆಸನ ದಿರಿಸಿದಳು. ಶ್ರೀರಾಮ ಕುಳಿತುಕೊಳ್ಳಲೇ ಇಲ್ಲಾ. ನಡೆದ ವಿಷಯವನ್ನೆಲ್ಲ ಕೊಂಡೇ ತಾಯಿಗೆ ಅರುಹಿ '' ತಂದೆಯ ಅಪ್ಪಣೆಯಿಂದಾಗಿ ವನವಾಸಕ್ಕೆ ಟಿರುವೆ, ತಾಯೀ ಅಪ್ಪಣೆ ಕೊಡು '' ಎಂದ. ಇದನ್ನು ಕೇಳಿದ ಕೌಸಲ್ಯೆ ''ಹಾಯ್ - ಪ್, ರಾಮಾ ಽ ಇದನ್ನೇನು ಕೇಳುತ್ತಿರುವೆ ನಾನು ? ಎಂದು ದಿಗ್ಭ್ರಾಂತಳಾಗಿ ಲ್ಲಿಯೇ ಕುಸಿದು ಬಿದ್ದಳು. ನಂತರ ತುಸು ಸಾವರಿಸಿಕೊಂಡು '' ಕೈಕೇಯಿಯ ಹಟ, -ರ-ಥ-ರಾ-ಜ-ರ ವ-ರ-ದಾ-ನ, ಶ್ರೀ-ರಾ-ಮ-ನ ಕ-ಠೋ-ರ ಕರ್ತವ್ಯ ಲನ! ರಾಮಾಽ ಽ, ರಾಮಾ ಽ ಽ ಇವಾವೂ ನನಗೆ ಅರ್ಥವಾಗಲೊಲ್ಲವೋ ಽ ಽ '' ು ಕಿರುಚಿಕೊಂಡು ಅವನನ್ನು ಎದೆಗೆ ಅವಚಿಕೊಂಡು ಅತ್ಯಂತ ಆರ್ತ ಸ್ವರದಲ್ಲಿ ಕೌಸಲ್ಯೆ ತೊಡಗಿದಳು.

''ರಾಮರಾಯ, ನೀನು ವನಕ್ಕೆ ಹೋಗಬೇಡಪ್ಪ. ನೂರು ಹರಕೆಯಿಂದ ಹೆತ್ತು ವನ್ನಿತ್ತುದು ಈ ದುಃಖ ಭೋಗಿಸಲೆಂದೇ ? ಪ್ರಾಣ ಹೊರ ಹೊರಟು ನನ್ನ ನಿರೋಪ ಹತ್ತಿದೆ. ರಾಮಾ ಽ ಎಷ್ಟು ಮೂಢಳೋ ಆ ಕೈಕೇಯಿ ! ನನ್ನಂತೆಯೇ ಅವಳೂ ಅಬಲೆ- ಯಲ್ಲವೇ? ತನ್ನ ಮಗ ಭರತನಿಗೆ ಹೀಗೆ ವನಕ್ಕೆ ಹೋಗಲು ಅಪ್ಪಣೆ ಕೊಡುವಳೇ ಳು ? ರಾಮಾಽ ಹೇಳು . ಇರಲಿ, ಅದೂ ಆಗಲಿ, ಅವಳ ಮಗ ಭರತನೇ ರಾಜ್ಯ ಭೋಗಿಸುವುದನ್ನು ಕಂಡು ಅವಳ ಕಣ್ಮನಗಳು ತಣಿದು ತೃಪ್ತಿಯಾಗಲಿ ಅವಳಿಗೆ. ರಾಮಾಽ ಆ ವೈರಿಯು ವ್ಯರ್ಥವಾಗಿ ನಿನ್ನನ್ನು ವನಕ್ಕೆ ಅಟ್ಟಬೇಕೆನ್ನುವಳಲ್ಲ ! ಯಾವ ಕಾರಣಕ್ಕಾಗಿ ? ರಾಮಾ, ಯಾರಿಗೂ ಹೇಳಬಾರದಿದನ್ನು ನಿಜ. ಆದರೆ ಇಂದು ಮಾತ್ರ ಅದನ್ನು ನಿನ್ನಿಂದ ಬಚ್ಚಿಟ್ಟುಕೊಳ್ಳಲು ನನಗೆ ಆಗಲೊಲ್ಲದು , ರಾಮಾ ಹೇಳುತ್ತೇನೆ ಕೇಳು.

'' ನನಗಿಂತ ಕೈಕೇಯಿ ಅವರಿಗೆ ಹೆಚ್ಚು ಪ್ರಿಯಳು. ಈ ನನ್ನ ಮೂಕ ಯಾತನೆಯನ್ನು ಯಾರ ಮುಂದು ಈ ವರೆಗೂ ನಾನು ಉಸುರಿಲ್ಲ. ಅವಳ ಕಣ್ ಕೆಂಡದಿಂದ ಈ ವರೆಗೂ ನನ್ನ ಜೀವನ ಬೇಯುತ್ತಲೇ ಬಂದಿದೆ ಮಗನೇ ಽ. ಆದರೆ ನಿನ್ನ ರಾಜ್ಯದಲ್ಲಿಯಾದರೂ ಕೊನೆಯಲ್ಲಿ ಸಮಾಧಾನ ಸಿಕ್ಕೀತೆಂದು ಭಾವಿಸಿದ್ದೆ. ಅಂತ್ಯದಲ್ಲಿಯಾದರೂ ನಿನ್ನ ನೆರಳಿನಲ್ಲಿ ಉಳಿದೇನು ಎಂದು ಕೊಂಡಿದ್ದೆ. ಆದರೆ ಕೊನೆಗಳಿಗೆಯಲ್ಲಿ ಏನು ನನ್ನ ಈ ದುರ್ದಶೆ ! ರಾಮಾ, ಇಷ್ಟಾದರೂ ನಿನಗೆ ನಾನು ಅಧರ್ಮವನ್ನು ಹೇಗೆ ಬೋಧಿಸಲಿ ? ನಿನ್ನ ತಂದೆಯ ಆಜ್ಞೆಯನ್ನು ಅವಶ್ಯವಾಗಿ ಪಾಲಿಸಿ ಅವನನ್ನು ತೃಪ್ತಿ ಪಡಿಸು. ಆದರೆ ನನ್ನನ್ನು ನಿನ್ನ ಜೊತೆಗೆ ಕಾಡಿಗೆ ಕರೆದೊಯ್ಯಲು ಅವರ ಅನುಮತಿಯನ್ನಾದರೂ ಪಡೆ ಎಂದಿಷ್ಟೇ ನಾನು ನಿನ್ನನ್ನು ಕೇಳಿಕೊಳ್ಳುವೆ, ಯಾಕೆಂದರೆ ನಿನ್ನನ್ನುಳಿದು ನಾನು ಇಲ್ಲಿ ಹೇಗೆ ಬಾಳಲಿ ? ನಿನ್ನ ವಿಯೋಗವನ್ನು ನಾನು ಹೇಗೆ ಸಹಿಸಲಿ ? ಜಮದಗ್ನಿಯಂತೆ ನಿನ್ನಿಂದ ನನ್ನ ವಧೆ ಮಾಡಲು ನಿಮ್ಮ ತಂದೆ ನಿನಗೇಕೆ ಹೇಳುವುದಿಲ್ಲ ಹೇಳು. ರಾಮಾ ಕೊನೆಯದಾಗಿ ಹೇಳುವೆ. ನನಗೆ ನಿನ್ನ ಕೈಯಿಂದ ಮರಣವನ್ನಿತ್ತು ಆಮೇಲೆ ಬೇಕಾದರೆ ನೀನು ರಾಜನಾಗು ಇಲ್ಲವೇ ವನವಾಸಿಯಾದರೂ ಆಗು. ನಾನಾಗ ನಿರ್ದೇಹಿಯಾಗಿ ನಿನ್ನ ಬೆನ್ನ ಹಿಂದೆ ತಿರುಗುವೆ '' ಈ ರೀತಿಯಾಗಿ ಅನೇಕ ರೀತಿಯಿಂದ ಕೌಸಲ್ಯೆ ಆಕ್ರೋಶ ಮಾಡಹತ್ತಿದಳು

## ಅಧ್ಯಾಯ ೧೬

## ''ರಾಮನ ಹೊರತು ರಾಜಪದದ ಮೇಲೆ ಯಾರು ಕೂಡ್ರುವರೋ ನೋಡುತ್ತೇನೆ '' (ಲಕ್ಷ್ಮಣ)

ಕೌಸಲ್ಯೆ ಅದೆಷ್ಟು ಆಕ್ರೋಶ ಮಾಡಿದರೂ ಶ್ರೀರಾಮನ ನಿಶ್ಚಯ ಬದಲಾಗಲಿಲ್ಲ. ಪ್ರತಿಯಾಗಿ '' ತಾಯಿ ವೃದ್ಧ ತಂದೆಯನ್ನು ನೋಡಿಕೊಂಡು ನೀನಿಲ್ಲಿಯೇ ಇರು. ಎಂತಹ ಪರಿಸ್ಥಿತಿಯಲ್ಲಿಯೂ ಸತಿಯು ಪತಿಯನ್ನುಳಿದು ಇರಕೂಡದು ಎಂದು ಧರ್ಮ ಹೇಳುತ್ತದೆ ಇದನ್ನು ನಾನು ನಿನಗೆ ಹೇಳಬೇಕೆ ? ಎಂದ ಶ್ರೀರಾಮಾ ಇದೆಲ್ಲವನ್ನು ಎವೆಯಿಕ್ಕದೇ ಕಣ್ಣುಗಳಿಂದ ನೋಡುತ್ತಿದ್ದ ಲಕ್ಷ್ಮಣನಿಗೆ ಮಾತ್ರ ಈಗ ಸಹನವಾಗಲಿಲ್ಲ. ಸಂತಾಪಗೊಂಡು ಮಾತನಾಡಲು ಪ್ರಾರಂಭಿಸಿದ.

'' ಏನು ಅಣ್ಣ ನೀನು ಹೇಳುತ್ತಿರುವುದು ? ನಿನ್ನ ಹೊರತು ರಾಜಪದದ ಮೇಲೆ ಯಾರು ಕೂಡುವರೋ ಅವರನ್ನು ಒಂದು ಕೈ ನೋಡೇ ಬಿಡುತ್ತೇನೆ''. ಎಂದು ಕೈಯಲ್ಲಿಯ ಖಡ್ಗವನ್ನು ಝುಳಪಿಸಿದ. ಮುಂದುವರಿದು '' ರಾಮಾ ನೀನು ಸಮರ್ಥನೇನೋ ನಿಜ ಆದರೆ ನೀನು ವ್ಯರ್ಥವಾಗಿ ವಂಚಿತನಾದಿ. ಈ ಪಾಪಿಷ್ಠರ ಪಾಪವೆಲ್ಲ ನನಗೆ ಗೊತ್ತು.

ಷ್ಟವಾಗಿ ಹೇಳುತ್ತೇನೆ ಕೇಳು. ವರವೂ ಇಲ್ಲ. ಮುಖ್ಯವಾಗಿ ಕೈಕೇಯಿಗೆ ತನ್ನ ಮಗ ಭರತ ಾಜ್ಯವಾಳ ಬೇಕಾಗಿದೆ. ವಿಷಯ ಮಗ್ನ ತಂದೆ ಅವಳ ನುಡಿಗೆ ಮಣಿದ. ಆದುದು ಇಷ್ಟೇ - ನ್ನೇನೂ ಇಲ್ಲಾ. ಮಗನ ಕೇಡು ಬಯಸುವ ಇವರೆಂತಹ ತಾಯಿ ತಂದೆಗಳು ? ನಿನಗಿತ್ತ ಚನವನ್ನು ತಂದೆ ಹೇಗೆ ಮುರಿಯುತ್ತಾನೋ ನೋಡೋಣ. ಇನ್ನೇನೂ ಇಲ್ಲ. ವಿಷಯ ುಖಕ್ಕೆ ರಾಜನೆಳಸಿ ಅದರಲ್ಲಿ ಮೈಮರೆತು ನಿನಗಿತ್ತ ವಚನವನ್ನು ಆತ ಭಂಗ ಮಾಡಿದ. ಾದರೆ ಮಡದಿಯ ಹಟವನ್ನು ಮಾತ್ರ ಸುಮ್ಮನೇ ಮನ್ನಿಸುತ್ತಾನೆ. ರಾಮಾ ನೀನೇ ಹೇಳು ಾಗಾದರೆ, ಕೈಕೇಯಿಗೆ ವರವಿತ್ತುದು ರಾಜನಿಗೆ ಇಂದೇ ಏಕೆ ನೆನಪಾಯಿತು ? ಈ ವರೆಗೂ ಾವನು ಈ ಕುರಿತು ಯಾರೆದುರೂ ಉಸುರೊಡೆಯಲಿಲ್ಲವಲ್ಲ !

ಮದವೇರಿದ ಆನೆಯಂತೆ ಜೋಲಿ ಹೊಡೆಯುತ್ತ ದಿಕ್ಕು ತಿಳಿದತ್ತ ನಿನ್ನ ದೈವ ತ್ತೋ ಸಾಗಿದೆ. ಆದಕ್ಕೆ ನಾನೇ ಹಗ್ಗಹಚ್ಚಿ ನಿಯಂತ್ರಿಸುವೆ. ರಾಮಾ ರಾಜಪದವನ್ನು ನೀನೇ ರತಕ್ಕದ್ದು. ಅಡ್ಡ ಯಾರು ಬರುವರೋ ಅವರ ರುಂಡಗಳನ್ನು ಚೆಂಡಾಡಿ ಬಿಡುತ್ತೇನೆ. ಮೂರು ಲೋಕಗಳೂ ಸೇರಿ ಒಮ್ಮೆಲೇ ಇದಿರು ಬಂದರೂ ನಾನೊಬ್ಬನೇ ಅವರನ್ನು ಎದುರಿಸಬಲ್ಲೆ. ವೃದ್ಧ ಪಿತನು ಏನು ಮಾಡುತ್ತಾನೋ ನೋಡೋಣ. ಚಾಪಧರನೇ, ನೂರು ವರುಷಗಳ ಕಾಲ ಸುಖವಾಗಿ ರಾಜ್ಯವಾಳು. ರಕ್ಷಣೆಗೆ ನಿನ್ನ ಹಿಂದೆ ನಾನು ಸಧಾ ಸಿದ್ದನಿರುವೆ. ಇದಿರು ಬಂದವರನ್ನು ಶಿಕ್ಷಿಸುವೆ. ಅಣ್ಣಾ ರಾಮಾ, ಈ ಲಕ್ಷ್ಮಣ ನಿನ್ನ ತಮ್ಮನಲ್ಲ ಈಗ. ನಿನ್ನ ದಾಸನೀತ ಎಂದು ತಿಳಿ. ಈ ನನ್ನ ನುಡಿಗಳಿಗೆ ಇದೋ ಕೌಸಲ್ಯಾ ಮಾತೆಯ ಪಾದಗಳೇ ಸಾಕ್ಷಿ ''ಎಂದು ಕೌಸಲ್ಯೆಯ ಪಾದಗಳನ್ನು ಸ್ಪರ್ಶಿಸಿ ನುಡಿದ. ಆಗ ಶ್ರೀರಾಮ ಪ್ರೇಮದಿಂದ ಅಪ್ಪಿಕೊಂಡು ಆವನನ್ನು ಶಾಂತಗೊಳಿಸಲು ಪ್ರಯತ್ನಿಸಹತ್ತಿದ - ಎಂದು, ಗದ್ಯ ರೂಪ ಗೀತ ರಾಮಾಯಣದ ೧೬ನೆಯ ಅಧ್ಯಾಯದೊಂದಿಗೆ **ಶ್ರೀರಾಮಾಯಣ ನಿತ್ಯ ಚಿಂತನ** ಸಪ್ತಾಹದ ೨ ನೆಯ ದಿನ ಮುಗಿದುದು.

ಶ್ರೀರಾಮಚಂದ್ರಾರ್ಪಣ ಮಸ್ತು

ರಾಮರಕ್ಷಾ ಭಾಗ

ಕೌಸಲ್ಯೇಯೋ ದೃಶೌ ಪಾತು । ವಿಶ್ವಾಮಿತ್ರಪ್ರಿಯಃ ಶ್ರುತೀ ।
ಘ್ರಾಣಂ ಪಾತು ಮಖತ್ರಾತಾ । ಮುಖಂ ಸೌಮಿತ್ರಿವತ್ಸಲಃ ॥೫॥

ಜಿಹ್ವಾಂ ವಿದ್ಯಾನಿಧಿಃ ಪಾತು । ಕಂಠಂ ಭರತ ವಂದಿತಃ ।
ಸ್ಕಂಧೌ ದಿವ್ಯಾಯುಧಃ ಪಾತು । ಭುಜೌ ಭಗ್ನೇಶಕಾರ್ಮುಕಃ ॥೬॥

ಕರೌ ಸೀತಾಪತಿಃ ಪಾತು । ಹೃದಯಂ ಜಾಮದಗ್ನ್ಯಜಿತ್ ।
ಮಧ್ಯಂ ಪಾತು ಖರಧ್ವಂಸೀ । ನಾಭಿಂ ಜಾಂಬವದಾಶ್ರಯಃ ॥ ೭ ॥

ಸುಗ್ರೀವೇಶಃ ಕಟೀ ಪಾತು । ಸಕ್ಥಿನೀ ಹನುಮತ್ಪ್ರಭುಃ ।
ಊರೂ ರಘೂತ್ತಮಃ ಪಾತು । ರಕ್ಷಃ ಕುಲವಿನಾಶಕೃತ್ ॥ ೮ ॥

ಜಾನುನೀ ಸೇತುಕೃತ್ ಪಾತು । ಜಂಘೇ ದಶಮುಖಾಂತಕಃ ।
ಪಾದೌ ವಿಭೀಷಣ ಶ್ರೀದಃ ಪಾತು । ರಾಮೋ ಖಿಲಂ ವಪುಃ ॥ ೯ ॥

ಏತಾಂ ರಾಮ ಬಲೋ ಪೇತಾಂ । ರಕ್ಷಾಂ ಯಃ ಸುಕೃತೀ ಪಠೇತ್ ।
ಸಚಿರಾಯುಃ ಸುಖೀ ಪುತ್ರೀ । ವಿಜಯೀ ವಿನಯೀ ಭವೇತ್ ॥ ೧೦ ॥

**ಜಾನಕೀ ಜೀವನ ಸ್ಮರಣ ಜಯ ಜಯ ರಾಮ**
**ಶ್ರೀರಾಮ ಜಯ ರಾಮ ಜಯ ಜಯ ರಾಮ ( ೧೦ ಸಾರೆ )**
**ಜಯ ಜಯ ರಘುವೀರ ಸಮರ್ಥ.**

# ಸಪ್ತಾಹದ ೩ ನೆಯ ದಿನ

ಶ್ರೀ ರಾಮ ಜಯರಾಮ ಜಯ ಜಯರಾಮ ( ೧೦ ಸಾರೆ )

''ಜಯ ಜಯ ರಘುವೀರ ಸಮರ್ಥ''

ಧ್ಯಾನ್ಯ ಶ್ಲೋಕ :-

ಧ್ಯಾಯೇದಾ ಜಾನುಬಾಹುಂ --------- ಮಂಡನಂ ರಾಮಚಂದ್ರಂ

ಇತಿಧ್ಯಾನಂ

ಜಯ ಜಯ ರಘುವೀರ ಸಮರ್ಥ

**ಪೂರ್ವಕಥಾನುವಾದ** :- ರಾಮ ಲಕ್ಷ್ಮಣರು ಕೌಸಲ್ಯೆ ದಶರಥರಾಜರ ಆಶೀರ್ವಾದಗಳನ್ನು ಪಡೆದುಕೊಂಡು ವಿಶ್ವಾಮಿತ್ರರಂತಹ ಜ್ಞಾನಸಂಪನ್ನ ನೇತಾರ ಜೊತೆಯಲ್ಲಿ ಅವರ ಯಜ್ಞ ಸಂರಕ್ಷಣಾರ್ಥವಾಗಿ ಪ್ರಥಮ ಬಾರಿ ಅವರು ಅಯೋಧ್ಯೆಯಿಂದ ಹೊರ ಹೊರಟರು. ವಿಶ್ವಾಮಿತ್ರರ ಆಜ್ಞೆಯಂತೆ ಶ್ರೀರಾಮ ತಾಟಿಕಾ ವಧೆ ಮಾಡಿದ. ಹಾಗೇ ಮುಂದೆ ಸಾಗಿ ಅವರು ವಿಶ್ವಾಮಿತ್ರರ ಸಿದ್ಧಾಶ್ರಮವನ್ನು ತಲುಪಿದರು. ಸಿದ್ಧಾಶ್ರಮದಲ್ಲಿ ತುಸು ವಿಶ್ರಾಂತಿ ತೆಗೆದುಕೊಂಡು ಆಶ್ರಮವಾಸಿಗಳ ಜೊತೆ ಮಿಥಿಲೆಗೆ ಹೊರಟರು. ಮಾರ್ಗ ಕ್ರಮಿಸುವಾಗ ಮಧ್ಯ ಗೌತಮ ಋಷಿಯ ಆಶ್ರಮದ ಹತ್ತಿರ ಶಿಲೆಯಾಗಿ ಬಿದ್ದ ಅಹಲ್ಯೆಯ ಉದ್ಧಾರ ಶ್ರೀ ರಾಮನಿಂದ ಆಗಿದೆ. ಹಾಗೆ ಮುಂದೆ ನಡೆದು ಅವರೆಲ್ಲರೂ ಮಿಥಿಲೆಯನ್ನು ತಲುಪಿದರು. ವಿಶ್ವಾಮಿತ್ರರು ಜನಕರಾಜನಿಗೆ ಶ್ರೀರಾಮ ಲಕ್ಷ್ಮಣರ ಪರಿಚಯ ಮಾಡಿಕೊಟ್ಟರು. ಜನಕರಾಜನ ಅಪ್ಪಣೆಯ ಮೇರೆಗೆ ಆ ಮಹಾನ್ ಶಿವ ಧನುಷ್ಯವನ್ನು ಶ್ರೀ ರಾಮ ಲೀಲಾಜಾಲವಾಗಿ ಎತ್ತಿಬಿಟ್ಟ. ಬಾಣ ಹೂಡಲು ಅದನ್ನು ಬಾಗಿಸಲು ಅವನು ಪ್ರಯತ್ನ ಮಾಡುತ್ತಿದ್ದಂತೆಯೇ ಅದು ಪ್ರಚಂಡ ನಾದದೊಂದಿಗೆ ಭಂಗವಾಯಿತು. ಜನಕರಾಜನಿಗೆ ಮಹಾದಾನಂದವಾಯಿತು. ಅಯೋಧ್ಯೆಯಿಂದ ದಶರಥರಾಜನ ಎಲ್ಲ ಪರಿವಾರವನ್ನು ಬರಮಾಡಿಕೊಂಡು ಶ್ರೀರಾಮನಿಗೆ ಸೀತೆಯನ್ನು ತನ್ನ ತಮ್ಮನ ಮಕ್ಕಳಾದ ಉರ್ಮಿಳೆಯನ್ನು ಲಕ್ಷ್ಮಣನಿಗೆ, ಮಾಂಡವಿಯನ್ನು ಭರತನಿಗೆ, ಶ್ರುತ- ಕೀರ್ತಿಯನ್ನು ಶತ್ರುಘ್ನನಿಗೆ ಕೊಟ್ಟು ಅವರ್ಣನೀಯವಾದ ರೀತಿಯಲ್ಲಿ ವಿವಾಹ ಸಮಾರಂಭವನ್ನು ನೇರವೇರಿಸಿದ. ದಶರಥರಾಜ ತನ್ನ ಎಲ್ಲ ಪರಿವಾರದೊಂದಿಗೆ ಅಯೋಧ್ಯೆಗೆ ಮರಳಿದ. .

ಸೀತೆಯೊಂದಿಗೆ ಶ್ರೀರಾಮ ಅರಮನೆಯಲ್ಲಿ ಗೃಹಸ್ಥಾಶ್ರಮ ಭೋಗಿಸಹತ್ತಿದ. ಅವನು ಮಹಾ ಪರಾಕ್ರಮಿಯಾದರೂ ಒಳ್ಳೇ ವಿನಯ ಶೀಲನಾಗಿದ್ದ. ಪ್ರಜೆಗಳಿಗೆಲ್ಲ ಸೀತಾರಾಮರು ಪ್ರಿಯವಾದರು. ಸಧಾಚಾರ ಸಂಪನ್ನನಾದ ಮಗ ಶ್ರೀರಾಮನನ್ನು ಕಂಡು ಅವನಿಗೆ ರಾಜ್ಯಾಭಿಷೇಕ ಮಾಡಿ ತಾನು ಶೇಷಾಯುಷ್ಯವನ್ನು ದೇವರ ಧ್ಯಾನದಲ್ಲಿ ಕಳೆಯಯಬೇಕೆಂದು ದಶರಥ ರಾಜ ಬಯಸಿದ. ತದನುಸಾರ ಋಷಿ ಮುನಿಗಳ ಅಭಿಪ್ರಾಯದಂತೆ ರಾಮನ ರಾಜ್ಯ ಪಟ್ಟಾಭಿಷೇಕದ ಮಂಗಲ ದಿನ ಪ್ರಸಿದ್ಧಿ ಪಡೆಯಿತು.

ಆದರೆ ಮಂಥರೆ ಎಂಬ ದಾಸಿಗೆ ಸಂಭ್ರಮದಿಂದ ನಡೆಯಲಿದ್ದ ಈ ಮಂಗಲ ಕಾರ್ಯ ಯಾಕೆ ಸಹಿಸದಾಯಿತೋ ದೇವರೇ ಬಲ್ಲ. ಅವಳು ಕೈಕೇಯಿಗೆ, ಹಿಂದೆ ಎಂದೋ ದಶರಥರಾಜನಿಂದ ಅವಳು

ಪಡೆದ ಎರಡು ವರಗಳನ್ನು ನೆನಪಿಗೆ ತಂದು ಕೊಟ್ಟಳು ಮತ್ತು ಒಂದರಿಂದ ಭರತನಿಗೆ ರಾಜ್ಯ ಮತ್ತು ಇನ್ನೊಂದರಿಂದ ರಾಮನಿಗೆ ಹದಿನಾಲ್ಕು ವರುಷ ವನವಾಸ ಎಂದು ಬೇಡಿಕೊಳ್ಳಲು ಹಚ್ಚಿದಳು. ಪ್ರಾರಂಭದಲ್ಲಿ ಕೈಕೇಯಿ ಅದೆಷ್ಟು ಬಗೆಯಿಂದ ವಿರೋಧಿಸಿದಳಾದರೂ, ಕೊನೆಗೆ ಮಂಥರೆಯು ಬೀಸಿದ ಬಲೆಯಲ್ಲಿ ಬಿದ್ದಳು. ದಶರಥರಾಜ ತಾನಿತ್ತ ವರಗಳ ವಚನದಲ್ಲಿ ಸಿಕ್ಕಿ ಬಿದ್ದ. ಅವನ ಸ್ಥಿತಿ ತುಂಬಾ ಶೋಚನೀಯವಾಯಿತು. ಆಗ ಕೈಕೇಯಿ ತತ್‌ಕ್ಷಣ ರಾಮನನ್ನು ಬರಮಾಡಿಕೊಂಡಳು. ದಶರಥರಾಜ ತನಗಿತ್ತ ಎರಡು ವರಗಳ ವಿಷಯ ಹೇಳಿ ತನ್ನ ಬೇಡಿಕೆಯನ್ನು ಸ್ಪಷ್ಟಪಡಿಸಿದಳು. ಕೈಕೇಯಿಯ ಈ ಅನಿರೀಕ್ಷಿತ ನಿರ್ಣಯದಿಂದ ಶ್ರೀರಾಮ ಅದೆಷ್ಟೂ ವಿಚಲಿತನಾಗಲಿಲ್ಲ.

ತಂದೆಯ ವಚನ ಪಾಲಿಸಲೆಂದು ವನವಾಸಕ್ಕೆ ಹೋಗುವ ತನ್ನ ನಿರ್ಧಾರವನ್ನು ಶ್ರೀರಾಮ ತಾಯಿ ಕೌಸಲ್ಯೆಗೆ ಅರುಹಿದಾಗ ಅವಳಿಗೆ ಅಪಾರ ದುಃಖವಾಗಿ, ತಾನೂ ವನಕ್ಕೆ ಹಿಂಬಾಲಿಸುವವಳು ಎಂದು ಅವಳು ಆಗ್ರಹ ಹಿಡಿದಾಗ , '' ಎಂತಹ ಪರಿಸ್ಥಿತಿಯಲ್ಲಿಯೂ ಸತಿಯು ಪತಿಯನ್ನುಳಿದು ಇರಕೂಡದು'' ಎಂಬ ಧರ್ಮದ ಮಾತು ಅವಳಿಗೆ ನೆನಪಿಗೆ ತಂದು ಕೊಟ್ಟ. ಮತ್ತು ವೃದ್ಧ ತಂದೆಯನ್ನು ನೋಡಿಕೊಂಡು ಅಲ್ಲಿಯೇ ಉಳಿಯಲು ಶ್ರೀರಾಮ ವಿನಂತಿಸಿಕೊಂಡ.

ಬದಿಯಲ್ಲಿಯೇ ನಿಂತಿದ್ದ ಲಕ್ಷ್ಮಣನಿಗೆ ರಾಮನ ಈ ವನವಾಸದ ನಿರ್ಧಾರ, ತಾಯಿಗರುಹಿದ ಧರ್ಮದ ಮಾತು ಇವಾವೂ ಸಹನವಾಗಲಿಲ್ಲ. ಅವನು ಸಿಡಿದೆದ್ದ. '' ರಾಮಾ ನೀನೇ ರಾಜಪದ ಏರತಕ್ಕದ್ದು. ಅಡ್ಡ ಯಾರು ಬರುವರೋ ಅವರ ರುಂಡಗಗಳನ್ನು ಚೆಂಡಾಡಿ ಬಿಡುವೆ'' ಎಂದು ಗರ್ಜಿಸಿದ. ಆಗ ಶ್ರೀರಾಮಾ ಅವನನ್ನು ಶಾಂತಗೊಳಿಸಲು ಪ್ರಯತ್ನ ಮಾಡಹತ್ತಿದ ಎಂಬುದು ನಿನ್ನೆಯ ಕಥೆಯ ಸಾರಾಂಶ . **ಇನ್ನು ಇಂದು ಮುಂದಿನ ಕಥೆ ಕೇಳೋಣ.**

# ಅಧ್ಯಾಯ ೧೭

## '' ರಾಘವನೆಲ್ಲಿಯೋ ಅಲ್ಲಿಯೇ ಸೀತಾ '' ( ಸೀತಾದೇವಿ)

ಹೀಗೆ ಸಹನೆ ಮೀರಿ ಸಂತಪ್ತನಾಗಿದ್ದ ಲಕ್ಷ್ಮಣನನ್ನು ಶ್ರೀರಾಮನು ಬಹು ಪ್ರಯಾಸದಿಂದ ಶಾಂತಗೊಳಿಸಿದ. ಮತ್ತು ತಾಯಿ ಕೌಸಲ್ಯೆಗೆ ಆತನು ನಮ್ರನಾಗಿ '' ಅಮ್ಮ, ನನ್ನ ವನವಾಸಗಮನ ಮಹಾರಾಜನನ್ನು ತುಂಬಾ ದುಃಖಕ್ಕೀಡು ಮಾಡಿದೆ. ಇಂತಹ ಪರಿಸ್ಥಿತಿಯಲ್ಲಿ ಅವರನ್ನು ಹೀಗೇ ಇಲ್ಲಿಯೇ ಬಿಟ್ಟು ನನ್ನ ಜೊತೆ ವನಕ್ಕೆ ಬರುವುದು ಯೋಗ್ಯವಲ್ಲ. ಅವರನ್ನು ನೋಡಿಕೊಂಡು ನೀನಿಲ್ಲಿಯೇ ಇರುವುದೇ ಒಳ್ಳೇದುಅಲ್ಲವೇ, ನೀನೆ ವಿಚಾರಮಾಡಿ ನೋಡು '' ಎಂದು ನುಡಿದಾಗ ಅನಿವಾರ್ಯವಾಗಿ ಕೌಸಲ್ಯೆಗೆ ಇದನ್ನು ಮನ್ನಿಸಲೇ ಬೇಕಾಯಿತು.

ತಾಯಿಯ ಅಪ್ಪಣೆಯನ್ನು ಪಡೆದುಕೊಂಡು ಶ್ರೀರಾಮನು ಸೀತೆಯ ನಿರೋಪವನ್ನು ಪಡೆಯಲು ಅವಳ ಮಂದಿರಕ್ಕೆ ಬಂದ ಅವಳನ್ನು ಬದಿಯಲ್ಲಿ ಕುಳ್ಳಿರಿಸಿಕೊಂಡು ಅತ್ಯಂತ ಶಾಂತಚಿತ್ತದಿಂದ ಅವಳಿಗೆ ಈ ವರೆಗೆ ನಡೆದ ವಿಷಯವನ್ನೆಲ್ಲ ಹೇಳಿ ಕೊನೆಗೆ '' ಹಾಗಾದರೆ ಪ್ರಿಯೇ ಸೀತೇ , ನಾನಿನ್ನು ವನಕ್ಕೆ ಹೊರಡುವೆ. ನಿರೋಪ

ಕೊಡುವೆಯಾ ?'' ಎಂದ. ''ನಿರೋಪ'' ಎಂಬ ಶಬ್ದ ಕಿವಿಗಳ ಮೇಲೆ ಬಿದ್ದೊಡನೆ ಅವಳು ಅತ್ಯಂತ ಉದಾಸೀನಳಾಗಿ ನಗುನಗುತ್ತಲೇ ಹೇಳತೊಡಗಿದಳು.

ನಾಥಾ, ನನ್ನ ನಿರೋಪವನ್ನು ನೀವು ಕೇಳುವಿರಾ ? **''ರಾಘವನೆಲ್ಲಿಯೋ ಅಲ್ಲಿಯೇ ಈ ಸೀತೆ.''** ನೀವೆಲ್ಲಿಯೋ ಅಲ್ಲಿಯೇ ನಿಮ್ಮ ಬೆನ್ನ ಹಿಂದೇ ನಾನಲ್ಲದೇ ಮತ್ತೆಲ್ಲಿ? ಯಾವ ಮಾರ್ಗದಿಂದ ನಿಮ್ಮ ಚರಣಗಳು ಮುಂದೆ ಸಾಗುವವೋ ಅದೇ ಮಾರ್ಗದಿಂದಲೇ ನನ್ನ ಅಡಿಗಳು ಮುಂದೆ ನಡೆಯುವವು ಭಾಗ್ಯ ವಿಧಾತನಾದ ನೀನೇ ನನ್ನ ಜೊತೆ ಇರುವಾಗ ವನವಾಸದ ಭಯವೆನಗೆಲ್ಲಿ ನಾಥಾ ? ರಘುನಾಥಾ, ನೀನು ನನ್ನ ಜೊತೆಯಲ್ಲಿ ಒಂದಿದ್ದರೆ ಸಾಕು. ವನವೇ ನನಗೆ ಪ್ರಸನ್ನತೆಯನ್ನೀಯುವುದು. ರಘುಕುಲ ಶೇಖರರಾದ ತಾವು ವನದಲ್ಲಿ ಕುಳಿತುಕೊಳ್ಳುವ ಶಿಲೆಗೇ ಜನರು ಸಿಂಹಾಸನವೆಂದೇ ತಿಳಿಯುವರು. ನನ್ನ ಹಿಂದೆ ಮತ್ತು ಮುಂದೆ ಇಬ್ಬರು ನೀವು ಧನುರ್ಧಾರಿಗಳು ಇರುವಿರಿ. ಅಂದಮೇಲೆ ವನದಲ್ಲಿಯ ಕ್ರೂರ ಮೃಗಗಳ ಭಯ ಎಳ್ಳಷ್ಟೂ ನನಗೆ ಇಲ್ಲ.

ದೇವಾ, ಯಾವ ಚರಣಗಳ ಸಾನ್ನಿಧ್ಯಕ್ಕಾಗಿ ಎಷ್ಟೋ ವರುಷಗಳ ಕಾಲ ಧರಣಿಯ ಉದರದಲ್ಲಿ ಅಡಗಿದ್ದೆನೋ ಕೊನೆಗೆ ಆ ಚರಣಗಳ ವಿರಹವೇ ? ಇದನ್ನು ನಾನು ಸಹಿಸಬೇಕೇ? ಎಂತಹ ದಿವ್ಯ ಮಾತು ಹೇಳುವಿರಲ್ಲ ನಾಥಾ! ನೀವು ವನವಾಸ ಭೋಗಿಸುತ್ತ ಎಲ್ಲಿಯೋ ಕಾಡಿನಲ್ಲಿ ಅಲೆಯುತ್ತಿರುವಾಗ ವಿರಹದ ಬೇಗೆಯಲ್ಲಿ ಬೇಯುತ್ತ ನಾನು ಅರಮನೆಯಲ್ಲಿ ಯಾರಿಗಾಗಿ ಉಳಿಯಲಿ ? ಭರತನ ಮೇಲಿನ ರಾಜ್ಯ ಛತ್ರ ಕಾಣಲೆಂದೇ ? ಕಾರಣವಿಲ್ಲದೇ ಈ ದಾಸ್ಯವೇಕೆನಗೆ ? ಏನು '' ರಾಮ ವನವಾಸಕ್ಕೆ ಹೋಗುವಾಗ ಸೀತೆಯನ್ನು ಬಿಟ್ಟು ಹೋಗಬೇಕು ''ಎಂದು ಕೈಕೇಯಿ ಮೂರನೆಯ ವರ ಪಡೆದಳೋ? ಅಥವಾ ಮಂಥರೆಯೇ ನಿಮ್ಮ ಅಂತರಂಗವನ್ನು ಪ್ರವೇಶಿಸಿ ಈ ರೀತಿ ನುಡಿಸುತ್ತಿರುವಳೋ ? ರಾಘವಾ ಯಾಕಿಷ್ಟು ಛಳಿಸುವುದು ನನ್ನನ್ನು ? ನನ್ನೊಬ್ಬಳನ್ನೇ ಯಾಕೆ ತ್ಯಜಿಸುವಿರಿ ?

ನನ್ನ ದೈವದಲ್ಲಿ ವನವಾಸವಿದೆ ಎಂಬುದು ಬಾಲ್ಯದಲ್ಲಿಯೇ ನನಗೆ ಗೊತ್ತಿತ್ತು. **''ಮಾನವ ಜನ್ಮವು ಸುಖದುಃಖಾಂಕಿತ, ಪ್ರೀತಿ ಇರಲು ಅದೇ ದುಃಖ ಸುಖದಲ್ಲಿ ಪರಿವರ್ತನೆಯಾಗುವುದು''.** ರಾಘವ, ನೂರು ಜನ್ಮದ ಗಂಟು ನಮ್ಮದು. ನೀವು ಹರಿಯಬಹುದು. ಆದರೆ ನಾನು ಹರಿಯಲಾರೆ. ವವಾಸದಲ್ಲಿಯೂ ನಾನು ನಿಮ್ಮನ್ನು ಹಿಂಬಾಲಿಸುವವಳೇ ಸತಿ ಪತಿಯರು ಭಿನ್ನರೆಂದು ಭಾವಿಸುವಿರಾ ನಾಥಾ ? **ಸತಿಯು ಪತಿಯನ್ನು ಆತನ ನೆರಳಿನಂತೆ ಹಿಂಬಾಲಿಸಬೇಕು ಪತಿಯೇ ಭೂಷಣ ಸತಿಗೆ. ಸತಿಗೆ ಪತಿಚರಣಗಳ ಪೂಜೆ ಅಖಂಡವಾಗಿ ನಡೆಯಬೇಕೆಂಬುದು ನಮ್ಮ ಆರ್ಯರ ನಾರೀ ಜೀವನದ ರೀತಿ.** ಇದರಿಂದ ವಧಾ ನನನು ಯಾಕೆ ಅಂತರಿಸುವಿರಿ ?

''ನಾಥಾ, ಯಾಕೆ ಮೂಕಾಗಿ ಕುಳಿತಿರಿ ? ಮಾತಾಡಲಾರಿರಾ ? ಅದೆಷ್ಟು ಸಲ ನಿಮ್ಮ ಚರಣಗಳ ಮೇಲೆ ನನ್ನ ಮಸ್ತಕವನ್ನಿಡಲಿ ? ಮಾತಾಡುವಾಗ ಏನಾದರೂ ತಪ್ಪಿದ್ದರೆ ಕ್ಷಮಿಸಿ, ಎಂದಿಷ್ಟೇ ಬೇಡಿಕೊಳ್ಳುವೆ. ಆದರೆ ರಾಘವಾನೆಲ್ಲಿಯೋ ಅಲ್ಲಿಯೇ ಈ ಸೀತೆ ಇರುವವಳು ಎಂಬುದು ಮಾತ್ರ ಸತ್ಯ -ನಿಶ್ಚಿತ '' ಎಂದಳು. ಸೀತಾದೇವಿಯ ಈ ದೃಢ ನಿಶ್ಚಯದ ನುಡಿ ಕೇಳಿ ಶ್ರೀರಾಮನ ಬಾಯಿಂದ ಮುಂದೆ ಮಾತುಗಳೇ ಹೊರಡಲಿಲ್ಲ.

## ಅಧ್ಯಾಯ ೧೮
## ಸುಮಂತಾ ನಿಲ್ಲಿಸೋ ರಥವನ್ನು( ಅಯೋಧ್ಯೆಯ ಪುರಜನರ ಆರ್ತ)

ಸೀತೆಯ ಮಾತಿಗೆ ಶ್ರೀರಾಮನಿಗೆ ಉತ್ತರಿಸಲಾಗಲಿಲ್ಲ. ಅವಳ ದೃಢನಿಶ್ಚಯದ ಮುಂದೆ ಅವನು ಏನು ಮಾಡಿಯಾನು ? ''ಆದರೆ ಸೀತೇ ಈ ನಿನ್ನ ನಿಶ್ಚಯ ಉಭಯ ಕುಲಗಳಿಗೂ ಶೋಭಿಸುವಂತಹದು. ''ನೀನೀಗ ರಾಜ್ಯಾಭಿಷೇಕ ನಿಮಿತ್ತ ಧರಿಸಿದ ವಸ್ತ್ರಾಭರಣಗಳನ್ನು ಬ್ರಾಹ್ಮಣರಿಗೆ ದಾನ ಮಾಡಿ ಬಿಡು, ಮತ್ತು ಸತ್ವರದಲ್ಲಿ ವನಕ್ಕೆ ಹೊರಡುವ ಸಿದ್ಧತೆ ಮಾಡಿಕೋ '' ಎಂದಿಷ್ಟೇ ಹೇಳಿದ.

ಕೈಕೇಯಿಯ ಎರಡು ವರಗಳಲ್ಲಿ ಒಂದಂತೂ ಸಿದ್ದಿಸಿದಂತಾಯಿತು. ವನವಾಸಕ್ಕೆ ರಾಮನೊಬ್ಬನೇ ಅಲ್ಲದೇ ಅವನ ಜೊತೆ ಲಕ್ಷ್ಮಣ ಸೀತೆಯರೂ ಹೊರಟರು. ಮೂವರು ರಾಜವೇಷವನ್ನು ಕಳಚಿ ನಾರು ಬಟ್ಟೆಯನ್ನು ಧರಿಸಿದರು. ಎಲ್ಲರ ನಿರೋಪವನ್ನು ಪಡೆದು ಆ ಮೂವರೂ ರಥವನ್ನು ಏರಿದರು. ಸುಮಂತ ಮಂತ್ರಿ ರಥವನ್ನೇರಿದ. ಅವರ ಹಿಂದೆ ಅಯೋಧ್ಯಾ ನಗರವೇ ನಡೆಯಿತು. ಪ್ರಜೆಗಳ ದುಃಖ ಪುಟಿದೆದ್ದು ಮಾತಾಡಲಾರಂಭಿಸಿದತು. ರಥದ ಬೆನ್ನು ಹತ್ತಿ ಓಡುತ್ತ ಮಂತ್ರಿ ಸುಮಂತನನ್ನು ಕೂಗಿ ಕರೆಯುತ್ತ ಶ್ರೀರಾಮನ ರಥವನ್ನು ನಿಲ್ಲಿಸುವಂತೆ ಭಿನ್ನವಿಸತೊಡಗಿತು.

ಸುಮಂತಾ ಽ ಏ ಸುಮಂತಾಽ, ತುಸು ನಿಲ್ಲಿಸೋ ರಥವನ್ನು. ನಾವೂ ಹಿಂಬಾಲಿಸುವೆವು ರಾಮನನ್ನು, ಆತ ಹೊರಟಿರುವ ದಾರಿಯೇ ನಮಗೆ ಸತ್‌ಪಥ. ನಿಲ್ಲು ಶ್ರೀರಾಮ, ನಿಲ್ಲು ಜಾನಕೀ, ನಿಮ್ಮಡಿಯ ಹುಡಿಯನ್ನಾದರೂ ಕೊಡಿರಿ- ಮಸ್ತಕದಲ್ಲಿ ಧರಿಸುವೆವು ಇಂದು ಏನಾಯಿತಿದು ಎಂಬುದು ನಮ್ಮ ಕಲ್ಪನೆಗೆ ನಿಲುಕಲೊಲ್ಲದು. ನಿನ್ನೆ ತಾನೇ ರಾಮರಾಜ್ಯದ ಕನಸು ನಾವು ಕಂಡಿದ್ದೆವು. ಸ್ವರ್ಗಸುಖವೇ ಕೆಳಗಿಲ್ಲಿ ಇಳಿದು ಬರುವುದು ಎಂದು ಭಾವಿಸಿದ್ದೆವು, ಆದರೆ ನಮ್ಮ ಕನಸು ನನಸಾಗಲಿಲ್ಲ. ನಮ್ಮ ಮನೋರಥ ಮಧ್ಯದಲ್ಲಿಯೇ ಭಗ್ನವಾಯಿತು. ''ಗಗನ ನೀಲನಿವ '' ಶ್ರೀರಘುನಂದನ. ಸೀತಾ ಮಾತೆಯೋ

''ಉಷಃಪ್ರಭೆ''. ಇವರಿನ್ನು ಹದಿನಾಲ್ಕು ವರುಷ ಅಸ್ತಂಗತರಾಗುವರೇ ? ಇನ್ನು ಹದಿನಾಲ್ಕು ವರುಷಗಳ ಕಾಲ ಶ್ರೀರಾಮನ ಕೃಪಾ ಛತ್ರ ಅಯೋಧ್ಯೆಗಿಲ್ಲ. ಈ ಅವಧಿಯಲ್ಲಿ ಕತ್ತಲೆಯೇ ಇರುವುದಾದರೆ, ಮೂರ್ಛೆ ಹೊಂದಿದ ಈ ಅಯೋಧ್ಯಾನಗರಕ್ಕೆ ಇನ್ನು ಉಳಿಗಾಲವಿದೆಯೇ ?

ಎಲ್ಲೈ ದುಷ್ಟ ಕೈಕೇಯೀ, ಎಲ್ಲಿ ಅಡಗಿರುವಿ ? ಈ ಹೀನ ದಿಸೆಯನ್ನು ಆಕೆ ತನ್ನ ಕಣ್ಣುಗಳಿಂದ ನೋಡಲಿ. ಅವಳಿಂದಲೇ ಅಲ್ಲವೇ ಈ ಅನರ್ಥ ಒದಗಿ ಬಂದುದು ? ಒಂದು ವೇಳೆ ಭರತನ ತಾಯಿ ಅವನನ್ನು ರಾಜನನ್ನು ಮಾಡಿದರೆ ಪ್ರಯೋಜನವೇನು ? ಯಾಕೆಂದರೆ ರಾಮನ ಹಿಂದೆಯೇ ಜಯಲಕ್ಷ್ಮಿ ಹೊರಟಳು. ಇಂದು ಅಯೋಧ್ಯಾ ನಗರವು ತನ್ನ ಜೀವನದಲ್ಲಿ ಪ್ರಪ್ರಥಮವಾಗಿ ಪರಾಜಿತವಾದಂತಾಯಿತು.

ರಾಮಾ ಽ ಹೇ ಶ್ರೀ ರಾಮಾ ಽ ತಂದೆ ತಾಯಿಗಳಿಬ್ಬರೂ ಅರಮನೆಯಲ್ಲಿ ಮೂರ್ಛೆಹೊಂದಿ ಬಿದ್ದಿರುವರು, ನೋಡಲ್ಲಿ ಅವರಿಬ್ಬರನ್ನು ಬಿಟ್ಟು ನೀನೆಲ್ಲಿಗೆ ಹೊರಟೆ? ನಾವೆಲ್ಲರೂ ಇನ್ನೂ ನಿರಾಶ್ರಿತರಾದೆವು. ನಮ್ಮೆಲ್ಲರನ್ನೂ ನಿನ್ನ ಜೊತೆ ಕರೆದುಕೊಂಡು ಹೋಗಲಾರೆಯಾ ? ಹಾಗಾದರೆ ನಾವಿನ್ನೆಲ್ಲಿ ಹೋಗೋಣ ಇನ್ನು ? ರಾಮಾ ಽ, ನಮ್ಮ ಕಣ್ಣುಗಳು ಕಂಬನಿದುಂಬಿ ಕಾಣಿಸದಂತಾಯಿತು. ಆ ನಮ್ಮ ರಾಮಾ ಆತನೆಲ್ಲಿದ್ದಾನೆ ? ಆತನ ರಥವೆಲ್ಲಿದೆ ? ಕಾಣಲೊಲ್ಲದು ನಮಗೆ. ರಾಮಾಽ ಶ್ರೀ ರಾಮಾ ಽ ಽ ಎಲ್ಲಿ ಹೋದೆ ?'' ಎಂದು ಪ್ರಜೆಗಳು ಗೋಳಿಡುತ್ತಿರುವಾಗಲೇ ರಥವು ಕಾಣಿಸದಂತಾಯಿತು. ನಗರವಾಸಿಗಳ ಧ್ವನಿ ನಡುಗುತ್ತ ಕುತ್ತಿಗೆಯಲ್ಲಿ ಸಿಕ್ಕಿತು.

## ಅಧ್ಯಾಯ ೧೯

## ಜಯ ಗಂಗೇ ಜಯ ಭಾಗೀರಥೀ (ನಿಷಾದ ರಾಜ - ನಾವಾಡಿಗರು)

ನಗರದ ನಾಗರಿಕರ ಆರ್ತ ಪ್ರಾರ್ಥನೆ ಶ್ರೀರಾಮನ ರಥವನ್ನು ತಡೆಯಲು ಸಮರ್ಥವಾಗಲಿಲ್ಲ. ಬಂಧು ಲಕ್ಷ್ಮಣ - ಸತಿ ಜಾನಕಿಯನ್ನು ಕೂಡಿಕೊಂಡು ಶ್ರೀರಾಮನು ಅಯೋಧ್ಯೆಯಿಂದ ಹೊರಬಿದ್ದ. ಅಂದಿನ ರಾತ್ರಿ ಅಯೋಧ್ಯಾನಗರದ ಯಾವ ಮನೆಯಲ್ಲಿಯೂ ಒಲೆ ಹೊತ್ತಲಿಲ್ಲ, ಅನ್ನ ಬೇಯಲಿಲ್ಲ, ದೀಪ ಬೆಳಗಲಿಲ್ಲ. ನೀರಿಲ್ಲದ ಸಮುದ್ರದಂತೆ ಆ ರಘು ನಗರಿಯು ಕರಾಳವಾಗಿ ಕಂಡಿತು. ನಗರ ಸೀಮೆಯನ್ನು ದಾಟಿದ ಮೇಲೆ ಅದರತ್ತ ಮುಖತಿರುಗಿಸಿ ಶ್ರೀರಾಮನು ನಗರಕ್ಕೆ ಅಭಿನಂದನೆ ಸಲ್ಲಿಸಿದ ಅಲ್ಲಿಯವರೆಗೂ ಹಿಂಬಾಲಿಸಿ ಬಂದಿದ್ದ ನಾಗರಿಕರಿಗೆ ನಿರೋಪವಿತ್ತು ರಥ ಮಾರ್ಗ ಕ್ರಮಿಸತೊಡಗಿತು. ರಥವು ಶೃಂಗವೇರ ಪುರವನ್ನು ತಲುಪಿತು. ನಿಷಾಧಿಪತಿ ಗುಹನು

ಶ್ರೀರಾಮನ ದರ್ಶನ ಪಡೆದ, ಮತ್ತು ಮೂವರಿಗೂ ಅತ್ಯಂತ ಭಕ್ತಿಯಿಂದ ಆದರಾತಿಥ್ಯ ಸಲ್ಲಿಸಿದ. ಅಂದಿನ ರಾತ್ರಿ ಅವರು ಇಂಗುದೀ ವೃಕ್ಷದಡಿಯಲ್ಲಿ ಕಳೆದರು. ಬೆಳಕು ಹರಿದೊಡನೆ ಗುಹನು ತನ್ನ ನೌಕೆಯನ್ನು ಸಿದ್ಧಮಾಡಿದ. ಶ್ರೀರಾಮನು ಸುಮಂತನಿಗೆ ಮರಳಿ ಅಯೋಧ್ಯೆಗೆ ಮರಳಲು ಆಜ್ಞೆಯನ್ನಿತ್ತು ತಾನು ಸೀತೆ ಲಕ್ಷ್ಮಣರೊಡನೆ ನೌಕೆಯನ್ನೇರಿದ ಅಂಬಿಗರು ಹುಟ್ಟು ಹಾಕತೊಡಗಿದರು. ತೆರೆಗಳು ಅಪ್ಪಳಿಸುತ್ತಿದ್ದಾಗಲೇ ನಾವೆ ಚಲಿಸತೊಡಗಿತು; ಮತ್ತು ನಾವಾಡಿಗರು ಹಾಡತೊಡಗಿದರು.

ಎಲ್ಯೇ ನೌಕೆಯೇ, ಹಿಂದಿರುಗದಿರು, ಓ ಗಂಗೆಯೇ ಮೇಲೇರದಿರು. ಶ್ರೀರಾಮನ ನಾಮವನ್ನು ಹಾಡುತ್ತ ಅವನನ್ನು ಆಚೆಯ ದಂಡೆಗೆ ಮುಟ್ಟಿಸೋಣ. **''ಜಯ ಗಂಗೇ ಜಯ ಭಾಗೀರಥೀ ಜಯ ಜಯ ರಾಮ ದಾಶರಥೀ''** ಗಂಗೇ ದೈವ ರೇಷೆಯಿದು ಎಷ್ಟು ವಿಪರೀತ! ನಮ್ಮ ಭಾಗ್ಯವನ್ನು ನಾವೇ ನಮ್ಮ ಕೈಯಿಂದಲೇ ದೂರ ಸರಿಸುತ್ತಿರುವೆವಲ್ಲಾ ಇಂದು ! ಭವಸಾಗರದಿಂದ ನಮ್ಮನ್ನು ಪಾರುಮಾಡುವ ಶ್ರೀವಿಷ್ಣುವಿನ ಅವತಾರನೀತ ಶ್ರೀರಾಮ ಸ್ವತಃ ತಾರಕ ನೀವ ಇವನನ್ನು ಆಚೆಯ ದಂಡೆಗೆ ನಾವು ಪಾರು ಮಾಡಬೇಕೇ ? ಆಗಲಿ ಆತನ ಪಾದ ಸ್ಪರ್ಶದಿಂದ ನಾವೂ ಭವಸಾಗರದಿಂದ ಪಾರಾಗಿ ಪುನೀತರಾಗೋಣ. ಜಯ ಗಂಗೇ ಜಯ ಭಾಗೀರಥೀ ಜಯ ಜಯ ರಾಮ ದಾಶರಥೀ.

ಈಗ ಶ್ರೀರಾಮನು ಹೋಗುತ್ತಿರುವ ದಕ್ಷಿಣ ದೇಶದಲ್ಲಿ ಸೋಬಗೇ ಸೋಬಗು. ಇತ್ತ ಅಯೋಧ್ಯೆ ಅಹಲ್ಯೆಯಂತೆ ಶಿಲೆಯಾಗಿ ಬಿತ್ತು. ಅತ್ತ ಕಲ್ಪತರುಗಳು ಅಂಕುರಿಸುವವು ಇನ್ನು. ತಂದೆಯ ವಚನ ಪಾಲಿಸುವುದು ಮಗನಾದ ತನ್ನ ಕರ್ತವ್ಯವೆಂದು ಶ್ರೀರಾಮ ಈ ವನವಾಸವನ್ನು ತಾನಾಗಿಯೇ ಸ್ವೀಕರಿಸಿದ. ನಾವೋ ಅವನ ದಾಸರು. ಅಂದ ಮೇಲೆ ನಮ್ಮ ಕರ್ತವ್ಯದಿಂದ ನಾವು ದೂರ ಆಗುವುದೇ ? ಅತಿಥಿ ಇರಲಿ ಶ್ರೀರಾಮನಿರಲಿ ಯಾರೇ ಇರಲಿ ಅವರನ್ನು ಆಚೆಯ ದಂಡೆಗೆ ಮುಟ್ಟಿಸುವುದು ನಮ್ಮ ಕರ್ತವ್ಯ. ಒಳಿತು ಕೆಡಕುಗಳನ್ನು ಶ್ರೀರಾಮನೇ ಬಲ್ಲ. ನಾವು ನಮ್ಮ ಕರ್ತವ್ಯವನ್ನು ಮಾಡಿದರಾಯಿತು ಇಷ್ಟೇ.

ಹೇ ಗಂಗೆಯೇ, ಇಂದು ಎಂತಹ ಮಂಗಲಯೋಗವಿದು ನಿನಗೆ ! ನಿನ್ನನ್ನು ಭೂಮಿಗೆ ತಂದ ಭಗೀರಥನ ವಂಶಜನನ್ನೇ ಇಂದು ನೀನು ಆಚೆ ದಂಡೆಗೆ ಒಯ್ಯುತ್ತಿರುವೆ. ಅವನ ಪಾದ ಸ್ಪರ್ಶದಿಂದ ದಕ್ಷಿಣ ದೇಶವನ್ನು ಅಮರ ಮಾಡೋಣ. ಗಂಗೆ ಪಾವನ ಶ್ರೀರಾಮನ ನಾಮ ಪಾವನ. ಸರ್ವ ಪಾವನ. ಪ್ರಭೋ ಶ್ರೀರಾಮಚಂದ್ರಾ, ಈ ನಿಮ್ಮ ಪ್ರವಾಸ ತ್ರಿದೋಷ ನಾಶಕವಾಗಲಿ. ನಾವು ನಾವಿಕರು. ಸದಾ ನಿನ್ನನ್ನು ಸ್ಮರಿಸುತ್ತಿರುವೆವು '' - ಎಂದು ನಾವಾಡಿಗರು ಹಾಡುತ್ತಿದ್ದಂತೆಯೇ ನಾವು ಆಚೆಯ ದಂಡೆಯನ್ನು ತಲುಪಿತು.

# ಅಧ್ಯಾಯ ೨೦

## ''ಲಕ್ಷ್ಮಣಾ ಇಲ್ಲಿ ಪರ್ಣಕುಟಿ ನಿಲ್ಲಿಸು'' (ರಾಮ)

ನಿಷಾದ ರಾಜ ಗುಹನ ನಾವಾಡಿಗರು ಶ್ರೀರಾಮಾದಿಗಳನ್ನು ಗಂಗೆಯ ಆಚೆಯ ದಂಡೆಗೆ ತಲುಪಿಸಿದರು. ಶ್ರೀರಾಮ ಸತಿ ಸಹೋದರರನ್ನು ಕೂಡಿಕೊಂಡು ವನವಾಸಿಯಾಗಿ ಮುಂದೆ ಸಾಗಿದ. ಹಗಲು ಮುಂದೆ ಮಾರ್ಗಕ್ರಮಿಸುವುದು ರಾತ್ರಿ ಎಲ್ಲಿಯಾದರೂ ಗಿಡದಡಿಯಲ್ಲಿ ಹುಲ್ಲು ಹಾಸಿಗೆಯ ಮೇಲೆ ಮಲಗಿ, ಅಯೋಧ್ಯೆಯನ್ನು ನೆನೆಯುವುದರಲ್ಲಿ ರಾತ್ರಿ ಕಳೆಯುವುದು. ಹೀಗೆ ಮಾರ್ಗ ಕ್ರಮಿಸುತ್ತ ಮೂವರು ಒಂದು ಸಂಜೆ ಭಾರದ್ವಾಜ ಮುನಿಗಳ ಆಶ್ರಮವನ್ನು ತಲುಪಿದರು. ಭಾರದ್ವಾಜ ಮುನಿಗಳು ಅವರಿಗೆ ಯಥೋಚಿತ ಸ್ವಾಗತ ಕೋರಿ ಆತಿಥ್ಯ ಮಾಡಿದರು. ಮತ್ತು ವನವಾಸದಲ್ಲಿ ವಾಸ್ತವ್ಯಕ್ಕಾಗಿ ಚಿತ್ರಕೂಟ ಪರ್ವತ ಸರ್ವಥಾ ಯೋಗ್ಯವೆಂದು ಶ್ರೀರಾಮಾದಿಗಳಿಗೆ ಮಾರ್ಗದರ್ಶನ ಮಾಡಿದರು. ತದನಂತರ ಅವರು ತಮ್ಮ ಪ್ರವಾಸವನ್ನು ಮುಂದುವರಿಸಿದರು. ದಾರಿಯಲ್ಲಿ ತನಗೆ ಪರಿಚಿತವಲ್ಲದ ಅನೇಕ ಬಗೆಯ ಹೂಗಳ ಕುರಿತು ಜಾನಕಿ ವಿಚಾರಿಸುತ್ತಿದ್ದಳು. ಶ್ರೀರಾಮನು ಅವಳ ಜಿಜ್ಞಾಸೆಯನ್ನು ಪೂರೈಸುತ್ತಲೇ ನಡೆದಿದ್ದ. ಇತ್ತ ಲಕ್ಷ್ಮಣ ಪುಷ್ಪಗುಚ್ಛಗಳನ್ನು ಮಾಡಿ ಅತ್ತಿಗೆಯ ಕೈಯಲ್ಲಿ ಕೊಡುತ್ತಲೇ ಸಾಗಿದ್ದ.

ಹೀಗೆ ವನವಿಹಾರ ಮಾಡುತ್ತ ಮಾಡುತ್ತ ಒಂದು ದಿನ ಆ ಮೂವರೂ ಚಿತ್ರಕೂಟ ಪರ್ವತವನ್ನು ತಲುಪಿದರು. ಅಲ್ಲಿಯ ಒಂದು ಸಮನಾದ ಮತ್ತು ಮನೋಹರವಾದ ಸ್ಥಳದ ಕಡೆಗೆ ಬೆರಳು ಮಾಡಿ ತೋರಿಸುತ್ತ '' ಲಕ್ಷ್ಮಣಾ, ಇಲ್ಲಿ ಈ ಮಂದಾಕಿನೀ ತೀರದಲ್ಲಿ ಒಂದು ಗುಡಿಸಲು ರಚಿಸು. ಇದು ಒಳ್ಳೇ ರಮ್ಯ ಸ್ಥಳವಾಗಿದೆ ಅಲ್ಲವೇ ? ಚಿತ್ರಕೂಟದ ತಪೋವನವಿದು. ಇಲ್ಲಿ ಅನೇಕ ಮುನಿಗಳು, ಸಾಧಕರು ವಾಸಮಾಡಿರುವರು. ಜಾನಕೀ, ನೋಡೀ ಕಡೆಗೆ ನಿಸರ್ಗದ ಶೋಭೆಯನ್ನು ! ನಮ್ಮನ್ನು ಅದು ಹೇಗೆ ಆಕರ್ಶಿಸುವುದು ನೋಡು! ಇತ್ತ ಪಲಾಶ ಅರಳಿ ನಿಂತಿದೆ. ಅತ್ತ ಬಿಲ್ವ ಬಾಗಿ ನಿಂತಿದೆ. ಈ ಕಡೆಗೆ ಭಲ್ಲಾತಕವು ಫಲಭಾರದಿಂದ ಬಾಗಿದೆ. ಮಾನವರ ಕರಗಳು ಇವುಗಳಿಗೆ ತಾಗಿದಂತೆ ಕಾಣುವುದಿಲ್ಲ. ಪ್ರಿಯೇ ಈ ಬಳ್ಳಿಯನ್ನು ನೋಡಿಲ್ಲಿ! ಬದಿಯಲ್ಲಿಯ ಮರವನ್ನು ಅದು ಹೇಗೆ ಅಪ್ಪಿಕೊಂಡು ನಿಂತಿದೆ. ಅಪ್ಪುಗೆಯಲ್ಲಿ ಎಷ್ಟೂ ಸಡಿಲ ಇಲ್ಲ ನೋಡೇ. ಅದೆಷ್ಟು ತರತರದ ಹೂಗಳಿವು ! ಅವುಗಳ ಬಣ್ಣಗಳನ್ನು ಎಷ್ಟೆಂದು ವರ್ಣಿಸಬಲ್ಲೆವು ನಾವು! ಏನು ಸುಗಂಧ ಸೂಸಿದೆ ! ಏನೇನು ಬೇಕಿದಕೆ ? ಏನು ಸೃಷ್ಟಿಯ ಸೊಬಗಿದು ! ವನದಲ್ಲಿ ಧ್ವನಿ

ಕರ್ಣಪಟಲಗಳ ಮೇಲೆ ಬಿದ್ದೊಡನೆ ಈ ಮೂಕ ರಮ್ಯತೆ ದ್ವಿಗುಣಿತವಾಗುವುದು. ಲಕ್ಷ್ಮಣಾ ಕೇಳು, ಎಲ್ಲಿಂದಲೋ ಕೋಗಿಲ ಸ್ವರ ಕೇಳಿ ಬರುತ್ತದೆ . ತನ್ನ ಸ್ವರವನ್ನು ಏರಿಸುತ್ತಲೇ ನಡೆದಿದೆ ಅದು ಗರಿಗಳ ಮೇಲೆ ರತ್ನಗಳನ್ನು ಧರಿಸಿದಂತೆ ಸಮ್ಮಿಶ್ರವಾದ ನಾದವನ್ನು ಅದು ಮಾಡಹತ್ತಿದೆ. ಇಲ್ಲಿ ನೋಡು ಸೀತೇ ! ಟೊಂಗೆ ಟೊಂಗೆಗಳಿಗೆ ಜೇನು ಹುಟ್ಟುಗಳು! ಅವುಗಳಿಂದ ಜೇನು ಕೆಳಗೆ ಸೋರುತ್ತಿದೆ ನೋಡಿಲ್ಲಿ! ವನ ಸಂಜೀವನವಿದು, ಅಮೃತವಿದು ಮಕ್ಷಿಕೆಗಳು ನಮಗಾಗಿ ಇದನ್ನು ಹುಟ್ಟುಗಳಲ್ಲಿ ಸಂಗ್ರಹಿಸಿವೆ. ಲಕ್ಷ್ಮಣಾ ಸಾವಧಾನವಾಗಿರು, ನಿನ್ನ ಆಯುಧ ಸದ್ಯೆವ ಸಿದ್ದವಾಗಿರಲಿ. ಅಲ್ಲಿ ಯಾವುದೋ ಪ್ರಾಣಿ ಕಾಣಿಸಿಕೊಂಡು ಕ್ಷಣದಲ್ಲಿ ಮರೆಯಾಯಿತು. ಇಲ್ಲಿ ಕ್ರೂರ ಪ್ರಾಣಿಗಳಿಗೇನೂ ಕಡಿಮೆ ಇಲ್ಲ ತಿಳಿಯಿತೇ ? ಲಕ್ಷ್ಮಣಾ ಉಭಯತರಿಗೂ ಒಪ್ಪುವಂತೆ ಲಭ್ಯ ವನದಲ್ಲಿ. ಒಳ್ಳೇ ಶುಭಮುಹೂರ್ತಕ್ಕೆ ನಾವಿಲ್ಲಿಗೆ ಬಂದು ತಲುಪಿದೆವು. ಜಾನಕಿಗೆ ಲತಾಬಳ್ಳಿಗಳೇ ಭೂಷಣ. ನಮಗೆ ಭಕ್ಷ್ಯಕ್ಕೆ ಮೃಗಗಳಿಗೇನೂ ಕೊರತೆ ಇಲ್ಲಿ ಇಲ್ಲ. ಲಕ್ಷ್ಮಣಾ ಕೇಳಿಲ್ಲಿ, ಒಳ್ಳೇ ಗಟ್ಟಿ ಮುಟ್ಟಾದ ಕಟ್ಟಿಗೆಗಳನ್ನು ಶಿಘ್ರದಲ್ಲಿ ಕೂಡಿಸಿ ತಂದು ಇಲ್ಲಿ ಸುಂದರವಾದ ಒಂದು ಕುಟೀರವನ್ನು ನಿಲ್ಲಿಸು. ಶಾಖಾಪಲ್ಲವಗಳನ್ನೆಲ್ಲ ಅದರ ಮೇಲೆ ಹೊದಿಸು. ಲಕ್ಷ್ಮಣಾ ಅದರ ಸುಂದರ ಚಿತ್ರ ಆಕಾಶದಲ್ಲಿ ಬಿಂಬಿಸಬೇಕು ನೋಡು'' ಎಂದು ಶ್ರೀರಾಮಚಂದ್ರ ನೆಂದಾಗ ಲಕ್ಷ್ಮಣಾ ಪರ್ಣಕುಟಿ ನಿಲ್ಲಿಸುವ ಕಾರ್ಯದೆಡೆಗೆ ಹೊರಳಿದ.

## ಅಧ್ಯಾಯ ೨೧

## ''ಶ್ರೀರಾಮ ನನಗಿಷ್ಟೇ ಹೇಳಿದ'' (ಸುಮಂತ)

ಶ್ರೀರಾಮನ ಆಜ್ಞೆಯಂತೆ ಲಕ್ಷ್ಮಣ ಬಹುಬೇಗ ಅವಶ್ಯವಿದ್ದ ಕಟ್ಟಿಗೆಗಳನ್ನು ಶಾಖಾಪಲ್ಲವಗಳನ್ನು ಸಂಗ್ರಸಿ ಚಿತ್ರಕೂಟ ಪರ್ವತದ ಮೇಲೆ ಬಹುಬೇಗ ಸುಂದರವಾದ ಶ್ರೀರಾಮಾಶ್ರಮವನ್ನು ನಿಲ್ಲಿಸಿದ. ಕೃಷ್ಣಮೃಗದ ಹವನದೊಂದಿಗೆ ಮಂತ್ರಪೂರ್ವಕವಾಗಿ ಪರ್ಣಕುಟಿಯ ವಾಸ್ತು ಶಾಂತಿ ಆಯಿತು. ಶ್ರೀರಾಮನು ಲಕ್ಷ್ಮಣ ಸೀತೆಯರೊಂದಿಗೆ ಅಂದಿನ ಶುಭಮೂಹೂರ್ತದಲ್ಲಿ ಪರ್ಣಕುಟಿಯನ್ನು ಪ್ರವೇಶಿಸಿದ.

ಇತ್ತ ಸುಮಂತ ಶ್ರೀರಾಮನ ವಿಯೋಗದಿಂದ ಕರಾಳವಾಗಿ ಕಾಣಿಸುತ್ತಿದ್ದ ಅಯೋಧ್ಯೆಯ ಅರಮನೆಯನ್ನು ಕೆಳಮುಖಮಾಡಿಕೊಂಡು ವಿಷಣ್ಣನಾಗಿಯೇ ಪ್ರವೇಶಿಸಿದ. ಸುಮಂತ ಬಂದನೆಂಬುದು ತಿಳಿದ ಕೂಡಲೇ ನೆಲಹಿಡಿದು ಬಿದ್ದಿದ್ದ ದಶರಥರಾಜ ಹೇಗೋ ಸಾವರಿಸಿಕೊಂಡು ಎದ್ದು ಕುಳಿತು ಕಣ್ಣು ತುಂಬ ನೀರು ತಂದು

ನಡುಗುತ್ತಿರುವ ಸ್ವರದಲ್ಲಿಯೇ ಸುಮಂತನಿಗೆ ಪ್ರಶ್ನಿಸಿದ '' ಸುಮಂತಾ ಽ ನನ್ನ ಆ ರಾಮ ಅವನು ಹೋಗುವಾಗ ಏನಪ್ಪ ಅಂದುದು? ಏನು ಹೇಳಿದನೋ ನನಗೆ ಆತ ಹೇಳೆನಗೆ'' ಅಂದ . ಆಗ ಸುಮಂತ ಹೇಳಲು ಪ್ರಾರಂಭಿಸಿದ ರಾಜರೇ, ಕೊನೆಯಲ್ಲಿ ಶ್ರೀರಾಮನು ನಿಮ್ಮೆಲ್ಲರಿಗೂ ಪ್ರಣಾಮ ಸಲ್ಲಿಸಿ'' ಸುಮಂತಾ ಅಯೋಧ್ಯೆಗೆ ನೀನು ಮರಳಿಹೋಗು ನಮ್ಮ ತಂದೆಯವರಿಗೆ ನಾವು ಗಂಗೆಯನ್ನು ದಾಟಿ ಮುಂದೆ ಸುಖವಾಗಿ ವನದಲ್ಲಿ ಪ್ರಯಾಣ ಬೆಳೆಸಿದೆವು ಎಂದು ಹೇಳು. ಮತ್ತು ನನಗಾಗಿ ಅವರ ಪಾದಗಳಿಗೆ ವಂದನೆ ಸಲ್ಲಿಸು. **ತಂದೆಯ ಪಾದಕಮಲಗಳು ವಂದನೀಯ, ಶತತೀರ್ಥಗಳ ಧಾಮವದು''** ಎಂದ . ''ಮತ್ತೇನೆಂದ ? '' ''ಸುಮಂತಾ ಅಂತಃಪುರದಲ್ಲಿಯ ಈರ್ವರು ಮಾತೆಯರು ಅತೀವ ದುಃಖದಲ್ಲಿ ಮುಳುಗಿರಲು ಸಾಕು. ಅವರಿಗೆ ಧೈರ್ಯವನ್ನಿತ್ತು ಸಂತೈಸು. ನಾವು ವನದಲ್ಲಿ ಸೌಖ್ಯವಾಗಿರುವೆವೆಂದು ಹೇಳಿ ಅವರ ಶೋಕಕ್ಕೆ ವಿರಾಮವೀಯುವಂತೆ ಮಾಡು.'' ಎಂದ. ಸೀತೆ ಸುತರು ವನದಲ್ಲಿ ಸುಖದಿಂದ ಇರುವರೆಂದು ಮಾತೆ ಕೌಸಲ್ಯೆಗೆ ಹೇಳು ಅವಳ ಕೈಗಳು ನಿತ್ಯ ಅಗ್ನಿದೇವನನ್ನು ಪೂಜಿಸಲಿ. ಅವಳ ಕಿವಿಗಳು ಮುನಿಗಳಿಂದ ನಿತ್ಯ ಸಾಮವೇದವನ್ನು ಕೇಳಲಿ. ಎಂದ ಶ್ರೀರಾಮ '' ತಾನು ಹಿರಿಯಳೆಂಬುದನ್ನು ಮರೆತು ಸವತಿಯರ ಸಂಗಡ ಸಖ್ಯದಿಂದ ನಡೆಯಲು ತಾಯಿ ಕೌಸಲ್ಯೆಗೆ ತಿಳಿಸು. ಪತಿಸೇವೆಯಲ್ಲಿ ಸದಾ ಮಗ್ನಳಾಗಿರಲಿ ಅವಳು. ನಮ್ಮ ತಂದೆಯ ಜೀವಕ್ಕೆ ವಿಶ್ರಮಿಸಲು ಅವಳ ಹೃದಯವಲ್ಲದೇ ಅನ್ಯ ಸ್ಥಳವೆಲ್ಲಿದೆ ಸುಮಂತಾ ನೀನೇ ಹೇಳು ? ಇನ್ನೊಂದು ಮಾತೆಂದರೆ ಅಭಿಷಿಕ್ತನಿಗೆ ಗುಣವಯಗಳು ಬೇಕಾಗಿಲ್ಲವೆಂಬುದನ್ನು ನೆನೆದುಕೊಂಡು ಪ್ರತಿಯೊಂದು ಸಂದರ್ಭದಲ್ಲಿಯೂ ಭರತನಿಗೆ ಮಾನಕೊಟ್ಟು ನಡೆಯಲು ಮಾತೆ ಕೌಸಲ್ಯೆಗೆ ಹೇಳು. ಸುಮಂತಾ ಈ ಎಲ್ಲ ಮಾತುಗಳನ್ನು ನನ್ನ ಹೆಸರಿನೊಂದಿಗೆ ನಾನೇ ಹೇಳಿರುವೆನೆಂದೇ ವಿನಯದಿಂದ ನೀನು ಹೇಳು ಅಂದರಾಯಿತು.

''ಸುಮಂತಾ, ಯುವರಾಜನಾಗಿ ರಾಜಸತ್ತೆಯನ್ನು ಸ್ವೀಕರಿಸಿ ಪ್ರಜಾಜನರನ್ನು ಸಮತೆಯಿಂದ ನೋಡಲು ಹೇಳು ಭರತನಿಗೆ.'' **ಮನ ನಿಷ್ಕಾಮವಾಗಿರಿಸಿಕೊಂಡು ಅಖಂಡ ರಾಜಸುಖ ಆತ ಭೋಗಿಸುವಂತಾಗಲಿ ಎಂಬುದಿಷ್ಟೇ ನಮ್ಮಗಳ ಇಚ್ಛೆ.** ತನ್ನ ತಲೆಯ ಮೇಲೆ ತಂದೆಯ ಛತ್ರವಿದೆ ಎಂಬುದು ಆತನ ನಿತ್ಯ ಸ್ಮರಣೆಯಲ್ಲಿ ಇರಲಿ ಮತ್ತು ತಂದೆಯ ವಚನವನ್ನು ಪಾಲಿಸುತ್ತ ಅವನ ವೃದ್ಧಾಪ್ಯ ಸಾರ್ಥಕವಾಗುವಂತೆ ಭರತನಿಗೆ ನಡೆಯಲು ಹೇಳು'' ಎಂದ. ಮುಂದುವರಿದು '' ಸುಮಂತಾ ಇನ್ನಾರಿಗೆ ಏನು ಹೇಳಲಿ ನಾನಿನ್ನು ? ನನ್ನ ಬಂಧು ಭರತ ಶ್ರೀಮಂತ ಭಾಗ್ಯವಂತ ಉದಾರ ಧೀ ಆತ. ಎಲ್ಲ ತಿಳಿಯುವುದು ಆತನಿಗೆ. ಆದರೂ ಅವನಿಗೊಂದು ಮಾತು ನನಗೆ ಹೇಳದೇ

ಇರಲಾಗಲೊಲ್ಲದು ಸುಮಂತಾ - ಅದೇನೆಂದರೆ ನನ್ನ ತಾಯಿ ಪುತ್ರ ವಿಯೋಗಿನಿ . ಆತನ ನಡತೆಯಿಂದ ಅವಳಿಗೆ 'ಭರತನೇ ರಾಮ' ಎಂದೆನಿಸಿದರಾಯಿತು. ವನದಲ್ಲಿ ಕುಳಿತು ನಾನು ಬಯಸುವುದಿಷ್ಟೇ ಸುಮಂತಾ'' ಎಂದ.

ದಶರಥರಾಜರೇ, ಹೀಗೇ ಹೇಳುತ್ತಿದ್ದಂತೆಯೇ ಕಂಠ ಬಿಗಿದು ಬಂತು. ಮುಂದೆ ಮಾತನಾಡಲು ಆಗಲಿಲ್ಲ ಅವನಿಗೆ. ಆತನ ಕಣ್ಣುಗಳು ಅಶ್ರುಪೂರಿತವಾದವು. ಗದ್ಗದ ಸ್ವರದಿಂದಲೇ '' ಬರುವೆವು ಸುಮಂತಾ'' ಎಂದಿಷ್ಟೇ ಹೇಳಿ ಮೂವರು ಕೈ ಎತ್ತಿದರು. ಆ ಕರುಣ ದೃಶ್ಯ , ಸೌಮಿತ್ರೀ ಸಹಿತ ಜಾನಕಿ ರಾಮರು ಗಂಗಾತೀರದ ಮೇಲೆ ನಿಂತಿದ್ದು ಅವರು ಕೈ ಬೀಸಿದ್ದು ರಾಜರೇ ಈಗಲೂ ನನ್ನ ಕಣ್ಮುಂದೆ ಕಟ್ಟಿದಂತಿದೆ ''. ಎಂದು ತಾನು ಕಣ್ತುಂಬ ನೀರು ತಂದು ಸುಮಂತ ಕೆಳಗೆ ಕುಸಿದುಬಿದ್ದ.

# ಅಧ್ಯಾಯ ೨೨

## ''ಸುತ್ತಲೂ ಕವಿದಿದೆ ಕತ್ತಲು'' ( ದಶರಥರಾಜ)

ಈ ರೀತಿಯಾಗಿ ಸುಮಂತ ಮಂತ್ರಿ ರಾಜಾ ದಶರಥನಿಗೆ ಶ್ರೀರಾಮನ ನಿರೋಪವರುಹಿದಾಗ ದಶರಥಮಹಾರಾಜನ ಅವಸ್ಥೆಯು ತುಂಬಾ ಕರುಣಾಜನಕವಾಯಿತು. ಅಶ್ರುಗಳ ಧಾರೆ ಇಟ್ಟಿತು. ಉಸಿರಾಡಿಸುವುದು ತೀವ್ರಗೊಂಡಿತು. ಶೋಕಾತಿಶಯದಿಂದ ಅವನ ಕಂಠ ಬಿಗಿದು ಬಂತು. ತನ್ನ ಮೇಲೆ ತಾನೇ ಕೋಪಗೊಂಡು ತನ್ನ ಕೈಗಳನ್ನು ತಾನೇ ಅದುಮಿ ಕೊಳ್ಳುತ್ತ ಬಡಬಡಿಸ ಹತ್ತಿದ. ಅವನ ಮೂವರು ರಾಣಿಯರು ಅಲ್ಲದೇ ಅರಮನೆಯಲ್ಲಿಯ ಸಮಸ್ತ ಜನರು ಆತನ ಸುತ್ತಲೂ ನೆರೆದರು. ಚಡಪಡಿಸಿ ಏಳುವ ಪ್ರಯತ್ನ ಮಾಡುತ್ತಿದ್ದಾಗ ಜೋಲಿ ಹೋಗಿ ಪುನಃ ಕೆಳಗೆ ಕುಸಿದ. ಪುನಃ ಒಮ್ಮೆಂದೊಮ್ಮೆ ಅವಸಾನ ಬಂದಂತಾಗಿ ಭ್ರಮೆಯಲ್ಲಿಯೇ ಮಾತಾಡಲಾರಂಭಿಸಿದ

'' ಸುತ್ತಲೂ ಕವಿದಿದೆ ಕತ್ತಲು. ಈ ನನ್ನ ಕ್ಷೀಣ ದೇಹ ನನ್ನ ಪ್ರಾಣಕ್ಕೆ ಆಧಾರವೀಯಲು ಸಮರ್ಥವಾಗೊಲ್ಲದು. ಹಾ ! ನೆನಪಾಯಿತು ! ನೆನಪಾಯಿತು ! ಇಂದು ನನಗೆ. ಶಬ್ಧವೇಧಿಯಾದ ನಾನು, ಅಂದು ಭೀಷಣ ಮೃಗ ಒಂದು ನೀರು ಕುಡಿಯುತ್ತಿದೆ ಎಂದು ಭಾವಿಸಿ, ಬಿಟ್ಟ ಬಾಣದಿಂದ ಆ ಬ್ರಾಹ್ಮಣ - ಶ್ರವಣ ಹತನಾದ. ಅಂದು ಆ ವಿಪ್ರನ ಅಂಧ ಪಿತನಿಗಾದ ಅಪಾರ ದುಃಖ ಇ-ಂ-ದು ನೆ-ನ-ಪಾ-ಯಿ-ತು ನ-ನ-ಗೆ. ಅಂದು ಕಂಪಿಸುತ್ತಿದ್ದ ಆ ವೃದ್ಧಪಿತನ ಧ್ವನಿಯು ಯಮದೂತನ ಶಂಖನಾದದಂತೆ , ಇಂದು ನನ್ನ ಕಿವಿಗಳಲ್ಲಿ ಗರ್ಜಿಸಹತ್ತಿದೆ ! ಹಾ ! ಅ-ಂ-ದು ಅ-ವ-ನಿ-ತ್ತ ಶಾ-ಪ '' ದಶರಥಾ ನ-ನ್ನ-ಂತೆ-ಯೇ ನೀ-ನೂ ಪು-ತ್ರ ವಿ-ಯೋ-ಗ-ದಿ-ಂದ ಬ-ಳ-ಲು-ತ್ತ

ಮ-ರ-ಣ-ಹೊ-ಂದು'' ಎಂದುದು ನೆ-ನ-ಪಾ-ಯಿ-ತು. ತ-ಪ್ಪೀ-ತೇ ಆ -ಬ್ರಾ-ಹ್ಮ-ಣ-ನಿ-ತ್ತ ಶಾ-ಪ? ಅ-ಂದ-ಮೇ-ಲೆ ಅ-ವ-ನ-ಂತೆ-ಯೇ ನಾ-ನೂ ಪು-ತ್ರ-ವಿ-ಯೋ-ಗ-ದಿ-ಂದ ಬ-ಳ-ಲು-ತ್ತ ಮ-ರ-ಣ ಹೊ-ಂದು-ವು-ದು ಖ-ಚಿ-ತ ಖ-ಚಿ-ತ. ಇನ್ನು ಆ ರಾಮನ ಕರಗಳ ಸ್ಪರ್ಶವೆಲ್ಲಿ ನನಗೆ ? ಅವನ ದರ್ಶನವೆಲ್ಲಿ? ಅಂದ ಮೇಲೆ ಸಂಭಾಷಣವೆಲ್ಲಿಯದು ? ಏನು ಎಂತಹ ಅತೃಪ್ತ ಜೀವನ ಕೊನೆಗೆ ನನ್ನದು ? ನನ್ನನ್ನು ಸಂರಕ್ಷಿಸಬಲ್ಲ ಸಮರ್ಥ ರಾಜಕುಮಾರನನ್ನು ನಾನೇ ವನಕ್ಕೆ ಅಟ್ಟಿ ಬಳಲುತ್ತಿರುವೆನಲ್ಲ ! ಎಂತಹ ದುರ್ದೈವ ನನ್ನದು ಈ ನನ್ನ ಮರಣ ಸಮಯದಲ್ಲಿ ನನ್ನ ರಾಮ ನನಗೆ ಕಾಣದಂತಾದನಲ್ಲ ! ಎಂತಹ ಜನ್ಮವಿದು ! ಆದುದೆಲ್ಲ ನಡೆದುದೆಲ್ಲ ಆತ್ಮವಂಚನೆಯಲ್ಲದೆ ಬೇರಿನ್ನೇನು ? ನನ್ನ ಜೀವನದ ಬಂಧನವು ಹರಿಯಲೊಲ್ಲದಲ್ಲ! ಮೋಕ್ಷದ ದ್ವಾರ ಎಂದು ಯಾವಾಗ ತೆರೆಯುವುದಿನ್ನು ? ಹಾ !ತಿಳಿಯಿತು. ಕರ್ಮದ ಭೋಗವಿನ್ನು ಮುಗಿಯಲೊಲ್ಲದಲ್ಲ ಎಂದು ಸಂಚಿತ ಬೆದರಿದೆ. ಅಂದಮೇಲೆ ಮೋಕ್ಷದ ದ್ವಾರ ಅದೆಂತು ತೆರೆದೀತು ?

ಕುಂಡಲ ಮಂಡಿತ ನಯನ ಮನೋಹರ ಶ್ರೀ ರಾಮನ ವದನ ಸುದಾಕರನು ನನಗಾವರಿಸಿದ ಈ ಕಗ್ಗತ್ತಲೆಯಲ್ಲಿ ಅರಳಿ ಕಾಣಬಹುದೇ? ಆತ ಹಾಗೆ ಹೋಗುತ್ತಿರುವಾಗ ಈ ಪಾಪಿಯ ಮೇಲೆ ತಂಪಾದ ತನ್ನ ಕಿರಣಗಳೆರಡು ಎಸೆಯಲಾರನೇ ? ಆ-ದ-ರೇ- ಇಂತಹ ಅಘಟಿತ ಘಟನೆಗೆ ಅವಕಾಶವೆಲ್ಲಿದೆ ? ಸ್ವರ್ಗಸುಖವನ್ನು ನಾನೇ ದೂರ ನೂಕಿದೆ. ಎಲ್ಲೆ ಕೈಕೇಯೀ ऽ ದುಷ್ಟಳೇ ऽ ಕು-ಟಿ-ಲ-ಳೇ ಕೇಳಿಲ್ಲಿ. ಭಾಗ್ಯದ ಜೊತೆ ನಿನ್ನ ಸೌಭಾಗ್ಯವನ್ನೂ ಕೂಡ ಈ ಕ್ಷಣದಲ್ಲಿಯೇ ಕಳೆದು ಕೊಳ್ಳುವಿ. ರಾಮ ಜಾನಕಿಯರು ಮಾನವ ಲೋಕದ ದೇವತೆಗಳೇ ಆಗಿರುವರು ಎಂಬುದನ್ನು ಪ್ರತ್ಯಕ್ಷ ಕಾಣುವವರು ಎಂತಹ ಭಾಗ್ಯವಂತರು ! ಎಂತಹ ಸೌಖ್ಯ ಅವರದು ! ಸ್ವರ್ಗ ಸುಖ ಎಂಬುದು ಬೇರೆ ಏನಿರಬಹುದು?

ಎಲೇ ನನ್ನ ಅದೃಷ್ಟವೇ, ರಾಮನೆಂದು ಬರುವನೆಂಬುದನ್ನು ನೀನೇನಾದರೂ ಹೇಳಬಲ್ಲೆಯಾ ? ಪ್ರಿ-ಯೇ ಕೌ-ಸ-ಲ್ಯೇ -ऽ ಸು-ಮಿ-ತ್ರೇ, ಉ-ರ್ಮಿ-ಳೆ-ಯ-ರೇ ಕ್ಷಮಿಸಿರೆನ್ನ. ಪ್ರ-ಜಾ-ಜ-ನ-ರೇ ಕ್ಷಮಿಸಿರೆನ್ನ, ಬರುವೆ ನಾನಿನ್ನು. ಅನತಿ ದೂರ ಹೊರಟಿರುವೆ. ಸುಖ ದುಃಖದ ಆಚೆಗೆ ನಡೆದಿರುವೆ ನಾನು. ನನ್ನ ರಾಮ ತನ್ನ ತಂದೆಯನ್ನು ಕ್ಷಮಿಸುವ. ಅಂತ್ಯ ಕಾಲದಲ್ಲಿಯ ಗಂಗೋದಕ ಪಾನದಂತೆ ಈ ನನ್ನ ಅಂತ್ಯ ಕಾಲಕ್ಕೆ ಪ-ತಿ-ತ ಪಾ-ವ-ನ ಮೇ-ಘ-ಶ್ಯಾ-ಮ ರಾಮ ಲಕ್ಷ್ಮಣ ಸೀ-ತಾ- ರಾ-ಮ'' ಎಂದು ತುಟಿಗಳಿಂದ

ಜಯ ಜಯಕಾರ ಮಾಡುವೆ - ಶ್ರೀಽ ರಾಮ - ಶ್ರೀಽಽ ರಾಮ -ಶ್ರೀಽಽಽ ರಾಮ - ರಾಽಽ ಮ ಎಂದು ಅನ್ನುತ್ತಿದ್ದಾಗಲೇ ದಶರಥರಾಜ ಕಡೆಯ ಉಸಿರೆಳೆದ.

## ಅಧ್ಯಾಯ ೨೩
## ''ಮಾತೆಯಯಲ್ಲ ನೀ ವೈರಿಣಿ'' ( ಭರತ)

ಈ ಅವಸ್ಥೆಯಲ್ಲಿಯೇ ದಶರಥರಾಜನ ಪ್ರಾಣೋತ್ಕ್ರಮಣವಾಯಿತು. ರಾಜನ ಮರಣದಿಂದ ನಗರದ ತುಂಬೆಲ್ಲ ಹಾಹಾಕಾರವೆದ್ದಿತು. ವಸಿಷ್ಠಾದಿ ಮುನಿಗಳು ಎಲ್ಲರನ್ನೂ ಸಾಂತ್ವಾನ ಪಡಿಸುತ್ತ ಒಳ್ಳೇ ಸಂಯಮದಿಂದ ಈ ಪ್ರಸಂಗವನ್ನು ದಾಟಿಸಿದರು. ಭರತನನ್ನು ಕರೆತರಲು ನಂದಿಗ್ರಾಮಕ್ಕೆ ದೂತನನ್ನು ಕಳಿಸಿ ಆಯಿತು. ದಶರಥರಾಜನ ಮರಣ ವಾರ್ತೆಯನ್ನು ದೂತ ಬುದ್ಧಿ ಪುರಸ್ಕರವಾಗಿ ಭರತನಿಂದ ಬಚ್ಚಿಟ್ಟ. ಶ್ರೀರಾಮನ ಯುವರಾಜ್ಯಾಭಿಷೇಕ ಜರುಗುವುದೆಂದು ಭಾವಿಸಿ ಲಗುಬಗೆಯಿಂದ ಭರತ ಅಯೋಧ್ಯೆಗೆ ಬಂದ.

ಅನಾಥವಾದ ಅಯೋಧ್ಯೆ ಭರತನಿಗೆ ಅತ್ಯಂತ ಉದಾಸೀನವಾಗಿ ಕಂಡಿತು. ಕೈಕೇಯಿಯು ಭರತನನ್ನು ಕಂಡೊಡನೆಯೇ ಅವನಿಗೆ ನಡೆದ ವಿಷಯವನ್ನೆಲ್ಲ ತಿಳಿಸಿ ಶೀಘ್ರದಲ್ಲಿ ಔರ್ಧ್ವ ದೈಹಿಕ ವಿದಿಗಳನ್ನು ಮುಗಿಸಿ ರಾಜ್ಯ ಸ್ವೀಕರಿಸಬೇಕೆಂದು ಆಜ್ಞಾಪಿಸಿದಳು. ಕೈಕೇಯಿಯ ಈ ಸ್ವಾರ್ಥಭರಿತ ಶಬ್ದಗಳನ್ನು ಕೇಳಿ ಭರತನಿಗೆ ಅಸಹನೀಯ ಸಂತಾಪವಾಯಿತು. ಆತನ ಕ್ರೋಧ ಮೇರೆ ತಪ್ಪಿತು. '' ಕೈಕೇಯೀ ನೀನು ನನ್ನ ಮಾತೆಯಲ್ಲ, ವೈರಿಣಿ '' ಎಂದು ಗುಡುಗಿದ . ಮುಂದುವರಿದು -

''ಅಶ್ವಪತಿಯ ಕನ್ಯೆಯೂ ನೀನಲ್ಲ, ನನ್ನ ಮಾತೆಯೂ ನೀನಲ್ಲ. ಮೂಢಳೇ, ಧರ್ಮಾತ್ಮರ ವಂಶದಲ್ಲಿ ಜನಿಸಿ ಎಂತಹ ಹೀನ ಕೃತ್ಯ ಮಾಡಿದಿ ? ಪತಿವ್ರತೆಯಾದವಳು ಎಂದಾದರೂ ಪತಿಯ ವಧೆ ಬಯಸುವಳೇ ? ಏನು ನಿನ್ನ ಅಧಃಪತನವಿದು! ಆತ್ಮ ಘಾತಕಿ! ನೀನು **ಶಾಖೆಗಳೊಂದಿಗೆ ವೃಕ್ಷವನ್ನು ಕಡಿದೊಗೆದು, ಆಮೇಲೆ ಅದು ಬೆಳೆದು ಫಲವನೀಯಬೇಕೆಂದು ಬಯಸುವುದು ಆತ್ಮಘಾತ ಜ್ಞಾನ ?** '' ಎಂದು ವರ್ಣಿಸಿರುವರೇ ಹೇಗೆ ನಿನ್ನ ಆತ್ಮಘಾತಕಿ, ಜ್ಞಾನವಿದು. ಒಂದು ವೇಳೆ ನಿನ್ನ ಮಾತಿಗೆ ಒಪ್ಪಿ ನಿನಗಾಗಿ ನಾನು ರಾಜ್ಯ ಸ್ವೀಕರಿಸಿದರೆ ಇಕ್ಷ್ವಾಕು ವಂಶದ ಕೀರ್ತಿಗೆ ಕಲಂಕ ತಟ್ಟೀತೆಂಬುದರ ಅರಿವಾದರೂ ನಿನಗಿದೆಯೇ ದುಷ್ಟಳೇ ? ವನಕ್ಕೆ ನನ್ನ ಅಣ್ಣನನ್ನು ಅಟ್ಟಿದಿ. ತಂದೆಯನ್ನು ಸ್ವರ್ಗಕ್ಕೆ ಕಳಿಸಿದಿ. ನನ್ನ ಅಣ್ಣ ರಾಮ ವನಕ್ಕೆ ತೆರಳುವಾಗ ಅವನಿಗೆ ನಾರುಬಟ್ಟೆಯನ್ನು ಕೊಡುವಾಗ ನಿನ್ನ ಕೈಗಳು

ಸುಡಲಿಲ್ಲವೇ? ನೀಚಳೇ ऽऽ ಒಂದು ಕ್ಷಣ ಕೂಡ ನನ್ನೆದುರು ನಿಲ್ಲಬೇಡ. ಹೊರಡಿಲ್ಲಿಂದ ಹೋಗಾಚೆಗೆ , ಅಡವಿಯ ಪಾಲಾಗಿ ಹೋಗು.

ಹಾಯ್ ! ಹಾಯ್ ! ಈ ಭರತನಿಂದು ನಿರಾಧಾರನಾದ ! ಆಸರವೆಲ್ಲಿದೆ ಇವನಿಗೆ ? ನಿಪುತ್ರಿಕಳೇ ವೈಧವ್ಯದಿಂದ ಇನ್ನು ಎಲ್ಲಿ ಬೇಕಾದರೂ ಬೇಕಾದಷ್ಟು ಮೆರೆ ಹೋಗು. ಆದರೆ ಪಾಪಿಣೀ ನಿನ್ನ ನೆರಳು ಮಾತ್ರ ನಮ್ಮ ಈ ಪವಿತ್ರ ಪ್ರಾಸಾದದಲ್ಲಿ ರಘುವಂಶದ ಸಿಂಹಾಸನದ ಮೇಲೆ ಬೀಳದಿರಲಿ ಎಂದಿಷ್ಟೇ ನನ್ನ ಇಚ್ಛೆ. ಕುಟಿಲೇ ನಿನ್ನ ಕಂಡೊಡನೆಯೇ ಈ ನನ್ನ ಖಡ್ಗ ನಿನ್ನನ್ನು ವಧೆ ಮಾಡಲು ಹಾತೊರೆಯುತ್ತಿದೆ. ಆದರೆ ನೀನು ರಾಮನ ತಾಯಿಯೂ ಆಗಿರುವುದರಿಂದ ನಿನ್ನ ಮೇಲೆ ಖಡ್ಗವನ್ನು ಹೇಗೆ ಎತ್ತಲಿ ? ನಿನ್ನ ವಧೆ ಮಾಡಿದರೆ ಆ ನನ್ನ ಇಬ್ಬರು ಮಾತೆಯರು ನನಗೆ ಕುಪುತ್ರನೆಂದಾರೆಂಬ ಭಯ ನನಗೆ. ಇದರಿಂದಲೇ ಇಂದು ನೀನು ಬದುಕಿಕೊಂಡೆ.

ಮಾತೆ ಕೌಸಲ್ಯೆ, ಸೌಮಿತ್ರೆಯರನ್ನು ಹೇಗೆ ಕಾಣಲಿನ್ನು ನಾನು ? ಎಂಥ ಶಬ್ದಗಳಿಂದ ಮತ್ತು ಹೇಗೆ ಅವರ ಶೋಕವನ್ನು ಶಾಂತ ಮಾಡಲಿ ? ಮೂರು ಲೋಕಗಳೂ ಉದಾಸೀನವಾಗಿ ಕಾಣುತ್ತಿರಬಹುದು ಅವರಿಗೆ. ಇನ್ನು ನಗರವಾಸಿಗಳಿಗೆ ಯಾವ ರೀತಿಯ ಮಾತುಗಳಿಂದ ಸಾಂತ್ವನ ಹೇಳಲಿ ? ಅವರಿಗೆ ತಿಳುವಳಿಕೆ ಹೇಗೆ ಕೊಡಲಿ ? ಅಣ್ಣ ರಾಮನಿಲ್ಲದ ಈ ಪ್ರಾಸಾದ ವನಕ್ಕಿಂತ ನಿರ್ಜನವೆನಿಸಹತ್ತಿದೆ ನನಗೆ. ಆದುದರಿಂದ ರಾಮನೆಲ್ಲಿಯೇ ಇರಲಿ . ವನವನ್ನೆಲ್ಲ ತಿರುವು ಹಾಕಿ ಅವನನ್ನು ಶೋಧಿಸಿ ಮರಳಿ ಅಯೋಧ್ಯೆಗೆ ಅವನನ್ನು ತರುವೆ. ಇದು ನನ್ನ ಪ್ರತಿಜ್ಞೆ. ನನಗಾರೂ ಅಡ್ಡಿ ಬರಬೇಡಿರಿ ನಾನಿನ್ನು ತಡೆಯಲಾರೆ. ಸುಮಂತಾ ನಡೆ ಏಳು ತಡಮಾಡಬೇಡ. ಶ್ರೀರಾಮನ ಶೋಧೆಗೆ -. ಒಂದು ಲಕ್ಷ ಸೈನ್ಯ ಹೊರಡಬೆಕೆಂದು ಸೈನ್ಯಾಧಿಕಾರಿಗೆ ಕರೆ ಕೊಡು. ಅಭಿಷೇಕೋತ್ಸವಕ್ಕೆಂದು ವೇದ ಮೂರ್ತಿಗಳಾದ ಮುನಿಗಳು ಜೊತೆಗೆ ಇರಲಿ. ರಾಮನು ಎಲ್ಲಿಯೇ ಇರಲಿ. ಅವನ ಈ ಈ ರಾಜ ಮುಕುಟವನ್ನು ಅವನಿಗೆ ಅರ್ಪಿಸಬೇಕೆಂಬುದೇ ನನಗೆ ಧ್ಯಾಸ. ಇದೊಂದೆ ಆಸೆ ಈಗ ನನಗಿದ್ದುದು.

## ಅಧ್ಯಾಯ ೨೪

## " ಸಾವಧಾನ ರಾಘವಾ " (ಲಕ್ಷ್ಮಣ)

ಈ ರೀತಿಯಾಗಿ ಇಷ್ಟು ಕಠೋರ ಶಬ್ದಗಳಿಂದ ಕೈಕೇಯಿಗೆ ನಿರ್ಭತ್ಸನ ಮಾಡಿ ಶ್ರೀರಾಮನ ಶೋಧಕ್ಕಾಗಿ ಚತುರಂಗ ಸೇನೆ ಸಹಿತ ಅಯೋಧ್ಯೆಯಿಂದ ಹೊರಬಿದ್ದ. ನಗರವಾಸಿಗಳು ಹೊರಟರಲ್ಲದೇ ಕೌಸಲ್ಯೆ, ಸುಮಿತ್ರೆಯರೂ ಆತನನ್ನು ಹಿಂಬಾಲಿಸಿದರು.

ಒಂದು ವೇಳೆ ಶ್ರೀರಾಮನು ಅಯೋಧ್ಯೆಗೆ ಮರಳಲು ಒಪ್ಪದಿದ್ದರೆ ತಾವಾದರೂ ಅವರ ಜೊತೆ ವನವಾಸಿಯಾಗಿ ಇರಬೇಕೆಂಬ ನಿರ್ಧಾರದಿಂದ ಭರತನಾದರೂ ನಾರು ಬಟ್ಟೆಯನ್ನುಟ್ಟು ಶ್ರೀರಾಮ ಲಕ್ಷ್ಮಣರಂತೆಯೇ ತಪಸ್ವಿಗಳ ವೇಷ ಧರಿಸಿದ. ರಾಮ ಲಕ್ಷ್ಮಣರು ಹೋದ ಮಾರ್ಗದಿಂದಲೇ ಈ ಜನಸ್ತೋಮ ಸಾಗಿ ಭಾರದ್ವಾಜ ಮುನಿಗಳ ಆಶ್ರಮ ತಲುಪಿತು. ಶ್ರೀರಾಮನು ಚಿತ್ರಕೂಟ ಪರ್ವತದ ಮೇಲೆ ಇರುವನೆಂದು ಭರತನಿಗೆ ಋಷಿಗಳಿಂದ ತಿಳಿದು ಬಂದಿತು. ಆಗ ಅವನ ತನ್ನ ಸೈನ್ಯದೊಂದಿಗೆ ಚಿತ್ರಕೂಟ ಪರ್ವತದ ಕಡೇ ಸಾಗಿದ.

ಇತ್ತ ರಾಮ ಲಕ್ಷ್ಮಣ ಸೀತೆಯರು ಚಿತ್ರಕೂಟ ತಮ್ಮ ಪರ್ಣಕುಟೀರದ ಪರಿಸರದಲ್ಲಿ ವಿಹರಿಸುತ್ತಿದ್ದರು. ಆಗ ಒಮ್ಮಿಂದೊಮ್ಮೆ ಉತ್ತರ ದಿಕ್ಕಿನೆಡೆಗೆ ಮುಗಿಲೆತ್ತರ ಹುಡಿ ಎದ್ದಂತೆ ಕಂಡಿತವರಿಗೆ. ಕಿವಿ ಗಡಚಿಕ್ಕುವಂತಹ ನಾದವೂ ಕೇಳಿಬಂತು ಸದೈವ ಜಾಗರೂಕನಾಗಿರುವ ವೀರಬಾಹು ಲಕ್ಷ್ಮಣ ಅದನ್ನು ನಿರೀಕ್ಷಿಸಿ ತುಂಬಾ ಲಗುಬಗೆಯಿಂದ ಶ್ರೀರಾಮನಿಗೆ ಹೇಳಹತ್ತಿದ.

''ರಾಘವಾ, ಜಾನಕಿಯನ್ನು ಆಶ್ರಮದೊಳಗೆ ಕಳಿಸು, ಬಿಲ್ಲನ್ನೆತ್ತಿ ಕೈಯಲ್ಲಿ ಹಿಡಿ. ಯಾರೋ ಈ ಕಡೆಗೆ ನಮ್ಮ ಮೇಲೆ ಸಾಗಿ ಬರುವಂತೆ ತೋರುತ್ತದೆ. ಸಾವಧಾನ, ರಾಘವಾ ಕೇಳು , ಮೇಘ ಗರ್ಜನೆಯಂತೆ ಕಾನನದಿಂದ ಧ್ವನಿ ಕೇಳಬರಹತ್ತಿದೆ. ಶ್ವಾಪದಗಳು ಈ ಧ್ವನಿಗೆ ಬೆದರಿ ತಿನ್ನುತ್ತಿದ್ದ ತಮ್ಮ ಭಕ್ಷ್ಯವನ್ನೇ ಬಿಟ್ಟು ಓಡಹತ್ತಿವೆ. ತನ್ನ ನಡುಗನ್ನು ನಿಲ್ಲಿಸಿ ಕುರ್ರುಂಗ ಕಿರುಚ ಹತ್ತಿದೆ. ಧೂಳು ನಭಕ್ಕೇರಿದೆ. ರಾಮಾ, ಯಾರದೋ ಸೈನ್ಯ ಬರುತ್ತಿರುವಂತೆ ಕಾಣಿಸಹತ್ತಿದೆ. ಯಾರದಿರಬಹುದು ಗುರುತು ಮಾತ್ರ ಸಿಗಲೊಲ್ಲದು. ಉತ್ತರದಿಕ್ಕಿಗೆ ಆ ಜನ ಏನೀ ತರ್ಕವೋ. ಯಾತಕ್ಕಾಗಿ ಅವರು ಈ ಕಡೆಗೆ ಬರುತ್ತಿರಬಹುದು ರಾಘವಾ ? ಮಾನವರ ವಸತಿಯೇ ಇಲ್ಲದ ಈ ವನದಲಿ ನಡೆಯುತ್ತ ಯಾರು ಬರುತ್ತಿರಬಹುದು ? ಅದೇನೇ ಇರಲಿ. ಆ ತಾಲ ವೃಕ್ಷವನ್ನೇರಿ ಅದೇನಿದೇಯೋ ನೋಡುತ್ತೇನೆ ನಾನು ಆದರೆ ನೀನು ಮಾತ್ರ ಕೆಳಗೆ ಬಿಲ್ಲು ಬಾಣಕಳೊಂದಿಗೆ ಸಿದ್ಧನಾಗಿರು. ತನ್ನ ಶೌರ್ಯದ ವೈಭವವನ್ನು ತೋರಬೇಕೆಂಬುವ ಅದ್ಯಾವ ವೀರನೋ ನೋಡೋಣ.''

''ಹಾ ! ರಾಘವಾ ಕಾಣಿಸೀತು ನನಗೆ. ಸೈನ್ಯದ ಕಾಲ್ದಳ ಅದೆಷ್ಟೋ ಓಡಿ ಬರಹತ್ತಿದೆ. ಆನೆ ಕುದುರೆಗಳು ಧಾವಿಸಹತ್ತಿವೆ. ಹಾ ! ರಾಘವಾ,ರಥವು ಯಾರದಿದು? ರಥದಲ್ಲಿ ನಿಂತ ಶ್ರೇಷ್ಠ ಪುರುಷನಾರಿರಬಹುದು ? ಮಹಾರಥಿಯಂತೆ ಕಾಣಿಸುತ್ತಾನೆ ಆತ. ರಾಮಾ ಆಕೃತಿಯಲ್ಲಿ ಧೀರ್ಘಬಾಹು, ನಿನ್ನಂತೆ ಶ್ಯಾಮಲ. ಬಂಧುಗಳನ್ನು ಶೋಧಿಸಿ ಅವರೊಡನೆ ಯುದ್ಧ ಮಾಡಲೆಂದು ಭರತನೇ ಬಂದನೇನು ಮತ್ತೆ ? ಹೇಡಿ ಆ ಭರತ.

ಆತನೇನು ಬಂಧು ಘಾತವನ್ನು ಸಾಧಿಸಬಲ್ಲ? ತುಸು ಮುಂದೆ ಬರಲಿ. ಅವನ ಗಂಟಲವನ್ನೇ ಹಿಸುಕುವೆ. ಆಮೇಲೆ ಕೈಕೇಯಿ ಛಿನ್ನ ವಿಛಿನ್ನವಾದ ತನ್ನ ಪುತ್ರನ ದೇಹವನ್ನು ಕಾಣಲಿ. ಅಶ್ವಗಳ ಖುರುಗಳ ಧ್ವನಿ ತೀರ ಸಮೀಪದಲ್ಲಿಯೇ ಕೇಳಬರಹತ್ತಿತು. ರಾಘವಾ ಪುನಃ ನಮ್ಮ ಶಸ್ತ್ರ ಪಟುತ್ವ ಪ್ರದರ್ಶಿಸಲು ಸಂಧಿ ಬರುವಂತಿದೆ- ನೋಡೋಣ. ರಾಮಾ, ಅವರು ಲಕ್ಷ ಸಂಖ್ಯೆಯಲ್ಲಿ ಬರಲಿ. ನೀನೇನೂ ಯೋಚಿಸಬೇಡ. ನಾನೊಬ್ಬನೇ ಸಾಕು ಅವರೆಲ್ಲರನ್ನು ಎದುರಿಸಲು. ಆ ಲೋಕಪಾಲಕ ಭರತನಿಸ್ನೂ ಹೊಸಬ. ಸತ್ವಹೀನ ಜನ ಅವನನ್ನು ಹಿಂಬಾಲಿಸಿರಬೇಕಷ್ಟೇ. ಆದರೂ ರಣರಂಗದಲ್ಲಿ ಶತ್ರು ಬಾಲಕನೆಂದು ಕ್ಷಮ್ಯನಲ್ಲ. ಶತ್ರುಗಳ ನಾಶ ಕ್ಷತ್ರಿಯರ ಧರ್ಮಕಾರ್ಯ. ನನ್ನೆದುರು ಅವರು ಬಂದಾದಾರೂ ಬರಲಿ, ಅವರನ್ನು ರವ ರವ ನರಕಕ್ಕೆ ತಳ್ಳುವೆ.''

ಈ ರೀತಿಯಾಗಿ ಲಕ್ಷ್ಮಣನ ಕ್ರೋಧ ಅಂಕೆ ಮೀರಿತುರಾಮ ಅದೆಷ್ಟು ಬೋಧಿಸಿದರೂ ಆತ ಅಳವಿನೊಳಗೆ ಬರಲೊಲ್ಲ. ಆತ ಮುಂದುವರಿದು - ''ರಾಮಾ, ಆಪತ್ತುಗಳನ್ನು ಭೋಗಿಸಲಿಕ್ಕೆಂದೇ ರಾಮ ಜನ್ಮಿಸಿರುವನೇ ? ಏನು ನಡೆದಿದೆ ಇದು ? ಆಗ ಬೇಕಾದುದು ಒಮ್ಮೆ ಆಗಿ ಬಿಡಲಿ. ಮೇದಿನಿ ಒಮ್ಮೆ ಪಾಪ ಮುಕ್ತಳಾದರೂ ಆಗಲಿ. ಭರತ ಖಂಡವು ರಾಮರಾಜ್ಯ ಸುಖಸಂಪತ್ತನ್ನಾದರೂ ಭೋಗಿಸಲಿ. ಧರ್ಮರಕ್ಷಣೆಯ ಕಾರ್ಯದಲ್ಲಿ ಇಂದ್ರನಿಗೂ ಅಜೇಯ ನಾನು'' ಎಂದು ಗರ್ಜಿಸುತ್ತಿರುವಾಗಲೇ ಭರತ ತನ್ನ ಪರಿವಾರದೊಂದಿಗೆ ಆಗಮಿಸಿದ ಎಂದು, ಗೀತಾರಾಮಾಯಣದ ೨೪ನೆಯ ಅಧ್ಯಾಯದೊಂದಿಗೆ **ಶ್ರೀರಾಮಾಯಣ ನಿತ್ಯ ಚಿಂತನ** ಸಪ್ತಾಹದ ೩ನೆಯ ದಿನ ಮುಗಿದುದು.

ಶ್ರೀರಾಮಚಂದ್ರಾರ್ಪಣಮಸ್ತು

ರಾಮರಕ್ಷಾಭಾಗ :

ಪಾತಾಲ ಭೂತಲ ವ್ಯೋಮ ಚಾರಿಣಚ್ಛದ್ಮ ಚಾರಿಣಃ ।
ನ ದ್ರಷ್ಟುಮಪಿ ಶಕ್ತಾಸ್ತೇ ರಕ್ಷಿತಂ ರಾಮನಾಮಭಿಃ ॥೧೧॥

ರಾಮೇತಿ ರಾಮಭದ್ರೇತಿ ರಾಮಚಂದ್ರೇತಿ ವಾಸ್ಮರನ್ ।
ನರೋ ನ ಲಿಪ್ಯತೇ ಪಾಪೈಃ ಭುಕ್ತಿಂ ಮುಕ್ತಿಂಚ ವಿಂದತಿ ॥೧೨॥

ಜಗಜ್ಜೈತ್ರೈಕ ಮಂತ್ರೇಣ ರಾಮ ನಾಮ್ನಾಭಿ ರಕ್ಷಿತಂ ।

ವಜ್ರಪಂಜರ ನಾವೇದಂ ಯೋರಾಮ ಕವಚಂ ಸ್ಮರೇತ್ ।
ಅವ್ಯಾಹತಾ ಜ್ಞಃ ಸರ್ವತ್ರ ಲಭತೇ ಜಯ ಮಂಗಲಂ ॥೧೪ ॥

ಆದಿಷ್ಟವಾನ್ ಯಥಾ ಸ್ವಪ್ನೇ ರಾಮರಕ್ಷಾಮಿಮಾಂ ಹರಃ।
ತಥಾ ಲಿಖಿತವಾನ್ ಪ್ರಾತಃ ಪ್ರಬುದ್ಧೋ ಬುಧ ಕೌಶಿಕಃ ॥೧೫ ॥

ಆ ರಾಮಃ ಕಲ್ಪವೃಕ್ಷಾಣಾಂ ವಿರಾಮಃ ಸಕಲಾ ಪದಾಮ್।
ಅಭಿರಾಮ ಸ್ತ್ರೀ ಲೋಕನಾಂ ರಾಮಃ ಶ್ರೀಮಾನ್ ಸ ನಃ ಪ್ರಭುಃ ॥೧೬ ॥

**ಜಾನಕೀ ಜೀವನ ಸ್ಮರಣ ಜಯ ಜಯ ರಾಮ**
**ಶ್ರೀರಾಮ ಜಯ ರಾಮ ಜಯ ಜಯ ರಾಮ (೧೦ ಸಾರೆ)**
**ಜಯ ಜಯ ರಘುವೀರ ಸಮರ್ಥ**

# ಸಪ್ತಾಹದ ೪ನೆಯ ದಿನ

ಶ್ರೀ ರಾಮ ಜಯರಾಮ ಜಯ ಜಯರಾಮ ( ೧೦ ಸಾರೆ )

''ಜಯ ಜಯ ರಘುವೀರ ಸಮರ್ಥ''

**ಧ್ಯಾನ್ಯ ಶ್ಲೋಕ :-**

**ಧ್ಯಾಯೇದಾ ಜಾನುಬಾಹುಂ --------- ಮಂಡನಂ ರಾಮಚಂದ್ರಂ**

**ಇತಿಧ್ಯಾನಂ**

''ಜಯ ಜಯ ರಘುವೀರ ಸಮರ್ಥ''

**ಪೂರ್ವಕಥಾನುವಾದ** :- ಶ್ರೀರಾಮನು ಲಕ್ಷ್ಮಣನನ್ನು ಶಾಂತಗೊಳಿಸಿದ. ತಾಯಿಗೆ ವೃದ್ಧ ತಂದೆಯನ್ನು ನೋಡಿಕೊಂಡಿರುವುದೇ ಧರ್ಮವೆಂದು ತಿಳಿ ಹೇಳಿದ ಸೀತಾದೇವಿಯ ನಿರೋಪ ಪಡೆಯಲೆಂದು ಅವಳ ಮಂದಿರಕ್ಕೆ ಬಂದಾಗ '' ರಾಘವನೆಲ್ಲಿಯೋ ಅಲ್ಲಿಯೇ ಸೀತೆ '' ಎಂದು ಅವಳು ವನಕ್ಕೆ ಹಿಂಬಾಲಿಸಲು ಅವಳು ತನ್ನ ನಿರ್ಧಾರವನ್ನು ವ್ಯಕ್ತ ಮಾಡಿದಾಗ ಶ್ರೀರಾಮನಿಗೆ ಒಪ್ಪಿಕೊಳ್ಳುವುದು ಅನಿವಾರ್ಯವಾಯಿತು. ಮೂವರೂ ಸುಮಂತ ಸಿದ್ಧಮಾಡಿ ತಂದ ರಥವನ್ನೇರಿದರು. ರಥ ಚಲಿಸಿದಾಗ ''ಸುಮಂತಾ ರಥ ನಿಲ್ಲಿಸೆಂದು'' ಪ್ರಜೆಗಳ ದುಃಖ ಪುಟಿದೆದ್ದು ಮಾತಾಡಲಾರಂಭಿಸಿತು. ಆದರೆ ಅವರ ಆರ್ತ ಪ್ರಾರ್ಥನೆ ರಥ ತಡೆಯಲು ಸಮರ್ಥವಾಗಲಿಲ್ಲ.

ಅಂದು ರಾತ್ರಿ ಶೃಂಗವೇರ ಪುರ ತಲುಪಿ ಈ ಮೂವರೂ ವನವಾಸಿಗಳು ನಿಷಾಧಿಪತಿ- ಗುಹನ ಆತಿಥ್ಯದಲ್ಲಿ ಉಳಿದರು. ಬೆಳಕು ಹರಿದೊಡನೆ ಶ್ರೀರಾಮ ಸುಮಂತನಿಗೆ ಅಯೋಧ್ಯೆಗೆ ಮರಳಲು ಆಜ್ಞೆಯಿತ್ತು ತಾವು ಮೂವರೂ ನಾವಿನಲ್ಲಿ ಕುಳಿತು ಗಂಗಾನದಿಯನ್ನು ದಾಟಿ - ಲತಾ ಪುಷ್ಪಗಳಿಂದ, ಫಲವೃಕ್ಷಗಳಿಂದ, ಜೇನು ಹುಟ್ಟುಗಳಿಂದ ಸಮ್ಮಿಶ್ರವಾದ ಚಿತ್ರಕೂಟ ಪರ್ವತ ತಲುಪಿದರು. ಮತ್ತು ಅಲ್ಲಿ ಸುಂದರವಾದ ಪರ್ಣಕೂಟೀರ ರಚಿಸಿಕೊಂಡು ಅವರು ವನವಾಸದ ದಿನಗಳೆಯ ಹತ್ತಿದರು.

ಇತ್ತ ಸುಮಂತ ಶ್ರೀರಾಮನ ವಿಯೋಗದಿಂದ ಕರಾಳವಾಗಿ ಕಾಣಿಸುತ್ತಿದ್ದ ಅಯೋಧ್ಯೆಯ ಅರಮನೆಯನ್ನು ಅಧೋಮುಖನಾಗಿ ವಿಷಣ್ಣನಾಗಿ ಪ್ರವೇಶಿಸಿದ. ಸುಮಂತ ಬಂದನೆಂಬುದು ತಿಳಿದು ಸಾವರಿಸಿಕೊಂಡು ''ರಾಮನೇನು ಹೇಳಿದ ಸುಮಂತಾ ನಮಗೆ?'' ಎಂದು ದಶರಥರಾಜ ಕೇಳಿದ. ''ರಾಜರೇ ನಿಮ್ಮೆಲ್ಲರಿಗೂ ಪ್ರಣಾಮ ಸಲ್ಲಿಸಿ, ವನದಲ್ಲಿ ಸುಖದ ಪ್ರಯಾಣ ಬೆಳಿಸಿದೆವೆಂದು ಹೇಳಲು ತಿಳಿಸಿದ. ಪತಿಸೇವೆಯಲ್ಲಿ ಮಗ್ನಳಾಗಿರಲು ತಾಯಿಯನ್ನು ಕೇಳಿಕೊಂಡ. ಭರತನಿಗೆ ರಾಜ ಸತ್ತೆಯನ್ನು ಸ್ವೀಕರಿಸಿ ನಿಷ್ಕಾಮವಾಗಿ ರಾಜ ಸುಖ ಭೋಗಿಸಲು ಹೇಳಿದ. ಮತ್ತು ತನ್ನ ತಾಯಿ ಪುತ್ರ ವಿಯೋಗಿನಿ ಎಂಬುದನ್ನು ಗಮನಿಸಿ ''ಭರತನೇ ರಾಮ'' ನೆಂದು ಅವನು ವರ್ತಿಸಿದರಾಯಿತು, ಇಷ್ಟೇ ಬಯಸುವೆ ಸುಮಂತಾ'' ಎಂದು ನುಡಿಯುತ್ತಿದ್ದಂತೆಯೇ ಅವನ ಕಂಠ ಬಿಗಿದು ಬಂತು. ಮಾತು ಮುಂದುವರಿಸಲು ಆಗದೇ ,''ಬರುವೆವು ಸುಮಂತಾ '' ಎಂದು ಮೂವರೂ ಕೈಬೀಸಿದುದು ಈಗಲೂ ನನ್ನ ಕಣ್ಮುಂದೆ ಕಟ್ಟಿದಂತಿದೆ ರಾಜರೇ '' ಎಂದು ಸುಮಂತಾ ಕಣ್ತುಂಬಿ ನೀರು ತಂದು ನಿಂತಲ್ಲೇ ಕುಸಿದು ಬಿಟ್ಟ.

ಚಿಂತಾಜನಕವಾಯಿತು - ಆ ವೃದ್ಧಪಿತ ಶಾಪಕೊಟ್ಟದ್ದು ಪುನಃ ನೆನಪಾಗಿ - ಪುತ್ರ ವಿಯೋಗದಿಂದ ತನಗೂ ಮರಣ ಖಚಿತ ಎಂಬುದರ ಅರಿವು ಅವನಿಗಾಯಿತು- ಕೌಸಲ್ಯೆ, ಸುಮಿತ್ರೆ, ಊರ್ಮಿಳೆಯರಲ್ಲದೇ - ಪುರಜನರ ಕ್ಷಮೆ ಕೇಳಿಕೊಂಡು - ರಾಮ ಲಕ್ಷ್ಮಣ- ಸೀತಾರಾಮ ಶ್ರೀ ऽ ऽ ರಾಮ ಎಂದು ಅನುಸ್ಮರಿಸುತ್ತಿದ್ದಂತೆಯೇ ದಶರಥರಾಜನ ಪ್ರಾಣೋತ್ಕ್ರಮಣವಾಯಿತು.

ನಂದೀಗ್ರಾಮದಿಂದ ಭರತನನ್ನು ಕರೆತರಲಾಯಿತು. ಕೈಕೇಯಿ ಅವನಿಗೆ ನಡೆದ ವಿಷಯವನ್ನೆಲ್ಲ ಹೇಳಿ ರಾಜನ ಔರ್ಧ್ವದೈಹಿಕ ವಿಧಿಗಳನ್ನು ಪೂರೈಸಿ ಶೀಘ್ರವಾಗಿ ರಾಜ್ಯ ಸ್ವೀಕರಿಸಲು ಹೇಳಿದಳು. ಅವಳ ಮಾತಿಗೆ ಭರತನ ಕ್ರೋಧ ಮೇರೆ ಮೀರಿತು. '' ನನ್ನ ತಾಯಿಯಲ್ಲ ನೀನು, ವೈರಿಣಿ .ಎಂಥ ಹೇಸಿ ಕೃತ್ಯ ಮಾಡಿದಿ? ಪತಿ ವಧೆ ಮಾಡಿದ ಆತ್ಮ ಘಾತಕಿ ನೀನು - ನಿನ್ನ ಹೇಳಿಕೆಯಂತೆ ನಾನು ರಾಜನಾಗ ಬಯಸಿದರೆ ಇಕ್ಷ್ವಾಕು ವಂಶದ ಕೀರ್ತಿಗೆ ಕಲಂಕ. ಒಂದು ಕ್ಷಣ ಕೂಡ ನನ್ನೆದುರು ನಿಲ್ಲಬೇಡ, ಹೋಗಾಚೆಗೆ ಎತ್ತಾದರೂ ಅಡವಿಯ ಪಾಲಾಗು ಎಂದು ಗರ್ಜಿಸಿದ. ಶ್ರೀರಾಮನನ್ನು ಶೋಧಿಸಿ - ಅವನೆಲ್ಲಿಯೇ ಇರಲಿ- ಅವನನ್ನು ಮರಳಿ ತರಬೇಕೆಂಬ ನಿರ್ಧಾರದಿಂದ - ಚಿತ್ರಕೂಟ ಪರ್ವತದ ಮೇಲೆ ಮಂದಾಕಿನಿ ತಟದ ಮೇಲೆ ನಿಲ್ಲಿಸಿದ '' ರಾಮಾಶ್ರಯಕ್ಕೆ'' ತನ್ನ ಸೈನ್ಯದೊಂದಿಗೆ ಭರತ ಬಂದ ಎಂಬುದು ನಿನ್ನೆಯ ಕಥೆಯ ಸಾರಾಂಶ . **ಇಂದು ಇನ್ನು ಮುಂದಿನ ಕಥೆ ಕೇಳೋಣ.**

# ಅಧ್ಯಾಯ ೨೫

## ದೈವಜಾತ ದುಃಖಗಳು ತುಂಬಿಕೊಂಡಿರುವಾಗ (ಶ್ರೀರಾಮ)

ಈ ಪ್ರಕಾರವಾಗಿ ಶ್ರೀರಾಮನನ್ನು ಎಚ್ಚರಿಸಿದ ಲಕ್ಷ್ಮಣ ಭರತನ್ನು ಕಂಡಾಕ್ಷಣ ಆತನ ಮೈಮೇಲೇರಲು ಧಾವಿಸಹತ್ತಿದ ಶ್ರೀರಾಮನು ಅವನನ್ನು ಬಹು ಪ್ರಯಾಸದಿಂದ ಸಾಂತ್ವನ ಮಾಡಿದ. ಅನಂತರ ಭರತ ಶ್ರೀರಾಮನ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಹುಚ್ಚು ಹಿಡಿದವನಂತೆ ಅಳಲಾರಂಭಿಸಿದ. ಶ್ರೀರಾಮನು ಅವನನ್ನು ಹಿಡಿದೆತ್ತಿ ಬಿಗಿದಪ್ಪಿಕೊಂಡು ಸಮಾಧಾನ ಮಾಡಿ ಕುಶಲ ಪ್ರಶ್ನೆಗಳನ್ನು ವಿಚಾರಿಸಹತ್ತಿದ. ಭರತ ದಿಗ್ಮೂಢನಾಗಿ ಹೇಗೋ ಸಾವರಿಸಿಕೊಂಡು ಮಾತನಾಡಲು ಬಾರದೇ ಇದ್ದರೂ ಬಹು ಕಷ್ಟದಿಂದ ಪಿತೃ ನಿಧನ ವಾರ್ತೆಯನ್ನರುಹಿದ. ಸಮಗ್ರ ಆಶ್ರಮದ ಮೇಲೆಯೇ ದುಃಖದ ಛಾಯೆ ಪಸರಿಸಿತು. ಹೇಗೋ ಸಮಾಧಾನ ತಂದು ಕೊಂಡು ಶ್ರೀರಾಮನು ಯಥಾಕಾಲೋಚಿತವಾಗಿ ತಂದೆಯ ಶ್ರಾದ್ಧ ವಿಧಿ ಮುಗಿಸಿದ. ಅನಂತರ ಭರತ,'' ರಾಮಾ, ನನ್ನ ತಾಯಿಯ ಮೂಢತನದಿಂದಾಗಿ ಮತ್ತು ತಂದೆಗೆ ಅವಳಲ್ಲಿದ್ದ ಆಸಕ್ತಿಯಿಂದಾಗಿ ನಿಮಗೆ ವನವಾಸಿಯಾಗ ಬೇಕಾಯಿತು ಸರ್ವಜ್ಞನಾದ ನಿನಗೆ ನಾನಿದನ್ನು ಹೇಳಬೇಕೇ ? ಮರಳಿ ನಡೆ ಅಯೋಧ್ಯೆಗೆ ರಾಜ್ಯಾಭಿಷಿಕ್ತನಾಗು '' ಎಂದು ಗಟ್ಟಿಯಾಗಿ ಅವನ ಪಾದಗಳನ್ನು ಹಿಡಿದು ಕೊಂಡು ಪದೇ ಪದೇ ಹೇಳಲಾರಂಭಿಸಿದ. ಆಗ ಶ್ರೀರಾಮನು ಭರತನಿಗೆ ಉಪದೇಶ ಮಾಡಲು ಪ್ರಾರಂಭ ಮಾಡಿದ.

'' ಭರತಾ, ದೈವಜಾತವಾದ ದುಃಖವು ತುಂಬಿಕೊಂಡಿರುವಾಗ ಯಾರದೂ

ದೋಷವಿಲ್ಲ. ಮಾತೆ ಕೈಕೇಯಿ ಆಗಲಿ ಪಿತ ದಶರಥರಾಜರಾಗಲಿ ದೋಷಿಗಳಲ್ಲ. ನಾನು ರಾಜ್ಯ ತ್ಯಾಗ ಮಾಡಿದುದು ಕಾನನ ಸೇರಿದುದು ಇವು ನನ್ನ ಪೂರ್ವಜನ್ಮದ ಕರ್ಮದಿಂದ ಬಂದುದವು. ಆ ನನ್ನ ಪೂರ್ವ ಸಂಚಿತದ ಆಟ ಈಗ ನಡೆದಿದೆ ಅಷ್ಟೇ. ಭರತಾ ಮತ್ತೇನೂ ಇಲ್ಲ. ಜಗತ್ತಿನ ಚಕ್ರ ಹಾಗೆ ತಿರುಗುತ್ತಲೇ ಇರುತ್ತದೆ. ಇಂದು ಅತ್ಯುನ್ನತ ಸ್ಥಿತಿಯಲ್ಲಿದ್ದುದು ನಾಳೆ ಪತನವಾಗಿ ಅದರ ಅಂತ್ಯವಾಗುವುದು. ವತ್ಸಾ, **ಸರ್ವಸಂಗ್ರಹ ಪುನಃ ನಾಶ ಹೊಂದುವದೆಂದರೇ ಅದರ ಅಂತ್ಯ. ''ಅಗಲಿಕೆಗಾಗಿಯೇ ಮಿಲನ''**ವೆಂಬ ಜಗದ ನಿಯಮ ವನ್ನು ನೀನು ಅರಿ. ಇನ್ನು ಜನ್ಮ ಮೃತ್ಯುಗಳ ವಿಷಯವೋ, ಜನ್ಮದೊಡನೆ ಮೃತ್ಯುವೂ ಜನಿಸುವುದು. ಕಣ್ಣಿಗೆ ಕಾಣುವ ಈ ವಿಶ್ವವೆಲ್ಲ ನಾಶವಂತವಿದೆ. ಅಂದ ಮೇಲೆ ಹುಚ್ಚಾ, ಸ್ವಪ್ನದಲ್ಲಿಯ ಫಲಕ್ಕಾಗಿ ಯಾಕೆ ನೀನು ಈ ರೀತಿ ಶೋಕಮಾಡುವುದು ?

ಭರತಾ, ಕೇಳಿಲ್ಲಿ ತಂದೆ ಸ್ವರ್ಗವಾಸಿಗಳಾದುದು, ನಿನ್ನ ಅಣ್ಣ ಅಡವಿಗೆ ಬಂದುದು ಇವು ಆಕಸ್ಮಾತ್ ಇಂದು ಸಂಭವಿಸಿವೆಯಾದರೂ ಇವು ಅತರ್ಕ್ಯವಾದವುಗಳೇನಲ್ಲ. **ಬಲ್ಲವರ ತರ್ಕ ಮರಣದ ಕಲ್ಪನೆ -ವರೆಗೆ ಮಾತ್ರ. ಅದರ ಮುಂದೆ ಅವರ ತರ್ಕ ಹರಿಯಲಾರದು.** ವಿಚಾರ ಮಾಡಿ ನೋಡು ಭರತಾ ನೀನು ತಿಳಿದವನಿರುವಿ. **ಜನ್ಮಿಸಿದ ಯಾವ ಪ್ರಾಣಿ ಮುಪ್ಪು ಮತ್ತು ಮರಣಗಳಿಂದ ಮುಕ್ತವಿದೆ ಹೇಳು ನೋಡೋಣ ? ದುಃಖ ಮುಕ್ತ ಜೀವನವನ್ನು ಈ ಲೋಕದಲ್ಲಿ ಯಾರಾದರೂ ಜೀವಿಸಿರುವರೇ ?** ಇಲ್ಲ. ಒಂದಿಲ್ಲೊಂದು ರೀತಿಯ ದುಃಖ ಪ್ರತಿಯೊಬ್ಬ ಮಾನವನಿಗೂ ಉಂಟು. ಇಂದು ನಡೆಯುತ್ತಿರುವ ವರ್ತಮಾನ ವಿಶೇಷಗಳೆಲ್ಲ ಕ್ಷಯದ ಮಾರ್ಗಗಳೇ ಹೊರತು ಅನ್ಯಥಾ ಇಲ್ಲ.

ಭರತಾ ಮಾನವರ ಮಿಲನ ಅದೆಷ್ಟು ''ಕ್ಷಣಿಕ''ವಿದೆ ನೋಡು ! ಮರದ ತುಂಡುಗಳೆರಡು ಸಾಗರದಲ್ಲಿ ಜೊತೆಯಾಗಿ ತೇಲುತ್ತ ನಡೆದಿವೆ ಎಂದು ತಿಳಿ. ಒಂದು ತೆರೆ ಬಂದು ಅಪ್ಪಳಿಸಿತೋ ಒಂದು ಎತ್ತ ಕಡೆಗೋ ಇನ್ನೊಂದು ಯಾವ ಕಡೆಗೋ ಚದುರಿ ಹೋಗಿ ಬಿಡುವವು. ಪುನಃ ಅವು ಒಂದನ್ನೊಂದು ಭೆಟ್ಟಿಯಾಗುವ ಮಾತೇ ಇಲ್ಲ. ಅದರಂತೆಯೇ **ಮಾನವರ ಮಿಲನವಾದರೂ ಇಷ್ಟು ಕ್ಷಣಿಕವಾದುದು. ಯಾವಕಾಲಕ್ಕೆ ಒಬ್ಬರನೊಬ್ಬರು ಅಗಲಬೇಕಾಗುವದೆಂಬುದನ್ನು ಹೇಳಲು ಬರುವುದಿಲ್ಲ. ಎಲ್ಲ ಪರಾಧೀನ- ಅಂದರೆ ಪರಮೇಶ್ವರನ ಆಧೀನ. ಮಾನವ ಸ್ವತಃ ಪರಾಧೀನ.**

ಆದುದರಿಂದ ಭರತಾ, ನಿಲ್ಲಿಸಿನ್ನು ನಿನ್ನ ಕಂಬನಿ. ಒರೆಸಿಕೋ ಕಣ್ಣುಗಳನ್ನು. ಇಂದಿನ ಮಟ್ಟಿಗೆ ನಮ್ಮ ಮಾರ್ಗಗಳು ಬೇರೆಯಾಗಿವೆ ಎಂಬುದನ್ನು ತಿಳಿ. ನೀನೋ ಅಯೋಧ್ಯೆಯ ರಾಜ, ನಾನೋ ವನದಲ್ಲಿ ದೀನರಂಕ. ಕಾರಣ ಅಯೋಧ್ಯೆಗೆ ಮರಳಬೇಕೆಂದು ವ್ಯರ್ಥ

ನನ್ನನ್ನು ಇನ್ನು ಆಗ್ರಹಪಡಿಸಬೇಡಪ್ಪ ಭರತ. ಪಿತೃವಚನದಂತೆ ನೀನು ಅಯೋಧ್ಯಾಧಿಪತಿಯಾಗಬೇಕು. ಮತ್ತು ನಾನು ವನವಾಸಿಯಾಗಬೇಕು. ಇದನ್ನು ನೆನೆದು ಸ್ವರ್ಗೀಯ ಪಿತನ ವಚನ ಪಾಲಿಸಿ, ಉಭಯತರೂ ಕೃತಾರ್ಥರಾಗೋಣ. ಆಂದಮೇಲೆ ಈ ತಪಸ್ವಿಗಳ ವೇಷ ನಿನಗೇಕಿನ್ನು ? ತೆಗೆ ದೂರೆಸೆ - ಆಚೆಗೆ ಅದನ್ನು ಮುಕುಟ ಕವಚಗಳನ್ನು ಧಾರಣಮಾಡು.

ತಮ್ಮ ಭರತಾ, ನನ್ನ ನಿಶ್ಚಯದ ಕಡೆಯ ಎರಡು ಮಾತುಗಳನ್ನು ಹೇಳುವೆ ಕೇಳು. ಏನೇ ಆದರೂ ಯಾವ ಕಾರಣಕ್ಕಾಗಿಯೂ ಈ ಹದಿನಾಲ್ಕು ವರುಷಗಳು ಮುಗಿಯುವವರೆಗೆ ನಾನು ಅಯೋಧ್ಯೆಗೆ ಬರಲಾರೆ ನನ್ನ ನಿರ್ಧಾರವಿದು. ತ್ರಿವಾರ ಸತ್ಯ. ರಾಜ್ಯ ಸಂಪದೆಗೆ ನೀನೇ ಸ್ವಾಮಿ ಈಗ. ಆದುದರಿಂದ ಮರಳು ಅಯೋಧ್ಯೆಗೆ. ನೀವಾರೂ ಇನ್ನು ಮುಂದೆ ಇಷ್ಟು ದೂರ ಈ ವನದಲ್ಲಿ ಬಂದು ಯಾವುದೇ ಸಂದರ್ಭದಲ್ಲಿ ನಮ್ಮನ್ನು ಕಾಣುವ ಪ್ರಯತ್ನ ಮಾಡಬೇಡಿರಿನ್ನು. ನಮ್ಮ ನಿಮ್ಮ ಪ್ರೇಮ ಭಾವ ಮನದಲ್ಲಿಯೇ ಜಾಗೃತವಾಗಿರಿಸಿಕೊಂಡು ನಮ್ಮ ಅಯೋಧ್ಯೆಯ ಮಾನ, ಅದರ ಅಂತಸ್ತು, ಅದರ ಕೀರ್ತಿ ಬೆಳೆಯುವಂತೆ ಪ್ರಯತ್ನ ಮಾಡಿರಿ. ಅದೇ ನನಗೆ ಸಮಾಧಾನ '' ಎಂದ ಶ್ರೀರಾಮ.

## ಅಧ್ಯಾಯ ೨೬
## ರಾಮಾ ನಿನ್ನ ಪಾದುಕೆಗಳನ್ನಾದರೂ ಕೊಡು ಎಂಬುದೊಂದೇ ನನ್ನ ಬೇಡಿಕೆ

'' ಈ ನನ್ನ ಕಾನನ ವಾಸ ನನ್ನ ಪೂರ್ವ ಸಂಚಿತ ಫಲ. ಇದರಲ್ಲಿ ತಾಯಿಯಾಗಲಿ ತಂದೆಯಾಗಲಿ ದೋಷಿಗಳಲ್ಲ'' ಎಂದು ಭರತನಿಗೆ ಶ್ರೀರಾಮ ಹೇಳಿದ. ಅಲ್ಲದೇ ಜೀವನದ ನಶ್ವರತೆ ಮತ್ತು ಕ್ಷಣಿಕತೆಗಳ ಕಲ್ಪನೆ ಆತನಿಗೆ ಕೊಟ್ಟ. ಈ ರೀತಿಯಾಗಿ ಅನೇಕ ಬಗೆಯಿಂದ ಶ್ರೀರಾಮನು ತಿಳಿಸಿ ಹೇಳಿದರೂ ಭರತನ ಕಣ್ಣೀರು ತಪ್ಪಲೊಲ್ಲದು. '' ಏನೇ ಆದರೂ ರಾಮಾ ರಾಜ್ಯವನ್ನಾಳಲು ನೀನೆ ಸಮರ್ಥ. ಆದುದರಿಂದ ಅಯೋಧ್ಯೆಗೆ ಹಿಂದಿರುಗು''. ಎಂದು ಮತ್ತೆ ಮತ್ತೆ ಶ್ರೀರಾಮಚಂದ್ರನನ್ನು ಆಗ್ರಹಪಡಿಸುತ್ತಲೇ ಇದ್ದ.

ಭರತನೊಡನೆ ಬಂದಿದ್ದ ಋಷಿಮುನಿಗಳೂ ಸಾಕಷ್ಟು ಒತ್ತಾಯ ಪಡಿಸಿದರೂ ಶ್ರೀರಾಮನು ನಮ್ರತೆಯಿಂದ ತನ್ನ ಅಸಮ್ಮತಿಯನ್ನು ವ್ಯಕ್ತಪಡಿಸಿದ. ಪುನಃ ಭರತನೆಡೆಗೆ ಹೊರಳಿ, '' ಭರತಾ ನಿನಗೆ ಕಡೆಯದಾಗಿ ಇನ್ನೊಮ್ಮೆ ಹೇಳುವೆ - ತಂದೆಯ ಅಪ್ಪಣೆಯಂತೆ ನನಗೆ ವನವಾಸ - ನಿನಗೆ ಸಿಂಹಾಸನ. ಆತನ ಅಪ್ಪಣೆಯನ್ನು ಪಾಲಿಸುವುದು ನಮ್ಮಗಳ

ಕರ್ತವ್ಯ ಧರ್ಮ್ಯ ಉಚಿತವಾದುದು. ಆದುದರಿಂದ ನೀನು ಅಯೋಧ್ಯೆಗೆ ಮರಳಿ ರಾಜ್ಯವನ್ನಾಳು. ಮತ್ತು ನಾನು ಹದಿನಾಲ್ಕು ವರುಷಗಳ ನನ್ನ ವನವಾಸವನ್ನು ಮುಗಿಸಿ ಕೊಂಡು ಲಕ್ಷ್ಮಣ ಸೀತೆಯರೊಡನೆ ಅಯೋಧ್ಯೆಗೆ ಮರಳಿ ಬರುವೆ. ಮತ್ತಿನ್ನೇನು ಹೇಳಲಿ?'' ಎಂದ ಶ್ರೀರಾಮನ ಈ ರೀತಿಯ ನಿರ್ಧಾರದ ಮಾತುಗಳಿಂದ ನಿರಾಶನಾದ ಭರತನಿಗೆ ದುಃಖ ಉಕ್ಕಿ ಬಂತು. ಶ್ರೀರಾಮನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಬೇಡಿಕೊಳ್ಳಲು ಪ್ರಾರಂಭಿಸಿದ.

'' ರಾಮಾ, ತಂದೆ ತಾಯಿಗಳು ಹೋದರು ಭರತನಿಂದು ಅನಾಥನಾದ. ನಿನ್ನ ಅಪ್ಪಣೆಯಂತೆಯೇ ಅಯೋಧ್ಯೆಗೆ ಮರಳುವುದು ಅನಿವಾರ್ಯವಾದಂತಾಯಿತು. ಆದರೆ ಒಂದೇ ಒಂದು ಬೇಡಿಕೆ ನನ್ನದಿದೆ ಕೇಳು. ನಿನ್ನ ಪಾದುಕೆಗಳನ್ನಾದರೂ ಕೊಡು. ಅವುಗಳನ್ನು ತೆಗೆದುಕೊಂಡು ಅಯೋಧ್ಯೆಗೆ ಮರಳುವೆ. ಮತ್ತು ನಿನ್ನ ಪಾದುಕೆಗಳನ್ನು ಸಿಂಹಾಸನದ ಮೇಲಿರಿಸಿ ನಿನ್ನ ಪ್ರತಿನಿಧಿ ಎಂದು ನಾನು ರಾಜ್ಯವನ್ನು ನೋಡಿಕೊಳ್ಳುವೆ.

ರಾಮಾ, ಈ ಅಜ್ಞ ಭರತ ನಿನ್ನಂತೆ ಸ್ವತಂತ್ರವಾಗಿ ರಾಜ್ಯವನ್ನಾಳಲು ಸಮರ್ಥನೇ ಎಂಬುದನ್ನು ವಿಚಾರಿಸಿ ನೋಡು **ಪಕ್ಷಿರಾಜನ ಹಾರಾಟದ ಭರಾಟೆಯನ್ನು ಮಕ್ಷಿಕೆ ಅದೆಂತು ಸಾಧಿಸೀತು ? ಗಜ ಹೊರಬಹುದಾದ ಭಾರವನ್ನು ಅಶ್ವವು ಸಹಿಸೀತೇ ?** ಅದರಂತೆ ರಾಘವನ ರಾಜ್ಯವನ್ನು ಆತನೇ ಆಳಬೇಕಲ್ಲದೇ ಈ ಅಜ್ಞ ಭರತನಿಗೆ ಶಕ್ಯವಾದಿತೇ ? ನಮ್ಮ ರಾಜ್ಯ ವಂಶದ ರೀತಿಗೆ ಅನುಸರಿಸಿ ವಾಸ್ತವಿಕವಾಗಿ ಹಿರಿಯುವನು ಸಿಂಹಾಸನವನ್ನೇರ ಬೇಕೆಂಬುದು ನಿಯಮ. ಆದರೆ ಕಿರಿಯುವನು ಸಿಂಹಾಸನವನ್ನೇರಿ ಹಿರಿಯುವನು ಈ ರೀತಿ ವನವಾಸಿಯಾಗುವುದೇ ? ರಾಮಾ ಇವುಗಳ ಅರ್ಥ ನನಗಾಗಲೊಲ್ಲದು. ಅಯೋಧ್ಯೆ ಯನ್ನು ಬಿಡುವಾಗಲೇ ನಾನು ಈ ಮುನಿಗಳ ವೇಷವನ್ನು ಧರಿಸಿಕೊಂಡೇ ಬಂದಿರುವೆ. ಒಂದು ವೇಳೆ ನೀನು ಅಯೋಧ್ಯೆಗೆ ಮರಳಲು ಒಪ್ಪದಿದ್ದರೆ, ನಿನ್ನೊಡನೆ ನಾನೂ ವನವಾಸಿಯಾಗಿ ಇಲ್ಲಿಯೇ ಉಳಿಯಬೇಕೆಂದೇ ನಿರ್ಧರಿಸಿದ್ದೆ. ಆದರೆ ಬಾಲಕ ನಾನು ರಾಜ್ಯ ಪರಿಪಾಲನದ ಆಜ್ಞೆಯನ್ನು ವಿಧಿಸುವೆಯಲ್ಲ !

ರಾಮಾ, ಇತ್ತ ನಿನ್ನ ಅಪ್ಪಣೆಯನ್ನು ಹೇಗೆ ಮೀರಲಿ- ಅತ್ತ ರಾಜ್ಯ ಕಾರಭಾರವನ್ನ ಹೇಗೆ ನಿರ್ವಹಿಸಲಿ ? ಹೀಗೆ ಇಕ್ಕೆಲರುಗಳಲ್ಲಿ ಸಿಲುಕಿ ಒದ್ದಾಡುತ್ತರುವೆ. ಆದರೂ ನಿನ್ನ ಪಾದುಕೆಗಳನ್ನು ಪಡೆದುಕೊಂಡೊಯ್ದು ದಶರಥರಾಜನ ಆಸನದ ಮೇಲಿರಿಸುವೆ. ಮತ್ತು ಅವೇ ಕೋಸಲ ಶಾಸನದ ರಾಜ್ಯ ಕರ್ತೃಗಳು ಎಂದು ತಿಳಿದು ಆ ನಿನ್ನ ಚರಣ ಚಿನ್ಹಗಳನ್ನು ಪೂಜಿಸಿ ಸಾರ್ಥಕತೆಯನ್ನು ಸಾಧಿಸಿಕೊಳ್ಳುವೆ. ರಾಮನಿಲ್ಲದ ಆ ಮಂದಿರದಲ್ಲಿ ಆತನ ಚರಣ ಚಿನ್ಹಗಳಾದರೂ ಇರಲಿ. ನಾನು ನಗರ ಸೀಮೆಯನ್ನು ದಾಟಿ ಎಲ್ಲಿಯಾದರೂ ವಾಸಿಸುವೆ.

ಸಂಧ್ಯಾ ಸಮಯಕ್ಕೆ ಸೂರ್ಯನ ಕಿರಣಗಳೇ ನನಗೆ ಜ್ಯೋತಿ.

ನೀವು ಇಲ್ಲಿಂದ ಮರಳಿ ಅಯೋಧ್ಯೆಗೆ ಬರುವವರೆಗೆ ಸಂವತ್ಸರಗಳನ್ನು ಎಣಿಸುತ್ತ ನಿಮ್ಮ ದಾರಿಯನ್ನು ಕಾಯುತ್ತ ರಾಜ್ಯವನ್ನು ನೋಡಿಕೊಂಡು ಬರುವೆ. ತೀರ್ಥದಲ್ಲಿಯ ಕಮಲಪತ್ರದಂತೆ ನಿರ್ಲಿಪ್ತನಾಗಿ ರಾಜ್ಯದಲ್ಲಿ ಬಾಳುವೆ. ರಾಮಾ ಒಂದು ವೇಳೆ ನಿನ್ನ ಚರಣಗಳನ್ನು ನಿಯಮಿತ ಅವಧಿಗೆ ಅಯೋಧ್ಯೆಯಲ್ಲಿ ನಾನು ಕಾಣದಿದ್ದರೆ, ಆ ಕ್ಷಣವೇ ನನ್ನ ಈ ದೇಹವನ್ನು ತುಚ್ಛವೆಂದು ಬಗೆದು ಇದನ್ನು ಅಗ್ನಿಗೆ ಆಹುತಿ ಕೊಡುವೆ. ಇದು ನನ್ನ ಪ್ರತಿಜ್ಞೆ. ಇದೋ ಇದಕ್ಕಾಗಿ ರಾಮಾ ನಿನ್ನ ಪಾದಗಳ ಹುಡಿಯನ್ನು ನನ್ನ ಹಣೆಯಲ್ಲಿ ಧರಿಸಿಕೊಳ್ಳುವುದೇ ಸಾಕ್ಷಿ '' ಎಂದು ನುಡಿಯುತ್ತ ಭರತ ರಾಮನ ಚರಣ ರಜವನ್ನು ತನ್ನ ಹಣೆಯ ಮೇಲೆ ಧರಿಸಿಕೊಂಡ.

## ಅಧ್ಯಾಯ ೨೭
## ನೀನಾರು ಎಲ್ಲಿಯ ರಾಜಕುಮಾರ ನೀನು ?(ಶೂರ್ಪನಖಿ)

ಈ ರೀತಿಯ ಕಳವಳಗೊಳಿಸುವ ತನ್ನ ಮಾತುಗಳಿಂದ ಭರತ ಪಾದುಕೆಗಳ ಬೇಡಿಕೆಯನ್ನು ಇರಿಸಿದಾಗ ಆತನಿಗೆ ಇಲ್ಲೆನ್ನಲಾಗಲಿಲ್ಲ. ಅನಿವಾರ್ಯವಾಗಿ ತನ್ನ ಪಾದುಕೆಗಳನ್ನು ಭರತನಿಗಿತ್ತ. ಶ್ರೀರಾಮನ ಚರಣಧೂಳಿಯಿಂದ ಪಾವನಗೊಂಡ ಆ ಸುವರ್ಣ ಮಂಡಿತ ಪಾದುಕೆಗಳನ್ನು ಭರತ ಆನೆಯ ಅಂಬಾರಿಯಲ್ಲಿರಿಸಿಕೊಂಡು ಮೆರೆಸುತ್ತ ಬಹು ವೈಭವದಿಂದ ಅವುಗಳನ್ನು ಅಯೋಧ್ಯೆಗೆ ಕೊಂಡೊಯ್ದ. ಅನಂತರನ ಋಷಿಮುನಿಗಳಿಂದ ಆ ಪಾದುಕೆಗಳಿಗೇ ರಾಜ್ಯಾಭಿಷೇಕವನ್ನು ನೇರವೇರಿಸಿದ. ಮತ್ತು ತಾನು ನಗರದ ಸೀಮೆಯ ಹೊರಗೆ ಒಂದು ಕುಟೀರವನ್ನು ಕಟ್ಟಿಸಿಕೊಂಡು ಅಯೋಧ್ಯೆಯ ರಾಜ್ಯಕಾರಭಾರವನ್ನು ನೋಡಲು ಪ್ರಾರಂಭಿಸಿದ.

ಇತ್ತ ಶ್ರೀರಾಮಾದಿಗಳು ಚಿತ್ರಕೂಟದಲ್ಲಿ ಪ್ರವಾಸ ಮಾಡುತ್ತ ದಕ್ಷಿಣಕ್ಕೆ ಸಾಗಿದರು. ದಾರಿಯಲ್ಲಿ ಅಣ್ಣತಮ್ಮಂದಿರು ಸೇರಿ ವಿರಾಧನೆಂಬ ರಾಕ್ಷಸನನ್ನು ಸಂಹರಿಸಿದರು. ನಂತರ ಶರಭಾಶ್ರಮಕ್ಕೆ ಹೋಗಿ ಸ್ವರ್ಗಲೋಕ ಗಾಮಿನಿಯಾದ ಮಹಾತ್ಮಾ ಶರಭ ಋಷಿಯ ದರ್ಶನವನ್ನು ಪಡೆದರು. ಶರಭಂಗಾಶ್ರಮದಲ್ಲಿ ವಾಸಿಸುತ್ತಿದ್ದ ಋಷಿ ಜನರು '' ರಾಕ್ಷಸರ ಕಾರಣದಿಂದಾಗಿ ಅನಾನ್ವಿತ ಕಷ್ಟ ಪರಂಪರೆಗಳಿಗೆ ನಾವು ಗುರಿಯಾಗುವೆವು. ಸಮರ್ಥ ರಾಜರಾದ ತಾವು ಧರ್ಮ ರಕ್ಷಣೆ ಮಾಡಬೇಕು '' ಎಂದು ನಮ್ರರಾಗಿ ವಿನಂತಿ ಮಾಡಿಕೊಂಡರು. ಅವರಿಗೆ ಅಭಯವನ್ನಿತ್ತು ಶ್ರೀರಾಮ '' ಮುನಿವರ್ಯರೇ ತಪಸ್ವಿಗಳ ಚಿರ ಶತ್ರುಗಳಾದ ಈ ರಾಕ್ಷಸರನ್ನು ನಿರ್ನಾಮ ಮಾಡುವುದು ನಮ್ಮ ಕರ್ತವ್ಯ ತಾವು ನಿಶ್ಚಿಂತರಾಗಿ

ಉಳಿಯಿರಿ '' ಎಂದು ಧೈರ್ಯವನ್ನಿತ್ತು ಮುನ್ನಡೆದರು.

ಈ ರೀತಿಯಾಗಿ ಋಷಿಗಳಿಗೆ ಅಭಯವಚನವನ್ನಿತ್ತು ಶ್ರೀರಾಮನು ಲಕ್ಷ್ಮಣಸೀತೆಯರೊಂದಿಗೆ ಸಂಚಾರ ಮಾಡಹತ್ತಿದ. ಮತ್ತು ಸುತೀಷ್ಣಾಶ್ರಮ ಪಂಚಾಪ್ಸರ ಸರೋವರ ಈ ಭಾಗಗಳಲ್ಲಿ ಅವರು ಹತ್ತು ವರ್ಷಗಳವರೆಗೆ ಆನಂದದಿಂದ ಸಂಚಾರ ಮಾಡಿದರು. ಅನಂತರ ಸುತೀಷ್ಣ ಮುನಿಗಳ ಆಜ್ಞೆಯಂತೆ ಅವರು ಅಗಸ್ತ್ಯಾಶ್ರಮದ ಮಾರ್ಗವನ್ನು ಹಿಡಿದರು. ಸುತೀಷ್ಣ ಮತ್ತು ಅಗಸ್ತ್ಯ ಮಹರ್ಷಿಗಳು ಶ್ರೀರಾಮಲಕ್ಷ್ಮಣರಿಗೆ ದಿವ್ಯಾಯುಧಗಳನ್ನು ಅರ್ಪಿಸಿದರು.

ಹತ್ತು ವರುಷಗಳ ನಂತರ ಅವರು ಪಂಚವಟಿಗೆ ಬಂದು ತಲುಪಿದರು. ಆ ಮನೋಹರವಾದ ವನ ಪ್ರದೇಶದಲ್ಲಿ ಅವರ ಕುಟೀರವು ಅತ್ಯಂತ ಶೋಭಾಯ ಮಾನವಾಗಿತ್ತು. ಇಲ್ಲಿರುವಾಗ ಒಮ್ಮೆ ಪರ್ಣಶಾಲೆಯ ಮುಂಭಾಗದಲ್ಲಿ ಶ್ರೀರಾಮನು ಲಕ್ಷ್ಮಣ ಸೀತೆಯರೊಡನೆ ಒಳ್ಳೇ ವಿನೋದದಲ್ಲಿ ಕುಳಿತಿದ್ದ ಸಮಯವದು. ಹಾಗೆ ಆದೇ ದಾರಿಯಿಂದ ಸಾಗಿದ್ದ ರಾಕ್ಷಿಸಿ ಶೂರ್ಪನಖಿಗೆ ನಯನ ಮನೋಹರವಾದ ಶ್ರೀರಾಮ ಕಂಡ. ಇಂತಹ ಸುಂದರ ಮನೋಹರ ಶ್ಯಾಮಲ ಮೂರ್ತಿಯನ್ನು ಅವಳೆಂದೂ ಈ ವರೆಗೂ ಕಂಡಿರಲಿಲ್ಲ. ಮುಂದೆ ಹೆಜ್ಜೆ ಇಡಲು ಆಗಲೊಲ್ಲದು ಅವಳಿಗೆ. ಶ್ರೀರಾಮನಿಗೆ ಮನಸೋತಳವಳು. ಆಗ ಮಾಯಾವೀ ರಾಕ್ಷಸಿಯು ತತ್ಕ್ಷಣ ಒಬ್ಬ ಸುಂದರ ಯುವತಿ ಯಾಗಿ ಆಶ್ರಮದ ಅಂಗಳವನ್ನು ಪ್ರವೇಶಸಿದಳು, ಮತ್ತು ಶ್ರೀರಾಮನಲ್ಲಿ ಅನುರಕ್ತಳಾದಂತೆ ಅಂಗವಿಕ್ಷೇಪ ಮಾಡುತ್ತ ಮದೋನ್ಮತ್ತ ನಯನಗಳಿಂದ ಆತನನ್ನು ನೋಡತೊಡಗಿದಳು. ಶ್ರೀರಾಮ ಸುಮ್ಮನಿದ್ದುದನ್ನು ಗಮನಿಸಿ ಇನ್ನೂ ತುಸು ಮುಂದೆ ಬಂದು ಆತನೊಡನೆ ಒಳ್ಳೇ ಮೃದು ಮಂಜುಳ ಸ್ವರದಲ್ಲಿ ಮಾತನಾಡ ಹತ್ತಿದಳು.

''ನೀನಾರು ಯಾವ ದೇಶದ ರಾಜಕುಮಾರ ನೀನು ? ಅದೆಷ್ಟು ಸುಂದರ ನೀನು ! ಶ್ಯಾಮನೇ ನಾನು ನಿನಗೆ ಮನ ಸೋತಿರುವೆ. ಈ ದೇಹವನ್ನೇ ನಿನಗೆ ಅರ್ಪಿಸಬೇಕೆನ್ನುವೆ. ನೀನಾರೆಂಬುದು ತಿಳಿಯಲೊಲ್ಲದು ನನಗೆ, ಯಾಕೆಂದರೆ ನಿನ್ನ ಸ್ವರೂಪದಲ್ಲಿ ರಾಜಲಕ್ಷಣಗಳು ತುಂಬಿವೆಯಾದರೂ ರುದ್ರಾಕ್ಷಿಗಳು ಕರ್ಣಭೂಷಣಗಳಾಗಿರುವವಲ್ಲ ! ಯೋಗಿ ಅನ್ನಲಾ ನಿನಗೆ ? ನಿನ್ನ ಸುತ್ತಲೂ ಈ ಪರಿವಾರ ಹರಡಿದೆ ! ಹಾಗಾದರೆ ನೀನಾರು ಹೇಳಲಾರೆಯಾ? ಯಾವ ಕಾರಣದಿಂದ ಈ ವನಕ್ಕೆ ಬಂದುದಾಗಿದೆ? ಹೀಗೇಕೆ ವಿನೋದದಿಂದ ನಗುವಿರಿ ? ಇಲ್ಲಿ ನಮ್ಮದು ಅನಿರ್ಬಂಧ ಅಧಿಕಾರವಿದೆ ಎಂಬುದು ಗೊತ್ತಿಲ್ಲವೇ ನಿಮಗೆ ? ''

ನೀನಾರೆಂಬುದು ಈ ವರೆಗೂ ನನಗೆ ತಿಳಿಯಲೊಲ್ಲದು. ಆದರೂ

ನಾನಾರೆಂಬುದು ಗೊತ್ತೇ ನಿಮಗೆ ? ರಾವಣನ ಭಗಿನಿ ಶೂರ್ಪಣಖಿ ನಾ. ಈ ವನಕ್ಕೆಲ್ಲ ನಾನೇ ಸ್ವಾಮಿನಿ. ಅಗಣಿತ ರೂಪಗಳನ್ನು ಧರಿಸುತ್ತ ವನದಿಂದ ವನಕ್ಕೆ ಸಂಚಾರ ಮಾಡುತ್ತಿರುತ್ತೇನೆ. ಹಾಗೇ ಸಂಚಾರ ಮಾಡುತ್ತಿದ್ದಾಗ ನಿನ್ನ ಈ ಮನೋಹರ ರೂಪ ನನ್ನ ಕಣ್ಣಿಗೆ ಬಿತ್ತು. ಈ ನಿನ್ನ ರೂಪಕ್ಕೆ ಮೋಹಿಸಿ ಸುಂದರ ಯುವತಿಯಾಗಿ ನಿನ್ನೆದುರು ಈಗ ನಿಂತಿರುವೆ ನೋಡು. ನನಗೆ ವಯ ಹದಿನಾರು ಮಾತ್ರ. ಮಧುರ ಭಾಷಿಣಿ. ನಿನ್ನನ್ನು ಕಾಣತ್ತಲೇ ಮನದಲ್ಲಿ ಮನ್ಮಥನು ಜಾಗೃತನಾಗಿ ಹುಂಕಾರ ಕೊಡುತ್ತಿದ್ದಾನೆ. ಬಾ ಸ್ವೀಕರಿಸು ನನ್ನನ್ನು ನಿನ್ನ ಮಿನುಗುವ ಚೆಂದುಟಿಗಳ ಸವಿಯನ್ನು ಏಕಾಂತದಲ್ಲಿ ಸವಿಯಬೇಕೆನ್ನುವೆ. ಈಗಾದರೂ ನೀನು ಯಾರೆಂಬುದನ್ನು ಹೇಳು '' ಎಂದಳು ಶೂರ್ಪನಖಿ. ಆಗ ಶ್ರೀರಾಮ ''ಶೂರ್ಪನಖೀ ನಾನು ಅಯೋಧ್ಯಾಪತಿ ದಶರಥರಾಜನ ಮಗ ರಾಮ ನಾನು '' ಎಂದ.

ಆ ದಶರಥರಾಜನ ಮಗ ರಾಮನೇ ನೀನು ! ರಾಜಾ ದಶರಥನನ್ನು ನಾನರಿಯೇ. ಆದರೆ ಅವನ ಸುತನಾದ ನೀನು ಇಂದು ನನ್ನ ಮನವನ್ನೆಲ್ಲ ಆವರಿಸಿರುವೆ. ನನ್ನ ಪ್ರಾಣನಾಥನಾಗು ರಾಮಾ, ಸೌಖ್ಯದಿಂದ ಸಂಸಾರ ಮಾಡೋಣ. ಈ ಕುರೂಪಿ ಕೃಶಾಂಗೀ ನಿನ್ನ ಅರ್ಧಾಂಗಿನಿಯೇ ? ನಿನ್ನ ಅರ್ಧಾಂಗಿನಿಯಾಗಲು ಇವಳೆಂತು ಶೋಭಿಸುವಳು ? ನಿನ್ನ ಸಮೀಪದಲ್ಲಿ ಕುಳಿತ ಇವಳನ್ನು ನೂಕಾಚೆಗೆ. ಕ್ಷಣದಲ್ಲಿ ಅವಳನ್ನು ಸಂಹರಿಸಿಬಿಡುವೆ. ಅನಂತರ ಅವಿರತವಾಗಿ ನನ್ನ ಸಂಗದಲ್ಲಿದ್ದು ನಿನ್ನ ಏಕಪತ್ನೀ ವ್ರತವನ್ನು ಪಾಲಿಸು ಬೇಕಾದರೆ. ರಾಮಾ, ನಿನ್ನನ್ನು ಆಲಂಗಿಸಬೇಕೆನ್ನುವ ಆಸೆ ತನುಮನಗಳಲ್ಲಿ ಅವಿರತವಾಗಿ ಹೊರಹೊಮ್ಮುತ್ತಿದೆ. ಇದನ್ನು ನಾನು ತಡೆಯಲಾರೆ ಬಾ ರಾಮಾ '' ಎಂದು ಶೂರ್ಪನಖಿ ಇನ್ನೂ ತುಸು ರಾಮನೆಡೆಗೆ ಸರಿದಳು.

## ಅಧ್ಯಾಯ ೨೮

## ಸೇಡು ತೀರಿಸಿಕೋ ಲಂಕಾಪತಿ (ಶೂರ್ಪನಖಿ)

ಈ ರೀತಿಯಾಗಿ ಶ್ರೀರಾಮನನ್ನು ಕಂಡು ಮೊಹಿಸಿ ಸವಿಮಾತುಗಳನ್ನು ಆಡುತ್ತ ಆಡುತ್ತ ಮತ್ತೆ ಮತ್ತೆ ಪ್ರಶ್ನಿಸುತ್ತ ತೀರಾ ಆತನ ಬಳಿಸಾರಿ ಬಂದಳು. ಆಗ ಶ್ರೀರಾಮನು ವಿನೋದದಿಂದ ''ಶೂರ್ಪನಖೀ, ನಾನು ವಿವಾಹಿತ. ಇವಳೇ ನನ್ನ ಹೆಂಡತಿ. ಆ ನನ್ನ ತಮ್ಮ ಲಕ್ಷ್ಮಣ ಮಾತ್ರ ಇನ್ನೂ ಅವಿವಾಹಿತ. ನಿನಗೇನಾದರೂ ಆತನು ಒಲಿಯುವನೋ ಹೇಗೆ ಪ್ರಯತ್ನ ಮಾಡಿ ನೋಡು ಬೇಕಾದರೆ '' ಎಂದ. ಆಗ ಶೂರ್ಪನಖಿ ಸಾರಿ ಲಕ್ಷ್ಮಣನ

ಕಡೆಗೆ ಹೊರಳಿತು. ಆಗ ನಗುತ್ತಲೇ ಲಕ್ಷ್ಮಣ '' ಶೂರ್ಪನಖೀ, ನಾನು ಅಣ್ಣ ಶ್ರೀರಾಮನ ಚರಣ ದಾಸ, ನನ್ನ ಹೆಂಡತಿ ಆಗುವುದೆಂದಂರೆ ದಾಸನ ದಾಸಿ ಆದಂತೆ ನೀನು, ನಿನಗೊಂದು ಯುಕ್ತಿ ಸೂಚಿಸುವೆ. ಆ ರೀತಿ ಮಾಡು. ಶ್ರೀರಾಮನ ಚಿಕ್ಕ ಹೆಂಡತಿಯಾಗು. ಬಹಳ ಆದರೆ ಆತ ತನ್ನ ಮೊದಲಿನ ಹೆಂಡತಿಯನ್ನು ಬಿಟ್ಟಾನು ಆದಕ್ಕೂ ಹೆಚ್ಚಿಗೇನಾದೀತು ? '' ಎಂದ ಲಕ್ಷ್ಮಣ.

ಶೂರ್ಪನಖಿಗೆ ಲಕ್ಷ್ಮಣನ ಮಾತಿನಲ್ಲಿಯ ವಿನೋದದ ಅರ್ಥವಾಗಲಿಲ್ಲ. ಅವನ ಸಲಹೆಯಂತೆ ಅವಳು ಪುನಃ ಶ್ರೀರಾಮನ ಹತ್ತಿರ ಬಂದು ಕಾಮಾಂಧಳಾಗಿ '' ರಾಮಾ ನೀನು ಸರ್ವಸ್ವವಾಗಿಯೂ ನನ್ನವನಾಗಿಯೇ ಉಳಿಯಬೇಕೆಂದು ನಿನ್ನ ಸಮಕ್ಷಮದಲ್ಲಿಯೇ ನಿನ್ನ ಹೆಂಡತಿಯನ್ನು ಭಕ್ಷಿಸಿಬಿಡುವೆ '' ಎಂದು ಅವಳು ಜಾನಕಿಯ ಮೇಲೆ ಏರಿ ಹೋದಳು. ಆಗ ಮಾತ್ರ ಶ್ರೀರಾಮನಿಗೆ ಸಹಿಸಲಾಗಲಿಲ್ಲ. '' ಲಕ್ಷ್ಮಣಾ ಈ ರಾಕ್ಷಸಿಯನ್ನು ವಿರೂಪ ಗೊಳಿಸಿ ಬಿಡು, ಹೋಗುತ್ತಾಳೆ'' ಎಂದು ಆಜ್ಞಾಪಿಸಿದ.

ಅಣ್ಣನಾಜ್ಞೆಯಂತೆ ಲಕ್ಷ್ಮಣನು ತತ್‌ಕ್ಷಣ ಖಡ್ಗವನ್ನು ಹಿರಿದು ಶೂರ್ಪಣಖಿಯ ಮೂಗು ಕಿವಿಗಳನ್ನು ಕತ್ತರಿಸಿಬಿಟ್ಟ. ಆಗ ರಾಕ್ಷಸಿಯು ಭಯಂಕರವಾಗಿ ಆಕ್ರೋಶ ಮಾಡುತ್ತ ಶಪಿಸುತ್ತ ವನದಲ್ಲೆಲ್ಲಾ ಓಡಾಡಿದಳು. ತನ್ನ ಬಂಧುಗಳಾದ ಖರ ಮತ್ತು ದೂಷಣ ಇವರ ಹತ್ತಿರ ಹೋಗಿ ತನ್ನ ದುಃಖವನ್ನೆಲ್ಲಾ ತೋಡಿಕೊಂಡಳು. ಇದನ್ನ ಕೇಳಿ ಸಿಡಿದೆದ್ದು ಆ ಬಂಧುಗಳೀರ್ವರು ತಮ್ಮ ರಾಕ್ಷಸ ಸೈನ್ಯ ಸಮೇತ ದಂಡೆತ್ತಿ ಬಂದು ಶ್ರೀರಾಮನೊಡನೆ ಹೋರಾಡಲು ಧಾವಿಸಿದರು. ಆದರೆ ಮಹಾಧನುರ್ಧರ ಶ್ರೀರಾಮನು ಕ್ಷಣಾರ್ಧದಲ್ಲಿ ಅವರೀರ್ವರನ್ನು ಅವರ ಸೈನ್ಯ ಸಮೇತ ಸಂಹರಿಸಿದ. ಒಬ್ಬನೇ ಒಬ್ಬ ಶ್ರೀರಾಮ ಖರ ದೂಷಣ ತ್ರಿಶರರನ್ನಲ್ಲದೇ ಹದಿನಾಲ್ಕು ಸಾವಿರ ಸೈನ್ಯವನ್ನು ವಧೆ ಮಾಡಿದ್ದನ್ನು ಕಣ್ಣಾರೆ ಕಂಡ ಆ ಶೂರ್ಪನಖಿಗೆ ದಂಗು ಬಡಿದು ಬೇರಿನ್ಯಾವ ಉಪಾಯವನ್ನು ಕಾಣದೆ ಅಣ್ಣ ರಾವಣನನ್ನು ಕಾಣಲೆಂದು ನೇರವಾಗಿ ಲಂಕೆಗೆ ಧಾವಿಸಿದಳು. ಸರ್ವ ಅಮಾತ್ಯರೊಂದಿಗೆ ನಡೆದ ರಾವಣನ ಸಭೆಯಲ್ಲಿ ಮೂಗು, ಕಿವಿಗಳನ್ನು ಕೊಯಿಸಿಕೊಂಡು ರಕ್ತ ಸೋರಿಸುತ್ತ ವಿದ್ರೂಪಳಾದ ಈ ರಾಕ್ಷಸಿಯ ಪ್ರವೇಶದಿಂದ ಎಲ್ಲರೂ ಸಖೇದಾಶ್ಚರ್ಯದಿಂದ ಒಮ್ಮೇಲೇ ಏನಿದೇನೆಂದರು ! ಆಗ ಸರ್ವರ ಸಮ್ಮುಖದಲ್ಲಿ ದುಃಖಿಸುತ್ತ ಹೇಳಲಾರಂಭಿಸಿದಳು.

'' ಅಣ್ಣಾ ಲಂಕಾಧಿಪತಿ ರಾವಣನೇ, ನಿನ್ನ ತಂಗಿಯಾದ ಈ ಶೂರ್ಪನಖಿಯ ಅವಸ್ಥೆಯನ್ನು ನೋಡಿದೆಯಾ ? ಈ ರೀತಿಯಾಗಿ ನನ್ನನ್ನು ವಿರೂಪ ಮಾಡಿದವ ಯಾರು ಗೊತ್ತೇ ನಿನಗೆ ? ದಶರಥರಾಜನ ಮಗ ಆ ರಾಮನ ಕೃತ್ಯವಿದು, ನೋಡವನ ಒಂದು ಕೈ. ಸೇಡು ಸಾಧಿಸು ಅಣ್ಣಾ, ಏನು ನಿನ್ನ ರಾಜ್ಯದಾಡಳಿತವಿದು ? ಎಂತಹ ಜನಪಾಲ ನೀನು ?

ಆ ರಾಮನು ನಮ್ಮ ದಂಡಕವನವನ್ನು ಜಯಿಸಿ ತನ್ನ ಸ್ವಾಧೀನ ಮಾಡಿಕೊಂಡ ! ಎಲ್ಲಿರುವಿ ನೀನಿನ್ನು ? ಅಣ್ಣಾ ಸತ್ತಾಂಧನಾದ ನಿನಗೆ ನಿನ್ನ ಕರ್ತವ್ಯದ ಸ್ಮೃತಿಯಾದರೂ ಇರುವುದೇ ?

ನಿನಗಿದ್ದ ಆ ಇಪ್ಪತ್ತು ಕಣ್ಣುಗಳನ್ನೂ ತೆರೆದು ಈ ನಿನ್ನ ತಂಗಿ ಶೂರ್ಪನಖಿ ದುರ್ದಸೆ ನೋಡೊಮ್ಮೆ. ಆ ರಾಮನ ಪರಾಕ್ರಮದಿಂದ ಹತ್ತು ದಿಕ್ಕುಗಳೂ ಕಂಪಿಸತೊಡಗಿವೆ. ನಿನ್ನ ಗುಪ್ತಚಾರರೆಲ್ಲಿ ? ಅವರು ಬಂದು ಈ ವಾರ್ತೆಯನ್ನು ನಿನಗೆ ಹೇಗೆ ಹೇಳಲಿಲ್ಲ? ಜನಸ್ಥಾನದಲ್ಲಿ ಕೋಲಾಹಲವೆದ್ದಿದೆ. ಖರ ದೂಷಣ ತ್ರಿಶರರಲ್ಲದೇ ಹದಿನಾಲ್ಕು ಸಾವಿರ ರಾಕ್ಷಸರು ಅಳಿದರು. ನಿನಗಿದು ಭೂಷಣವೇ ಅಣ್ಣಾ ರಾವಣಾ ? ಆ ಜನಸ್ಥಾನದಲ್ಲಿ ಯತಿ ರಾಮನೆಂದು ದೇವರಂತೆ ಪೂಜ್ಯನೆನಿಸಿದ್ದಾನೆ. ನಿನ್ನ ಸಚಿವರೊಡನೆ ನೀನಿಲ್ಲಿ ಕೈಜೋಡಿಸಿ ಕುಳಿತಿರುವೆ. ಆದರೆ ನಿನ್ನದೇ ರಾಜ್ಯದಲ್ಲಿ ಆ ನರ ನಿನಗಿಂತ ಪೂಜ್ಯನಾದ! ಇನ್ನೇನಾಗಬೇಕು? ಎಚ್ಚರವಿದೆಯೋ ನಿನಗೆ ? ನಾಳೆಯೋ ಆತನ ಕೀರ್ತಿ ನಿನ್ನ ಸಿಂಹಾಸನವನ್ನೇ ಸುಟ್ಟು ಹಾಕೀತು ಎಚ್ಚರಿಕೆ.

ಅಣ್ಣಾ ನಿನ್ನ ಕಾರ್ಯವನ್ನು ನಾನೆಂತು ಬಣ್ಣಿಸಲಿ ? ಸುದರ್ಶನಕ್ಕೆ ನಿನ್ನ ಎದೆಯನ್ನೊಡ್ಡಿದ ಎದೆಗಾರ ನೀನು ! ವ್ಯರ್ಥವಾಗಿ ದೇವರನ್ನು ಮರ್ದಿಸಿ ಶೌರ್ಯದಿಂದ ರಜತಾದ್ರಿ ಪರ್ವತವನ್ನು ಎತ್ತಿದ್ದು ನೀನೇ ಅಲ್ಲವೇ ? ನೀನೇ ಏನು ಆ ಧರ್ಮೋಚ್ಛೇದಕ ಅಜಿಂಕ್ಯ ಸೇನಾಪತಿ? ಅಣ್ಣಾ ನೀನೇ ಅಲ್ಲವೇನೋ ಕುಬೇರನ ಪುಷ್ಪಕ ವಿಮಾನವನ್ನು ಗೆದ್ದು ಮನೆಗೊಯ್ದವ ? ತಕ್ಷಕ ನೃಪ ಸುಂದರಿಯರನ್ನು ವರಿಸಿದವ ನೀನೇ ಅಲ್ಲವೇನಣ್ಣಾ ? ಮೃತ್ಯುವಿನ ಭಯವೇ ಇಲ್ಲದವ ನೀನೇ ಅಲ್ಲವೇ ?.

ಅಣ್ಣಾ ಕೇಳಿಲ್ಲಿ ಹೇಳುತ್ತೇನೆ – ಆ ರಾಮನ ಕಥೆ. ಬಾಣ ಬಿಡುವಾಗ ಅವನ ಕರಗಳಲ್ಲಿ ವಿದ್ಯುಲ್ಲತೆ ಸಮ ಮಿನುಗೇನು ! ಆತನ ಶಸ್ತ್ರ ನಿಪುಣತೆ ಕಂಡು ಅವನ ಗುಂಗು ಹಿಡಿಯಿತು ನನ್ನ ಈ ಮನಕ್ಕೆ. ಏನು ರೂಪವಂತನವ! ಆ ಶಾಮಲ! ಇನ್ನು ಅವನ ಹೆಂಡತಿ ಜನಕರಾಜನ ಮಗಳು ರತಿಗಿಂತ ಸುಂದರಳವಳು. ನಿನಗೆ ಒಪ್ಪುವಂತಹ ಮೋಹಕ ಯುವತಿ ಆಕೆ. ಆದುದರಿಂದ ನಿನಗಾಗಿ ಅವಳನ್ನು ಓಡಿಸಿಕೊಂಡು ಬರಬೇಕೆಂದು ಆ ಪರ್ಣಕುಟಿಗೆ ಹೋದವಳು ನಾನು. ಇಲ್ಲದಿದ್ದರೆ ನನ್ನದೇನಿತ್ತು ಅಲ್ಲಿ ಕಾರ್ಯ ? ಆದರೆ ಆತ ಈ ರೀತಿಯಾಗಿ ನನ್ನ ಮೂಗು ಕಿವಿಗಳನ್ನ ಕೊಯ್ದು ವಿರೂಪ ಮಾಡಿ ಅಪಹಾಸ್ಯಕ್ಕೆ ಗುರಿಮಾಡಿದ ಅಣ್ಣಾ !

ಅಣ್ಣಾ ಇನ್ನೂ ಕೂಡುವೆಯಾ ? ಏನು ನೋಡುವಿ ? ಬೇಗನೆ ಹೋಗಿ ಆ ಇಬ್ಬರು ಅಣ್ಣ ತಮ್ಮಂದಿರನ್ನು ತುಂಡರಿಸಿ ಬಾ. ನಾನು ವಿದ್ರೂಪವಾದುದನ್ನು ಕಂಡು ಆ ಜನಕ ಕನ್ನೆ ನಕ್ಕಳು ತಿಳಿಯಿತೆ ? ಹರಣ ಮಾಡಿ ತಾ ಅವಳನ್ನು'' ಎಂದು ಶೂರ್ಪನಖಿ ಅಣ್ಣ ರಾವಣನನ್ನು

ಎಚ್ಚರಿಗೊಳಿಸಲು ಪ್ರಯತ್ನ ಮಾಡಿದಳು.

# ಅಧ್ಯಾಯ ೨೯

## " ಆ ಸುಂದರವಾದ ಚಿಗರೆಯನ್ನು ತಂದು ಕೊಡು ನನಗೆ "

## (ಸೀತಾದೇವಿ)

ಈ ರೀತಿಯ ಶೂರ್ಪನಖಿಯ ಆರ್ಭಟದಿಂದ ಅವಳ ಎರಡು ವಿಚಾರಗಳು ರಾವಣನ ತಲೆಯಲ್ಲಿ ಪೂರ್ಣವಾಗಿ ಬಿಂಬಿಸಿದವು. ಮೊದಲನೆಯದು ಸೀತೆ ರತಿಗಿಂತ ಸುಂದರಳು ಸರ್ವಥಾ ನನಗೇ ಒಪ್ಪುವಂತಹವಳು. ಎರಡನೆಯದು ಅವಳನ್ನು ಸುಲಭವಾಗಿ ಹರಣಮಾಡಿ ತರಬಹುದು. ಈ ಎರಡು ವಿಚಾರಗಳಿಂದ ತುಂಬಾ ಚೋದಿತನಾದ ದಶಾನನ ರಾವಣ, ರಾಮನ ಸಂಗಡ ಯುದ್ಧ ಮಾಡಿ ಸೀತಾ ಹರಣದ ಉದ್ಯೋಗಕ್ಕೆ ಹತ್ತಿದ. ಇದಕ್ಕಾಗಿ ಆತ ಮಾರೀಚನ ನೆರವು ಬೇಡಿಕೊಂಡ. ಮಾರೀಚನಿಗೆ ಶ್ರೀರಾಮನ ಪರಾಕ್ರಮದ ಪೂರ್ಣ ಅರಿವಿತ್ತು. ಆದುದರಿಂದ ''ರಾವಣಾ, ಶ್ರೀರಾಮ ಮಹಾಪರಾಕ್ರಮಿ ಆತ ಅವನ ಸಂಗಡ ಯುದ್ಧಮಾಡಬೇಕೆಂಬ ಈ ನಿನ್ನ ವಿಚಾರ ನಮ್ಮೆಲ್ಲರ ಸರ್ವನಾಶಕ್ಕೆ ಕಾರಣವಾದೀತು ಎಚ್ಚರಿಕೆ. ಈ ರೀತಿಯಾಗಿ ಒಬ್ಬ ಪರಸ್ತ್ರೀಯಳನ್ನು ಹರಣ ಮಾಡುವಂತಹ ಪಾಪದ ಕೆಲಸಕ್ಕೆ ಕೈಹಾಕಬೇಡ . ಈ ಹವ್ಯಾಸವನ್ನು ಬಿಡು ಎಂದು ನಾನು ಹೇಳುತ್ತೇನೆ.'' ಹೀಗೆ ಮಾರೀಚ ರಾವಣಾನನ್ನು ಈ ದುಷ್ಟ ವಿಚಾರದಿಂದ ಪರಾವೃತ್ತಗೊಳಿಸಲು ಪ್ರಯತ್ನ ಮಾಡಿದ . ಆದರೆ ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ.

ಯಾವ ರೀತಿಯಂದ ಈ ಕಾರ್ಯಸಾಧಿಸಬೇಕಾಯಿತು ಎಂಬ ವಿಚಾರದಲ್ಲಿ ಮಗ್ನನಾದ ರಾವಣನಿಗೆ, ಸರಳವಾದ ಮಾರ್ಗದಿಂದ ಸುಲಭವಾಗಿ ಈ ಕಾರ್ಯ ಕೈಗೂಡಿತೆಂದು ಆತನಿಗೆ ಅನಿಸಲಿಲ್ಲ, ಹಾಗಾದರೆ ಕಪಟದಿಂದ ಈ ಕಾರ್ಯ ಕೈಗೂಡಲು ಸಾಧ್ಯವಾದರೆ ನೋಡಬೇಕೆಂದು ಬಯಸಿ, ರಾವಣ ಒಂದು ಯುಕ್ತಿ ಹುಡುಕಿದ. ಮರೀಚನಿಗೆ ಒಂದು ಸುಂದರ ಮೃಗವಾಗಿ ಶ್ರೀರಾಮನ ಪರ್ಣಕುಟಿಯದರು ಸುಳಿದಾಡಲು ಹೇಳಿದ, ಮತ್ತು ತಾನು ಒಬ್ಬ ಯಾಚಕ ಯತಿಯ ವೇಷವನ್ನು ಹಾಕಿಕೊಂಡು ಅವನ ಹಿಂದೆಯೇ ಪಂಚವಟಿಗೆ ತೆರಳಿದ.

ಮಾರೀಚ ಅಭೂತಪೂರ್ವ ಒಂದು ಸುಂದರ ಸುವರ್ಣ ಮೃಗವಾಗಿ ಪರ್ಣಕುಟಿಯ ಹತ್ತಿರ ಸುಳಿದಾಡ ಹತ್ತಿದ - ಸೀತಾದೇವಿ ಈ ಮೃಗವನ್ನು ಕಂಡು ಬಹುಬೆರಗಾಗಿ ಪರ್ಣಕುಟಿಯ ಒಳಗೆ ಪವಡಿಸಿದ್ದ ಶ್ರೀರಾಮನೆಡೆಗೆ ಧಾವಿಸಿ ''ನಾಥಾ

ನೋಡಿಲ್ಲಿ, ಬಾ ಹೊರಗೆ, ನೋಡು ಈ ಸುಂದರ ಹರಿಣವನ್ನು. ನಾನು ಹಾಗೇ ಹೂವುಗಳನ್ನು ಹರಿಯುತ್ತ ಇಲ್ಲಿ ನಿಂತಾಗ ಸಹಜವಾಗಿ ಆ ಹುಲ್ಲಿನಲ್ಲಿ ಇದನ್ನು ಕಂಡೆ. ಅದೆಷ್ಟು ಸುಂದರವಿದೆ ಇದು! ಏನು ಅದರ ಮೈಬಣ್ಣ! ಏನು ಆದರ ಮೆರಗು! ನನಗೆ ಬೇಕದು, ಹಿಡಿದು ತರುವಿಯಾ ನಾಥಾ?'' ಎಂದಳು ಸೀತೆ.

ಅದರ ಶೃಂಗದ ಮೇಲಿದ್ದ ರತ್ನಗಳು ಥಳಥಳ ಹೊಳೆಯುತ್ತಿವೆ ನೋಡಿಲ್ಲಿ. ಯಾರಾದರೂ ಮೋಹಗೊಳ್ಳುವಂತಹ ಸುವರ್ಣಹೂಗಳನ್ನೇ ತನ್ನ ಮೈಮೇಲಿರಿಸಿಕೊಂಡಿದೆ! ಕಣ್ಣು ಕುಕ್ಕುವಂತಹ ಮೈಬಣ್ಣ ಅದರದು ! ಅದರ ಬಾಲ ನೋಡು ಇಂದ್ರನ ಚಾಪವೇನೋ ಎಂಬಂತೆ ತೋರುತ್ತದೆ. ನಾಥಾ, ಅದು ನಮ್ಮ ಪರ್ಣಕುಟಿಯ ಬಳಿ ಹಲವಾರು ಸಲ ಸುಳಿದಾಡಿತು, ಇದು ನೋಡು ಅದರ ಹೆಜ್ಜೆಗಳ ಹೊಂಬಣ್ಣವನ್ನು ! ಬಾಳೇ ಕಂಬಕ್ಕೆ ಅದು ಕೋಡು ತಿಕ್ಕಿತೋ ಏನೋ, ಅದು ಸುವರ್ಣದಂತೆ ಮೆರಗುತ್ತಿದೆ! ನೋಡಿಲ್ಲಿ ಮೈದುನಾ ಕಾಂತಾ, ಅದು ಮೆಲ್ಲಗೆ ತನ್ನ ಕತ್ತನ್ನು ಹೊರಳಿಸುತ್ತ ತ್ವರಿತದಲ್ಲಿ ಸಾಗಿರುವುದು ನೋಡಿರಿ; ಅದರ ಕಣ್ಣುಗಳು ಲಕ್ಷಣ ಭಾವದಿಂದ ತುಂಬಿದಂತಿದೆ ನಾಥಾ, ಈ ಮೃಗ ತುಂಬಾ ನನ್ನ ಮನ ಸೆಳೆದಿದೆ. ಹುಲ್ಲಿನಲ್ಲಿ ಇದನ್ನು ಕಂಡಾಗಿನಿಂದ ಹುಚ್ಚಳೇ ಆಗಿರುವೆ ನಾನು, ಹೇಗಾದರೂ ಮಾಡಿ ಹಿಡಿದು ತನ್ನಿರದನ್ನು. ನನಗಾಗಿ ಯಾರೂ ಎತ್ತಲಾಗದಂತಹ ಶಿವಧನಸ್ಸನ್ನು ಮುರಿದವ ನೀನು. ಅಂದ ಮೇಲೆ ಈ ಮೃಗವೊಂದನ್ನು ಹಿಡಿದು ತರುವದು ನಿನಗೆ ಆಗಲಾರದು ಎಂದು ನಾನು ಹೇಗೆ ಅನ್ನಲಿ? ಇಕೋ ನಿನ್ನೀ ಚಾಪ ಬಾಣಗಳನ್ನು ನಿನ್ನ ಬೆನ್ನಿಗೆ ಕಟ್ಟಿರುವೆ, ತ್ವರೆ ಮಾಡು ಧಾವಿಸು ನಾಥಾ.

ಈ ಸುವರ್ಣ ಮೃಗವನ್ನು ಕಂಡು ಅಯ್ಯೋಧ್ಯೆಯ ಕೋಶದಲ್ಲಿಯ ಧನಲಕ್ಷ್ಮೀ ನಿನ್ನ ಈ ಚರಣಗಳಿಗಾಗಿ ಈ ವನವನ್ನರಸುತ್ತ ಬಂದಳೇನೋ ಎಂದು ನನಗೆ ಅನಿಸುತ್ತದೆ. ಆರ್ಯರೇ ಹೋಗಿರಿ ಆ ಹರಿಣವನ್ನು ಈ ಕುಟೀರದಲ್ಲಿ ತಂದಿರಿಸಿರಿ ಈಗಲೇ, ಅಲ್ಲಿಯವರೆಗೆ ನಿನ್ನ ತಮ್ಮ ಕುಟೀರವನ್ನು ಕಾಯುತ್ತಿರುತ್ತಾನೆ.

ನಾಥಾ, ಸಜೀವವಾಗಿ ಈ ಮೃಗವು ನಮ್ಮ ಸ್ವಾಧೀನವಾದರೆ ಏನು ಹೇಳಲಿ? ಅದರ ಮೈಮೇಲಿನ ರತ್ನಗಳೇ ಜ್ಯೋತಿಗಳಾಗಿ ರಾತ್ರಿಯಲ್ಲಾ ಈ ವನದಲ್ಲಿ ನಮಗೆ ಪ್ರಕಾಶವನ್ನೀಯುವವು, ನಾವು ಅಯೋಧ್ಯೆಗೆ ಮರಳುವಾಗ ಇದನ್ನು ನಮ್ಮ ಜೊತೆಯಲ್ಲಿಯೇ ಒಯ್ಯೋಣವಂತೆ. ಅಲ್ಲಿಯವರಿಗೆಲ್ಲ ಅಚ್ಚರಿಯಾದೀತು. ಒಂದು ವೇಳೆ ನೀನು ಬಾಣದಿಂದ ಆ ಮೃಗವನ್ನು ಹೊಡೆದೆಯಾದರೆ, ಮೈದುನ ಅದರ ಚರ್ಮವನ್ನು

ತೆಗೆಯುತ್ತಾನೆ. ಆ ಸುವರ್ಣಮಯ ಚರ್ಮದ ಮೇಲೆ ನೀವು ಆಸೀನರಾದರೆ, ಇಂದ್ರನಂತೆ ಶೋಭಿಸುವಿರಿ. ನಾಥಾ ನೋಡಿಲ್ಲಿ, ಆ ಮೃಗವು ಆ ಕಡೆಗೆ ಸಾಗಿತು, ಆ ದಿನ್ನಿಯನ್ನೇರ ಹತ್ತಿತು. ಎಲ್ಲಿಯಾದರು ಕಣ್ಮರೆಯಾದೀತು. ಧನುರ್ಧರಾ ತ್ವರೆ ಮಾಡು, ಯಾಕೆ ನಿಂತುದು ಇನ್ನೂ ?'' ಎಂದು ಸೀತಾದೇವಿ ನುಡಿದಾಗ ಶ್ರೀರಾಮನಿಗೆ ಲಗುಬಗೆಯಿಂದ ಆ ಮೃಗದ ಬೆನ್ನಟ್ಟುವದು ಅನಿವಾರ್ಯವಾಯಿತು.

ಈ ರೀತಿಯಾಗಿ ಆ ಸುವರ್ಣ ಮೃಗ ಬೇಕೇಬೇಕೆಂದು ಸೀತಾದೇವಿ ಹಟ ಹಿಡಿದಳು. ಆಗ ಶ್ರೀರಾಮನಿಗೆ ಬಿಲ್ಲು ಬಾಣಗಳೊಂದಿಗೆ ಆ ಮಾಯಾಮೃಗದ ಬೆನ್ನು ಹತ್ತಿ ಧಾವಿಸುವುದು ಅನಿವಾರ್ಯವಾಯಿತು, ತುಸು ದೂರ ಅದನ್ನು ಬೆನ್ನಟ್ಟಿ ಹಿಡಿಯಲು ಆತ ಪ್ರಯತ್ನ ಮಾಡಿದ. ಆದರೆ ಅದು ಕೈಗೆ ಸಿಗುವಂತೆ ಅನಿಸಲಿಲ್ಲ. ಆಗ ಅವನು ಗುರಿ ಹಿಡಿದು ಬಾಣವನ್ನು ಬಿಟ್ಟ, ಶ್ರೀರಾಮನ ಬಾಣ ಆ ಮಾಯಾಮೃಗದ ಮರ್ಮಸ್ಥಳಕ್ಕೆ ತಾಗಿದಾಕ್ಷಣ ಶ್ರೀರಾಮನ ದನಿಗೆ ಹೋಲುವಂತೆಯೇ ದನಿತೆಗೆದು '' ಹಾ ಲಕ್ಷ್ಮಣಾ ! ಹಾ ಸೀತೇ !'' ಎಂದು ಕೂಗಿ ಪ್ರಾಣವನ್ನು ಬಿಟ್ಟಿತು. ಪರ್ಣಕುಟಿಯಲ್ಲಿದ್ದ ಸೀತಾದೇವಿಗೆ ಈ ದನಿ ಕಿವಿಗೆ ಬಿದ್ದಾಕ್ಷಣ ಅವಳ ಮೈಯಲ್ಲಿ ನಡುಗು ತುಂಬಿತು, ಗಾಬರಿಯಾದಳು, ಶ್ರೀರಾಮನಿಗೆ ಏನೋ ಅಪಘಾತವಾಗಿರಬೇಕೆಂಬ ಕಲ್ಪನೆಯಿಂದ ''ಲಕ್ಷ್ಮಣಾ ಓಡು, ಶ್ರೀರಾಮನಿಗೆ ಏನೋ ಆಯಿತು ನೋಡು, ಓಡು ಬೇಗ'' ಎಂದು ತ್ವರಿತವಾಗಿ ನುಡಿದಳು.

ಲಕ್ಷ್ಮಣ ವಿವಂಚನೆಗೊಳಗಾದ. ಸೀತೆಯ ರಕ್ಷಣೆಗಾಗಿ ಪರ್ಣಕುಟೀರದಲ್ಲಿರಬೇಕೆಂಬ ಶ್ರೀರಾಮನಾಜ್ಞೆಯನ್ನು ಪಾಲಿಸಬೇಕೋ, ಅಥವಾ ಸೀತಾದೇವಿಯ ತುರ್ತದ ಅಪ್ಪಣೆಯಂತೆ ತ್ವರಿತವಾಗಿ ಶ್ರೀರಾಮನ ಕಡೆಗೆ ಧಾವಿಸಬೇಕೋ, ಏನು ಮಾಡಲಿ ಎಂದು ಆತ ಹಿಂದು ಮುಂದು ನೋಡಲು ಪ್ರಾರಂಭಿಸಿದ. ಆದರೆ ಸೀತಾದೇವಿಗೆ ಲಕ್ಷ್ಮಣನ ಈ ವಿಲಂಬ ವೃತ್ತಿ ಸಹಿಸಲಾಗಲಿಲ್ಲ, ಆಗ ''ಲಕ್ಷ್ಮಣಾ ಧಾವಿಸಲು ಯಾಕೆ ಹಿಂಜರಿಯುತ್ತಿರುವಿ? ನಿನ್ನ ಮನಸ್ಸಿನಲ್ಲಿ ಏನಾದರೂ ವಿಪರೀತ ಕಲ್ಪನೆಯೋ? ಏಳಿಲ್ಲಿಂದ ಮೊದಲು, ನಾನು ಹೇಳುತ್ತೇನೆ ಧಾವಿಸು ರಾಮನೆಡೆಗೆ, ಎಂತಹ ಭ್ರಾತೃಪ್ರೇಮ ನಿನ್ನದು ! ನನ್ನ ಅಪ್ಪಣೆಯನ್ನು ಮೀರಿ ಇಲ್ಲಿ ಉಳಿಯಬೇಕೆನ್ನುವೆಯಾ?'' ಎಂದು ಕಠೋರವಾಗಿಯೇ ಸೀತಾದೇವಿಯು ನುಡಿದಾಗ, ಅನಿವಾರ್ಯವಾಗಿ ಲಕ್ಷಣ ಪರ್ಣಕುಟೀರದಿಂದ ಹೊರ ಬಂದು ಒಂದು ಗೆರೆಯನ್ನು ಅಭಿಮಂತ್ರಿಸಿ ಎಳೆದು ''ತಾಯೀ ಈ ಗೆರೆ ಮಾತ್ರ ದಾಟಿ ಆಚೆಗೆ ಹೋಗಬೇಡ'' ಎಂದು ಹೇಳಿ ಶ್ರೀರಾಮನ ಶೋಧೆಗಾಗಿ ಧಾವಿಸಿದ.

# ಅಧ್ಯಾಯ ೩೦

## "ಯಾಚಕನೇ ಬಾಗಿಲ ಮುಂದೆ ನಿಲ್ಲಬೇಡ (ಸೀತಾದೇವಿ)"

ಇತ್ತ ಆಶ್ರಮದಲ್ಲಿ ಸೀತಾದೇವಿ ಒಬ್ಬಳೇ ಉಳಿದ ಸಂಧಿಯನ್ನೇ ಸಾಧಿಸಿ ಯತಿವೇಷದಲ್ಲಿದ್ದ ರಾವಣನು ಮುಂದೆ ಬಂದ. ತುಸುಹೊತ್ತಿನಲ್ಲಿಯೇ ತಾನು ಬಂದ ಹೇತುವನ್ನು ಪ್ರಕಟಿಗೊಳಿಸಿ ಅವಳೆಡೆಗೆ ಸಾಗಿ ಬಂದುದನ್ನು ಕಂಡು, ಆ ಮಹಾ ಪತಿವ್ರತೆ ಮೈಥಿಲಿ ಕಾತರ ಸ್ವರದಿಂದ ರಾವಣನಿಗೆ ಎಚ್ಚರಿಕೆಯನ್ನೀಯಲು ಪ್ರಾರಂಭಿಸಿದಳು.

"ಯಾರಯ್ಯ ಯಾಚಕ ನೀನು? ಸರೆ ದೂರ ಆಚೆಗೆ. ಬಾಗಿಲದ ಬಳಿ ನಿಲ್ಲಬೇಡಿರಿ. ಆ ಘನ ನೀಳನ ಮಿಂಛು ನಾನು. ಸುಟ್ಟಾವು ನಿನ್ನ ಕೈಗಳು ಎಚ್ಚರಿಕೆ ಮೂಢಾ, ಕಾಮ ವ್ಯಥೆಯ ಮದಿರಾಪಾನ ಮಾಡಿ ಬಂದ ಮದದಿಂದ ವ್ಯರ್ಥ ನಮ್ಮ ಈ ಅಂಗಳದಲ್ಲಿ ಕುಣಿದಾಡಬೇಡ. ಜನಕಸುತಳು ನಾನು, ನನ್ನ ಉಗುರು ಸ್ಪರ್ಶ ಕೂಡ ಸ್ವಪ್ನದಲ್ಲಿಯೂ ನಿನಗೆ ಅಶಕ್ಯ ಎಂಬುದನ್ನು ತಿಳಿ.

ಹುಚ್ಚಾ ಕಾಮಾಂಧಾ, ನಾನೊಬ್ಬಳೇ ಇರುವೆನೆಂದು ಭಾವಿಸಿರುವೆಯಾ? ಇಲ್ಲಾ, ಇಲ್ಲಾ, ನಾನೊಬ್ಬಳೇ ಇಲ್ಲ ನನ್ನ ಸುತ್ತು ಶ್ರೀರಾಮಕೀರ್ತಿಯ ಆಕೃತಿ ಇದೆ. ಶಕ್ತಿ ಇದೆ. ಇದು ನಿನ್ನಾ ಕಣ್ಣುಗಳಿಗೆ ಕಾಣಲ್ಲೊಲ್ಲದು ಇಷ್ಟೇ. ಅದು ನಿನ್ನನ್ನು ಸಂದೇಹವಾಗಿ ನರಕಕ್ಕೆ ಅಟ್ಟೀತು ಎಚ್ಚರಿಕೆ. ಠಕ್ಕ ನರಿಯಂತೆ ಏನು ನಿನ್ನ ನಗು ಇದು ? ನನ್ನನ್ನು ಹೀಗೆ ದಿಟ್ಟಿಸಿ ಯಾಕೆ ನೋಡುತ್ತಿರುವಿ? ನನ್ನ ಈ ಕಣ್ಣುಗಳಲ್ಲಿ ಶ್ರೀರಾಮನ ಹೊರತು ಅನ್ಯವೇನೂ ಕಾಣಲಾರದು. ನೀನು ಈ ಸೀತೆಯ ಪ್ರೇಮವನ್ನು ಇಚ್ಛಿಸುವದೆಂದರೆ ಕಾಲಕೂಟ ವಿಷದಿಂದ ಪ್ರೇಮವನ್ನು ಬಯಸಿದಂತೆ ಎಂದು ತಿಳಿ. ಹತ ಭಾಗ್ಯನೇ ಚಂದ್ರ, ಸೂರ್ಯರನ್ನು ಕೈಯಿಂದ ಹಿಡಿಯಲು ನೋಡುವಿಯಾ?

ಎಲಾ ನೀಚ, ಹೀಗೇಕೆ ಮುಂದೆ ಮುಂದೆ ಸಾಗಿ ಬರುತ್ತಿರುವಿ ? ನಿರ್ಜನವಾದ ಈ ವನದಲ್ಲಿ ನನ್ನೊಬ್ಬಳನ್ನೇ ಕಂಡು ಬಲಾತ್ಕರಿಸಿ ನನ್ನನ್ನು ಎತ್ತಿ ಒಯ್ಯಲು ಹವಣಿಸುತ್ತಿರುವೆಯಾ? ಪ್ರದೀಪ್ತವಾದ ಅಗ್ನಿಯನ್ನು ನಿನ್ನ ಪದರಿನಲ್ಲಿ ಕಟ್ಟಿಕೊಂಡು ಹೋಗುವಿ ಮೂಢಾ ಎಚ್ಚರಿಕೆ. ನಾನು ಅಬಲೆ ಎಂದು ಭಾವಿಸಿ ನಿನ್ನಲ್ಲಿರುವ ಬಲದಿಂದ ನನ್ನನ್ನು ಬಲಾತ್ಕರಿಸಲು ನೀನು ಕೈ ಮುಂದೆ ಚಾಚುವಿಯಾದರೆ, ನಿನ್ನ ಕೈಗಳ ಶಕ್ತಿಯ ಮುಂದೆ ನನ್ನ ಕೈಗಳು ಈಗಿನ ಮಟ್ಟಿಗೆ ದುರ್ಬಲವೆಂದಾದರೂ ಶ್ರೀರಾಮನ ಬಾಣಗಳು ಮಾತ್ರ ನಿನ್ನ ಮೇಲೆ ವಜ್ರಾಘಾತ ಮಾಡುವವು ಎಚ್ಚರಿಕೆ.

ಮತ್ತೆ ಮುಂದೇಕೆ ಸಾಗಿ ಬರುತ್ತಿರುವಿ ಪಾಪಿಯೇ ನಿನ್ನ ಚರಣಗಳೇ ನಿನ್ನನ್ನು

ತಡೆಯುತ್ತಿವೆ ನೋಡು. ನಿನ್ನ ಚರಣಗಳಲ್ಲಿದ್ದ ಸಾವಧಾನತೆ ನಿನ್ನ ತಲೆಯಲ್ಲಿ ಇಲ್ಲ.ಕಾಮಾಂಧಾ, ರಘುವರಾऽ ರಘನಾಥಾऽऽ ಧಾವಿಸು ऽ ಧಾವಿಸು ऽऽ ಕಮಲದ ಪಕಳಿಯ ಮೇಲೆ ಮದವೇರಿದ ಗಜ ಬರುತ್ತಿದೆ! ಶ್ರೀರಾಮಚಂದ್ರಾऽऽ ನಿನೆಲ್ಲಿದ್ದರೂ ಸರಿ ಈ ನನ್ನ ಕಡೆಯ ಆಕ್ರಾಂತವನ್ನು ನೀನು ಕೇಳು ಪ್ರಭೋऽऽ'' ಎಂದು ಸೀತಾದೇವಿ ಆಕ್ರೋಶ ಮಾಡುತ್ತಿದ್ದಂತೆಯೇ ರಾವಣ ತನ್ನ ಕಾರ್ಯವನ್ನು ಸಾಧಿಸಿಯೇ ಬಿಟ್ಟ.

# ಅಧ್ಯಾಯ -೩೧

## ''ಜನಕನಂದಿನಿ ಸೀತೆ ಆದೆಲ್ಲಿ ಲಕ್ಷ್ಮಣ?''

ಕಾಮಾಂಧನಾದ ರಾವಣ, ಸೀತೆಯ ಆಕ್ರೋಶ ಸಂತಾಪಗಳತ್ತ ಎಷ್ಟೂ ಗಮನ ಕೊಡದೆ, ಅವಳ ಮಾತಿಗೆ ಎಷ್ಟೂ ಸೊಪ್ಪು ಹಾಕದೇ, ಅವಳನ್ನೆತ್ತಿ ತನ್ನ ರಥದಲ್ಲಿ ಹಾಕಿಕೊಂಡು ಲಂಕೆಯ ದಾರಿ ಹಿಡಿದ.

ಇತ್ತ ಮಾಯಾವಿ ಮಾರೀಚನನ್ನು ವಧೆ ಮಾಡಿ ಮರಳಿ ಬರುತ್ತಿದ್ದ ಶ್ರೀ ರಾಮ, ಧಾವಿಸಿ ಇದುರಾಗಿ ಬರುತ್ತಿದ್ದ ಲಕ್ಷ್ಮಣನನ್ನು ಕಂಡ. ಸೀತೆಯೊಬ್ಬಳನ್ನೇ ಪರ್ಣಶಾಲೆಯಲ್ಲಿಬಿಟ್ಟು ಈತ ಬರುತ್ತಿದ್ದಾನೆಂಬುದು ಆತನ ಲಕ್ಷಕ್ಕೆ ಬಂದು ಗಾಬರಿಯಾಗಿ, ''ಲಕ್ಷಣಾ, ಜಾನಕಿ ಒಬ್ಬಳನ್ನೆ ಪರ್ಣಕುಟಿಯಲ್ಲಿ ಬಿಟ್ಟು ನೀನು ಹೀಗೇಕೆ ಬಂದೆ? ಈ ಮಾಯಾವೀ ರಾಕ್ಷಸ ನನ್ನಂತೆಯೇ ದನಿಮಾಡಿ ''ಹಾ ಲಕ್ಷ್ಮಣಾ, ಹಾ ಸೀತೆ'' ಎಂದು ಕೂಗಿ ಪ್ರಾಣ ಬಿಟ್ಟ . ಅದರಿಂದಾಗಿ ನೀವು ಮೋಸ ಹೋಗಲಿಲ್ಲವಷ್ಟೇ? ನನ್ನ ಶರ ಸಂಧಾನದಿಂದ ಯಾವ ಪ್ರಾಣಿಗಾದರೂ ಪಾರಾಗುವುದು ಶಕ್ಯವಾದೀತೇ ?'' ಎಂದು ಶ್ರೀರಾಮ ನುಡಿದ. ಆಗ ಲಕ್ಷ್ಮಣ ನಮ್ರದಿಂದ ''ರಾಮಾ ಇದೆಲ್ಲವನ್ನೂ ನಾನು ದೇವಿ ಜಾನಕಿಗೆ ಹೇಳಿದೆ. ಅದರ ಮೇಲೆ ಅವಳು ಅತ್ಯಂತ ಕಠೋರ ನುಡಿಗಳನ್ನಾಡಿದಳು. ಆದುದರಿಂದ ಅವಳ ಇಚ್ಛೆಯ ಮೇರೆಗೆ ನಿನ್ನನ್ನು ಶೋಧಿಸಲು ನನಗೆ ಇಲ್ಲಿಯವರೆಗೆ ಬರುವ ಭಾಗ ಬಿತ್ತು ''ಎಂದು ಉತ್ತರಿಸಿದ . ಆಗ ಶ್ರೀರಾಮನು ''ಹುಚ್ಚಾ, ಲಕ್ಷ್ಮಣಾ, ಒಬ್ಬ ಸ್ತ್ರೀಯ ಕ್ಷಣಿಕ ಕೋಪದ ಮಾತುಗಳನ್ನು ನೀನು ಸತ್ಯವೆಂದು ಬಗೆದೆಯಾ? ಏನೇ ಇರಲಿ , ಅವಳೊಬ್ಬಳನ್ನೆ ಕುಟೀರದಲ್ಲಿ ಬಿಟ್ಟು ನೀನೆಲ್ಲಿಗೆ ಬಂದದು ಎಷ್ಟು ಒಳ್ಳೆಯದನ್ನು ಮಾಡಲಿಲ್ಲ . ಇರಲಿ, ನೀನು ಬೇಗ ಪರ್ಣಶಾಲೆಯ ಕಡೆಗೆ ನಡೆ ಹೋಗೋಣ ಯಾಕೋ ನನ್ನ ಎಡಗಣ್ಣು ಹಾರಹತ್ತಿದೆ . ಮೈಯಲ್ಲಿ ನಡುಗು ಹುಟ್ಟಿತು. ಸೀತೆ ಕುಟೀರದಲ್ಲಿ ಕುಶಲಳಾಗಿ ಇರಬಹುದಲ್ಲವೆ ಲಕ್ಷ್ಮಣಾ?'' ಎಂದು ನುಡಿದು ಹಾಗೇ ಲಗುಬಗೆಯಿಂದ

ಸೀತಾದೇವಿ ಅಲ್ಲಿ ಕಾಣಲಿಲ್ಲ! ಕ್ಷಣದಿನ ಹರ್ಷ ಮಾಯವಾಯ್ತು ಅಸ್ವಸ್ಥನಾಗಿಬಿಟ್ಟ ಆಗ ಅವರಿಗೆ, ಸಮಸ್ತ ಆಶ್ರಮವೇ ಕಳಾಹೀನವಾಗಿ ಕಂಡಿತು. ಎಲ್ಲೆಡೆ ಅಲೆದಾಡುತ್ತ ಸೀತೆಯನ್ನು ಕೂಗಿ ಕರೆಯಲು ಪ್ರಾರಂಭಿಸಿದ ಶ್ರೀರಾಮ "ನೀನಿಲ್ಲದೆ ನನ್ನ ಆಶ್ರಮ ಭಣ ಭಣವಾಗಿದೆ ಸೀತೇ, ಪ್ರಿಯೇ, ಜನಕ ನಂದಿನೀ, ಎಲ್ಲಿರುವೆ ನೀನೀಗ ಬಾ ಬೇಗ" ಎಂದು ಕೂಗುತ್ತ ಸುತ್ತಾಡಿ ಅವಳನ್ನು ಹುಡುಕಲು ಪ್ರಾರಂಭಿಸಿದ.

ಹಾಗೇ ಸೀತೆಯನ್ನು ಕೂಗಿ ಕೂಗಿ ಕರೆಯುತ್ತ ಶ್ರೀರಾಮ ನದಿ ತೀರಕ್ಕೆ ಬಂದ. ಅಲ್ಲಿದ್ದ ಕದಂಬ ವೃಕ್ಷಕ್ಕೆ ಸಂಬೋಧಿಸಿ, "ಕದಂಬಾ ಬೇಗ ನೋಡಿ ಹೇಳು. ನಿನಗೇನಾದರೂ ನದಿ ದಂಡೆಯ ಮೇಲೆ ಸೀತೆ ಕಾಣುವಳೆ? ಅವಳ ಕರದಲ್ಲಿ ಕಮಂಡಲು ಇದೆ. ನಡದ ಮೇಲೆ ಕಲಶವಿದೆ. ಸಿಂಹಕಟಿ ಅವಳು ಮಂದಗಾಮಿನಿ" ಎನ್ನುತ್ತ ಮುಂದೆ ನಡೆದಾಗ ಅಶೋಕ ವೃಕ್ಷವನ್ನು ಕಂಡ. "ಶೋಕ ನಾಶಕ ಅಶೋಕ ಎಲ್ಲಿ ಆ ನನ್ನ ಶುಭಾಂಗಿ? ನೀನೇನಾದರೂ ಅವಳನ್ನು ಕಂಡೆಯಾ? ನಿನ್ನ ಪಲ್ಲವಗಳೆಲ್ಲ ನಡುಗುತಿವೆಯಲ್ಲ ಯಾಕೆ? ನಿನ್ನ ಸ್ವಪ್ನದಲ್ಲಿ ಅಶುಭವನ್ನೇನಾದರೂ ಕಂಡೆಯಾ? ಸುಮ್ಮನೇಕೆ ನಿಂತೆ? ಮಾತಾಡು" ಎಂದ ರಾಮ ಮುಂದೆ ಸಾಗಿದಾಗ ಚಂದನ ವೃಕ್ಷವನ್ನು ನೋಡಿ "ಎಲಾ ಚಂದನಾ, ಆ ರೂಪವತಿ ನನ್ನ ಸೀತೆ ಇತ್ತ ಕಡೆಗೆ ಹೋಗುವುದನ್ನು ಕಂಡೆಯಾ?" ಹಾಗೆ ಮುಂದೆ ಸಾಗಲು ಮಾವಿನ ಮರವನ್ನು ಕಂಡು"ಅಮ್ರ, ವಿನಯವತಿ ಅವಳು ನನ್ನ ಜಾನಕಿ ಗೊತ್ತಿಲ್ಲವೆ ನಿನಗೆ ? ಅವಳೆಲ್ಲಿರುವಳು ಹೇಳು ನೋಡೋಣ, ಗಾಳಿ ಇಲ್ಲದೇ ನಡುಗುತ್ತಿರುವಿಯಲ್ಲ ಯಾಕೆ, ಏನಾಗಿದೆ. ನಿನಗೆ?

ಹಾಯ್ ಹಾಯ್! ಘಾತ ಸಮಯ ಪುನಃ ಮರುಕಳಿಸಿತೇ? ಸೀತೇ- ಓ ಸೀತೇSSS ಸಖೀ SS ಮೈಥಿಲೀ SSS ನನ್ನ ಈ ಕೂಗು ಕೇಳಲಾರೆಯಾ? ಬಾ- ಸತ್ವರ ಬಾ. ಈ ಶಿಲಾಸನದ ಮೇಲೆ ನಾವಿಬ್ಬರೂ ಸುಖವಾಗಿ ಕುಳಿತುಕೊಳ್ಳೋಣ. ಲಕ್ಷ್ಮಣಾ, ಸೀತೆಯ ಈ ಮೃಗಶಾವಕಗಳನ್ನು ನೋಡು, ಅವುಗಳ ಮುಗ್ಧ ಮನೋಹರವಾದ ಕಂಗಳನ್ನು ನೋಡು- ಅವೂ ಕಂಬನಿಗರಿಯಹತ್ತಿವೆ ಎಂದು ತೋರುತ್ತದೆ. ಗಾಳಿ ಪಕ್ಷಿಗಳು ಗಿಡಗಳು ಎಲ್ಲ ಮೂಕವಾದವು. ನನ್ನ ಕಮಲಾಕ್ಷಿ ಸೀತೆಯನ್ನು ಯಾರಾದರೂ ಹರಣ ಮಾಡಿಕೊಂಡು ಒಯ್ದರೇ? ಶತ ಜನ್ಮಗಳ ವೈರವನ್ನು ಸಾಧಿಸಿ ಯಾವುದೊ ರಾಕ್ಷಸನೇನಾದರೂ ಅವಳನ್ನು ಭಕ್ಷಿಸಿತೋ? ಯಾವೂದೂ ತಿಳಿಯದಾಯಿತಲ್ಲ ಲಕ್ಷ್ಮಣ!

ಆಯಿತು- ತಿಳಿಯಿತು- ನನ್ನ ದೈವವು ಪುನಃ ಒಮ್ಮೆ ತಾ-ನು-ಗೆ-ಲು-ವ-ನ್ನು

-ಗ-ಳಿ- ಸಿ-ತು. ಘಾತದ ಮೇಲೆ ಆಘಾತ-ಆಪದಗಳು. ಗಾಯದ ಮೇಲೆ ಬರೆಯಲ್ಲದೇ ಮತ್ತೇನಿದು? ನಮ್ಮ ಎಲ್ಲ ಕಾರ್ಯ ಸಂಪದವು ತನ್ನ ಪ್ರತಿಭೆಯನ್ನು ಕಳೆದುಕೊಂಡು ಕಳೆಗುಂದಿಹೋಯಿತು. ಇನ್ನು ಉಳಿಯಿತೇನು ? ತಮ್ಮ ಲಕ್ಷ್ಮಣ ಮರಳಿ ನಗರಕ್ಕೆ ಹೋಗೋಣ ನಡೆ. ಭೋಗ-ಭೋಗ ಅನ್ನುತ್ತಾರಲ್ಲ ಲಕ್ಷ್ಮಣಾ, ನಾವು ಭೋಗಿಸಬೇಕಾದು ಏನು ಉಳಿಯಿತಿನ್ನು? ನಾಲ್ಕು ದಿನಗಳ ಚರಿತ್ರೆ ಆಯಿತು. ದು:ಖಸಾಗರಕ್ಕೆ ಭರತಿ ಬಂದಂತಾಯಿತು. ಕೊಚ್ಚಿಹೋಗಲಿ ಈ ರಾಮ ಅದರಲ್ಲಿ ಮತ್ತೇನಿನ್ನು?'' ಎಂದ ರಾಮ.

## ಅಧ್ಯಾಯ - ೩೨
## ''ಲಕ್ಷ್ಮಣಾ ಸೀತೆಯ ಮುಡಿಯಲ್ಲಿಯ ಹೂಗಳಿವು''

ಜಾನಕಿಯ ವಿರಹದಿಂದ ಹೀಗೆ ತುಂಬಾ ವ್ಯಾಕುಲನಾದ ಶ್ರೀರಾಮ ದಾರಿಯಲ್ಲಿ ಕಂಡ ಗಿಡಬಳ್ಳಿಗಳನ್ನು ಹೊಳೆಹಳ್ಳಗಳನ್ನು, ವನ್ಯ ಮೃಗಗಳನ್ನು ಕೂಡ ಪ್ರಶ್ನಿಸಿದ. ಆದರೆ ಅವಾವೂ ಆತನಿಗೆ ಉತ್ತರಕೊಡಲು ಸಮರ್ಥವಾಗಲಿಲ್ಲ. ವಿರಹವ್ಯಾಕುಲನಾದ ಶ್ರೀರಾಮನನ್ನು ಲಕ್ಷ್ಮಣ ಅನೇಕ ಮೃದು ಶಬ್ದಗಳಿಂದ ಸಾಂತ್ವನ ಮಾಡಿದ. ಶ್ರೀರಾಮನು ಅತ್ತಿತ್ತ ದೃಷ್ಟಿಹರಿಸುತ್ತಿದ್ದಾಗ ಆಶ್ರಮದ ನೆರೆಯಲ್ಲಿ ವಾಸಿಸುವ ಮೃಗಗಳು ದಕ್ಷಿಣ ದಿಕ್ಕಿಗೆ ತಮ್ಮ ಮುಖಗಳನ್ನು ಮಾಡಿದ್ದನ್ನೂ ಕಂಡು, ಹಾಗಾದರೆ ಸೀತೆ- ದಕ್ಷಿಣ ದಿಕ್ಕಿಗೆ ಹೋಗಿರಬಹುದು ಎಂದು ಆಶಿಸಿ ಇಬ್ಬರು ಅಣ್ಣತಮ್ಮಂದಿರು ಜಾನಕಿಯ ಶೋಧಗಾಗಿ ದಕ್ಷಿಣ ದಿಕ್ಕಿನತ್ತ ಸಾಗಿದರು. ಮಾರ್ಗದಲ್ಲಿ ಶ್ರೀರಾಮನು ಸೀತೆ-ಸೀತೆ ಎಂದು ಎಡಬಿಡದೇ ಕೂಗುತ್ತಲೇ ಇದ್ದ. ನಿರಾಶೆಯಿಂದ ಬಿಕ್ಕಳಿಸುತ್ತಿದ್ದ. ತುಸು ಮಾರ್ಗ ಕ್ರಮಿಸಿದ ಮೇಲೆ ಕೆಲವು ಹೂಗಳು ದಾರಿಯಲ್ಲಿ ಬಿದ್ದುದನ್ನು ಶ್ರೀರಾಮ ಕಂಡ. ಒಮ್ಮೆಲೇ ಎತ್ತಿ ಅವುಗಳನ್ನು ಕೈಯಲ್ಲಿ ಹಿಡಿದು ''ಹಾ! ಲಕ್ಷ್ಮಣಾ ನೋಡಿಲ್ಲಿ. ಸೀತೆ ಮುಡಿದ ಹೂಗಳಿವು. ಇವುಗಳನ್ನು ಅವಳ ಮುಡಿಯಲ್ಲಿ ನಾನೇ ಮುಡಿಸಿದ್ದೆ'' ಎಂದ. ಆ ಹೂವುಗಳು ಕಣ್ಣಿಗೆ ಬಿದ್ದೊಡನೆ ಆತನಿಗೆ ದು:ಖ ಉಕ್ಕಿ ಬಂತು. ಗದ್ಗಗದ ಕಂಠಿತನಾಗಿ ''ಲಕ್ಷ್ಮಣಾ, ಸೀತೆಯ ಹೆಳಲಿನಲ್ಲಿಯ ಹೂಗಳಿವು. ಅವಳವೇ ಈ ಹೆಜ್ಜೆಗಳು.

ಸೀತೆಯ ಪಾದಗಳನ್ನು ಛೇಧಿಸಿ ಯಾವೂದೋ ಒಂದು ರಾಕ್ಷಸಪಾದ ಚಿನ್ಹೆ ಸಾಗಿದಂತಿದೆ. ನೋಡಿಲ್ಲಿ. ತಿಕ್ಕಾಟದಲ್ಲಿ ಸಿಕ್ಕ ಅವಳ ಪಾದ ಚಿನ್ಹೆಗಳು ಹರಿದ ಕಮಲದಲಗಳಂತಾಗಿವೆ. ಖಚಿತ ಲಕ್ಷ್ಮಣಾ ಖಚಿತ. ಇಲ್ಲಿಯೇ ಇದೇ ಸ್ಥಳದಲ್ಲಿಯೇ ಯಾವೂದೋ ನಿಶಾಚಾರ ರಾಕ್ಷಸ ಮೈಥಿಲಿಯನ್ನು ತುಂಬಾ ಹಿಂಸಿಸಿ ಬಲಾತ್ಕರಿಸಿ ಒಯ್ದಂತೆ ತೋರುತ್ತದೆ. ಆ ರಾಕ್ಷಸನ ಸಾಮರ್ಥ್ಯವು ಪತಿವ್ರತೆಯಳಾದ ನನ್ನ ಈ ಸತಿಯ

ಸಾಮರ್ಥ್ಯವನ್ನು ಮಿಕ್ಕಿಸಿತೇ ?

ಲಕ್ಷ್ಮಣಾ, ಇದು ನೋಡಿಲ್ಲಿ, ಯಾರದೋ ಮುರಿದ ಧನುಷ್ಯಕ್ಕೆ ರತ್ನಮಣಿಗಳ ಭೂಷಣಗಳಿವೆ. ಕದನ ಯಾರೊಳು ನಡೆದಿರಬಹುದಿಲ್ಲಿ? ಓಃ, ವೈಢೂರ್ಯಾಂಕಿತ ಕವಚ ಯಾರದಿದು? ಅದರ ಮಣಿಯೊಂದು ಹುಡಿಯಲ್ಲಿ ಮುಳುಗಿದೆಯಲ್ಲ! ರಾಕ್ಷಸನನ್ನು ಇಲ್ಲಿ ಯಾರು ತರುಬಿರಬಹುದು? ಏನಿದೆಲ್ಲ!

ಲಕ್ಷ್ಮಣಾ ಇಲ್ಲಿ ನೋಡು ಮಡಿದು ಬಿದ್ದ ರಥದ ಸಾರಥಿಯನ್ನು ! ಹರಿದ ಲಗಾಮು ಇನ್ನೂ ಆತನ ಕೈಯಲ್ಲಿದೆ. ಆದರೆ ಅವನ ಮುಖವೆಲ್ಲ ರಕ್ತದಲ್ಲಿ ಮುಳುಗಿ ವಿಕಾರವಾಗಿ ತೋರುತ್ತಿದೆ. ಹುಡಿಯಲ್ಲಿ ಹುದುಗಿದ ಈ ಛತ್ರವನ್ನು ನೋಡಲ್ಲಿ! ಅದರ ದಂಡ ಮುರಿದು ಆ ಕಡೆಗೆ ಬಿದ್ದಿದೆ. ಈ ಎಲ್ಲ ಕೃತ್ಯ ಯಾರದಿರಬಹುದು! ಏನು ನಡೆದಿರಬಹುದಿಲ್ಲಿ? ಎಷ್ಟು ಅಸ್ತಾವ್ಯಸ್ತ ಇದೆಲ್ಲ! ರಥದ ಅಚ್ಚು ಮುರಿದಿದೆ. ಚಕ್ರಗಳು ಭಂಗವಾಗಿವೆ. ಸಮೀಪದಲ್ಲಿಯೇ ಬಾಣ ಕಳಚಿ ಬಿದ್ದಿದೆ. ರಾಸಭ ಸತ್ತು ಬಿದ್ದು ತಣ್ಣಗಾಗಿ ನಭದ ಕಡೆಗೆ ದೃಷ್ಟಿ ತಿರುಗಿಸಿದೆ. ಈ ರಥ ಯಾರದಿರಬಹುದು ಲಕ್ಷ್ಮಣಾ? ಈ ರಥವನ್ನು ಹೀಗೆಯೇ ಇಲ್ಲಿಯೇ ಬಿಟ್ಟು ಅವರು ಯಾವ ಮಾರ್ಗದಿಂದ ಮುಂದೆ ಹೋಗಿರಬಹುದು?

ಲಕ್ಷ್ಮಣಾ, ಅಂತೂ ನನ್ನ ಪ್ರಿಯ ಜಾನಕಿಯನ್ನು ಯಾರು ಎತ್ತ ಕಡೆಗೆ ಎತ್ತಿಕೊಂಡು ಹೋಗಿರಬಹುದು? ಇದನ್ನು ಅನುಮಾನಿಸಲು ಬರಲೊಲ್ಲದು ನನಗೆ! ಸೀತೆಗಾಗಿ ಯಾರಿಬ್ಬರಲ್ಲಿ ಇಲ್ಲಿ ಕಾಳಗ ನಡೆದಿರಬಹುದು? ಅವಳೇನು ಹೃತಳೋ, ಜಿತಳೋ ಅಥಾವಾ ಮೃತಳೋ , ಏನು ಭಕ್ಷಿತಳೋ ಎಲ್ಲಿ ಹೇಗಿರಬಹುದು ನನ್ನ ಸೀತೇ ? ಗೂಢವಿದು ಲಕ್ಷ್ಮಣಾ ಇದಾವುದೂ ನನಗೆ ತಿಳಿಯದಾಗಿದೆ. ಇಲ್ಲಿ ಕೇಳು ನನ್ನ ಸೀತೆ ಅವಳೆಲ್ಲಿಯೇ ಇರಲಿ , ಹರಣ ಮಾಡಿದವನು ಯಾರೇ ಇರಲಿ, ನನ್ನ ಸ್ವಾಮಿನಿಯನ್ನು ನನಗೆ ಆತ ತಂದು ಒಪ್ಪಿಸಬೇಕು. ಇಲ್ಲದಿದ್ದರೆ ಅವನಿಗೆ ಉಳಿಗಾಲವಿಲ್ಲ. ಇದೋ ನೋಡು, ಕ್ಷಾತ್ರ ಬಲವು ಸ್ಫುರಿಸಹತ್ತಿದೆ. ಯಾವನೇ ಇರಲಿ ಆತ, ಸ್ವರ್ಗೀಯ ದೇವನಿದ್ದರೂ ಸರಿ, ಅಮಾನುಷ ರಾಕ್ಷಸನಿದ್ದರೂ ಸರಿ, ಅವನನ್ನು ಸುಡಲು ನನ್ನ ಪಾರುಷಕ್ಕೆ ಉಕ್ಕು ಬಂದಂತಾಗಿದೆ. ನನ್ನ ಬಲದಿಂದ ಮೂರು ಲೋಕಗಳನ್ನು ನಡುಗಿಸುವೆ ''ಎಂದು ಶ್ರೀರಾಮ ಗುಡುಗಿದ ಎಂದು ಗೀತಾರಾಮಾಯಣದ ೩೨ನೆಯ ಅಧ್ಯಾಯದೊಂದಿಗೆ **ಶ್ರೀ ರಾಮಾಯಣ ನಿತ್ಯ ಚಿಂತನ** ಸಪ್ತಾಹದ ನಾಲ್ಕನೆಯ ದಿನ ಮುಗಿದುದು.

ಶ್ರೀರಾಮಚಂದ್ರಾರ್ಪಣ ಮಸ್ತು

ರಾಮರಕ್ಷಾ ಭಾಗ -

ತರುಣೌ ರೂಪಸಂಪನ್ನೌ ಸುಕುಮಾರೌ ಮಹಾಬಲೌ!
ಪುಂಡರೀಕ ವಿಶಾಲಾಕ್ಷೌ! ಚೀರ ಕೃಷ್ಣಾ ಜೀನಾಂಬರೌ! ॥೧೭॥

ಫಲಮೂಲಾಶಿನೌ ದಾಂತೌ ತಾಪಸೌ ಬ್ರಹ್ಮಚಾರಿಣೌ!
ಪುತ್ರೌ ದಶರಥ ಸ್ಯೈತೌ ಭ್ರಾತರೌ ರಾಮ ಲಕ್ಷ್ಮಣೌ! ॥೧೮॥

ಶರಣ್ಯೌ ಸರ್ವಸತ್ವಾನಾಂ ಶ್ರೇಷ್ಠೌ ಸರ್ವ ಧನುಷ್ಮತಾಮ್!
ರಕ್ಷ:ಕುಲನಿಹಂತಾರೌ! ತ್ರಾಯೇ ಥಾಂ ನೋ ರಘೂತ್ತಮೌ! ॥೧೯॥

ಆತ್ತ ಸಜ್ಜ ಧನುಷಾವಿಷುಸ್ಪೃಶಾವಕ್ಷಯಾಶುಗನಿಷಂಗಸಂಗಿನೌ!
ರಕ್ಷಣಾಯ ಮಮ ರಾಮಲಕ್ಷಣಾವಗ್ರತ: ಪಥಿ ಸದೈವ ಗಚ್ಛತಾಮ್ ॥೨೦॥

**ಜಾನಕೀ ಜೀವನ ಸ್ಮರಣ ಜಯ ಜಯ ರಾಮ**
**ಶ್ರೀರಾಮ ಜಯ ರಾಮ ಜಯ ಜಯ ರಾಮ (೧೦ ಸಾರೆ)**

**''ಜಯ ಜಯ ರಘುವೀರ ಸಮರ್ಥ''**

# ಸಪ್ತಾಹದ ೫ ನೆಯ ದಿನ

ಶ್ರೀ ರಾಮ ಜಯರಾಮ ಜಯ ಜಯರಾಮ ( ೧೦ ಸಾರೆ )

''ಜಯ ಜಯ ರಘುವೀರ ಸಮರ್ಥ''

**ಧ್ಯಾನ್ಯ ಶ್ಲೋಕ :-**

**ಧ್ಯಾಯೇದಾ ಜಾನುಬಾಹುಂ --------- ಮಂಡನಂ ರಾಮಚಂದ್ರ**

**ಇತಿಧ್ಯಾನಂ**

''ಜಯ ಜಯ ರಘುವೀರ ಸಮರ್ಥ''

**ಪೂರ್ವಾ ಕಥಾನುವಾದ**

ಭರತಗೆ ವನದಲ್ಲಿ ಶ್ರೀ ರಾಮನ ದರ್ಶನವಾಯಿತು. ಪಿತೃ ನಿಧನದ ವಾರ್ತೆ ಭರತನಿಂದ ತಿಳಿದು ರಾಮಾಶ್ರಯದ ಮೇಲೇ ದುಖ:ದ ಛಾಯೆ ಪಸರಿಸಿತು. ಅಯೋಧ್ಯೆಗೆ ಮರಳಬೇಕೆಂದು ಭರತ ಶ್ರೀರಾಮನನ್ನು ಪರಿಪರಿಯಿಂದ ಬೇಡಿಕೊಂಡ. ಪಿತೃ ವಚನದಂತೆ ನೀನು ರಾಜ್ಯ ಪಾಲನೆ ಮಾಡು, ನಾನು ವನವಾಸಿಯಾಗಿಯೇ ಉಳಿಯುವೆ, ಈ ರೀತಿಯಾಗಿ ತಾತನ ವಚನ ಪಾಲಿಸಿ ಉಭಯತರು ಕೃತಾರ್ಥರಾಗೋಣ. ಹದಿನಾಲ್ಕು ವರುಷದ ನಂತರ ಲಕ್ಷ್ಮಣ ಸೀತೆಯರೊಂದಿಗೆ ತಾನು ಅಯೋಧ್ಯೆಗೆ ಮರಳುವೆ ಎಂಬ ನಿರ್ಧಾರದ ಮಾತು ಶ್ರೀರಾಮನು ಹೇಳಿದ. ಭರತನು ಶ್ರೀರಾಮನ ಪಾದುಕೆಗಳನ್ನು ಪಡೆದುಕೊಂಡು ಅಯೋಧ್ಯೆಗೆ ಮರಳಿದ.

ಮುಂದೆ ರಾಮಾದಿಗಳು ಚಿತ್ರಕೂಟದಲ್ಲಿ ದಕ್ಷಿಣಕ್ಕೆ ಸಾಗಿದರು. ಆಗ ರಾವಣನ ಭಗಿನಿ ಶೂರ್ಪನಖಿ ಕಾಮಾತುರಳಾಗಿ ಅಸಭ್ಯ ರೀತಿಯಿಂದ ವರ್ತಿಸಿದಳು. ಶ್ರೀರಾಮನ ಆಜ್ಞೆಯಂತೆ ಲಕ್ಷ್ಮಣ ಅವಳ ಮೂಗು ಕತ್ತರಿಸಿ ವಿರೂಪ ಮಾಡಿದ. ಅವಳ ಬಂಧುಗಳಾದ ಖರಧೂಷಣರು ತಮ್ಮ ಹದಿನಾಲ್ಕು ಸಾವಿರ ರಾಕ್ಷಸ ಸೈನ್ಯದೊಂದಿಗೆ ಎದುರಾದರು. ಶ್ರೀರಾಮಲಕ್ಷ್ಮಣರು ಅವೆರಲ್ಲರನ್ನೂ ಸಂಹಾರ ಮಾಡಿದರು. ಇದನ್ನು ಕಣ್ಣಾರೆ ಕಂಡ ಶೂರ್ಪನಖಿ ನೇರವಾಗಿ ಲಂಕೆಗೆ ಧಾವಿಸಿ ರಾವಣನನ್ನು ಮೊರೆ ಹೋಗುತ್ತಾಳೆ. ''ಅಣ್ಣಾ ನಿನಗಿದ್ದ ಇಪ್ಪತ್ತು ಕಣ್ಣುಗಳನ್ನು ಒಮ್ಮೆ ತೆರೆದು ನಿನ್ನ ತಂಗಿ ಶೂರ್ಪನಖಿಯ ದುರ್ದುಶೆ ನೋಡೊಮ್ಮೆ.'' ಶ್ರೀರಾಮನ ಶಸ್ತ್ರ ನಿಪುಣತೆಯನ್ನು - ಖರ ಮೂಷಣರಲ್ಲದೇ ಹದಿನಾಲ್ಕು ಸಾವಿರ ರಾಕ್ಷಸ ಸಂಹಾರ ಮಾಡಿದ ವಿಷಯ ಹೇಳಿದಳು. ಅಲ್ಲದೇ ಶ್ರೀರಾಮಲಕ್ಷ್ಮಣರನ್ನು ಸಂಹರಿಸಿ, ಸೀತೆಯನ್ನು ಹರಣ ಮಾಡಿ ತಾ'' ಎಂದಳು ಶೂರ್ಪನಖಿ. **ಸೀತೆ ರತಿಗಿಂತ ಸುಂದರಳು, ತನಗೆ ಒಪ್ಪುವವಳು ಮತ್ತು ಅವಳನ್ನು ಸುಲಭವಾಗಿ ಹರಣ ಮಾಡಿ ತರಬಹುದು** ಎಂಬ ಎರಡು ವಿಚಾರಗಳಿಂದ ಚೋದಿತನಾದ ರಾವಣ ತನ್ನ ಕಾರ್ಯಕ್ಕೆ ಮಾರೀಚನ ನೆರವು ಕೇಳಿದ. ರಾಮನ ಸಂಗಡ ಯುದ್ಧ ಮಾಡುವದು ನಮ್ಮೆಲ್ಲರ ನಾಶಕ್ಕೆ ಕಾರಣವಾದೀತೆಂದೂ ಒಬ್ಬ ಪರ ಸ್ತ್ರೀಯಳನ್ನು ಹರಣ ಮಾಡುವಂಥಹ ಹೀನ ಕಾರ್ಯಕ್ಕೆ ಕೈ ಹಾಕುವುದು ಬೇಡ ಎಂದೂ ರಾವಣನನ್ನು ಈ ದುಷ್ಟ ವಿಚಾರಗಳಿಂದ ಪರಾವೃತ್ತಗೊಳಿಸಲು ಮಾರೀಚ ಪ್ರಯತ್ನ ಮಾಡಿದ. ಆಗ ರಾವಣ ಕಪಟದಿಂದ ಕಾರ್ಯ

ಹಚ್ಚಿದ. ಸೀತಾದೇವಿ ಆ ಸುಂದರ ಮೃಗಕ್ಕೆ ಮನಸೋತಳು, ಆ ಸುಂದರವಾದ ಮೃಗವನ್ನು ಹಿಡಿತರಲು ಶ್ರೀರಾಮ ಮೃಗದ ಬೆನ್ನಟ್ಟಿ ಹೋದ. ಅದು ಕೈಗೆ ಸಿಗದು ಎಂದು ತಿಳಿದಾಗ ಬಾಣ ಬಿಟ್ಟ. ಆ ಮಾಯಮೃಗದ ಮರ್ಮಸ್ಥಳಕ್ಕೆ ಬಾಣ ತಾಗಿದಾಕ್ಷಣ ''ಹಾ ಲಕ್ಷ್ಮಣಾ ಹಾ ಸೀತೆ'' ಎಂದು ರಾಮನಂತೆ ಧ್ವನಿಮಾಡಿ ಆ ಮೃಗ ಕೂಗಿತು. ಆಗ ರಾಮನಿಗೇ ಏನೋ ಆಘಾತ ಎಂದು ಸೀತಾದೇವಿ ಭಾವಿಸಿ ಲಕ್ಷ್ಮಣನನ್ನು ಓಡಿಸುತ್ತಾಳೆ. ಯಾರೂ ಇಲ್ಲದ ಸಮಯವನ್ನು ಸಾಧಿಸಿ, ಸೀತಾದೇವಿಯನ್ನು ಹರಣಮಾಡಿಕೊಂಡು ಹೋದ. ಧಾವಿಸುತ್ತ ಬಂದ ಲಕ್ಷ್ಮಣನನ್ನು ಕಂಡು ರಾಮ ''ಲಕ್ಷ್ಮಣಾ, ಸೀತೆಯೊಬ್ಬಳನ್ನೇ ಪರ್ಣಕುಟಿಯಲ್ಲಿ ಬಿಟ್ಟು ಬಂದದು ಒಳ್ಳೆಯದಾಗಲಿಲ್ಲ'' ಎಂದ ಇಬ್ಬರು ಪರ್ಣಕುಟಿಗೆ ಬಂದು ನೋಡಿದಾಗ ಸೀತಾದೇವಿಯ ಇರಲಿಲ್ಲ. ಶ್ರೀರಾಮನಿಗೆ ದು:ಖವಾಗಿ, ಇಬ್ಬರೂ ಕೂಡಿ ಸೀತಾದೇವಿಯ ಶೋಧೆಗಾಗಿ ನಡೆದರು. ದಾರಿಯಲ್ಲಿ ಕಂಡ ಗಿಡಬಳ್ಳಿ- ಕೊಳಹಳ್ಳ ಅಲ್ಲದೇ ವನ್ಯ ಮೃಗಗಳನ್ನೂ ಕೇಳುತ್ತಾ ಶ್ರೀ ರಾಮ ಹೊರಟ. ಹಾಗೆ ಮುಂದೆ ಸಾಗಿದಾಗ ರಥದ ಸಾರಥಿ ಸತ್ತು ಬಿದ್ದುದನ್ನು ರಥ ಮುರಿದು ಬಿದ್ದಿದ್ದನ್ನು ಕಂಡ. ಸೀತಾದೇವಿಯನ್ನು ಇಲ್ಲಿಯೇ ಹಿಂಸಿಸಿ ಬಲಾತ್ಕರಿಸಿ ಒಯ್ದಂತೆ ಅವನಿಗೆ ಅನಿಸಿತು. ಜಾನಕಿಯನ್ನು ಯಾರು ಎತ್ತ ಕಡೆಗೆ ಎತ್ತಿಕೊಂಡು ಹೋದರೆಂಬುದು ತಿಳಿಯದಾಗಿ-'' ಲಕ್ಷ್ಮಣಾ ಕೇಳಿಲ್ಲಿ, ನನ್ನ ಸೀತೆ ಅವಳು ಎಲ್ಲಿಯೇ ಇರಲಿ - ಹರಣ ಮಾಡಿದವ ಯಾರೇ ಇರಲಿ , ಅವಳನ್ನು ನನಗೆ ತಂದು ಒಪ್ಪಿಸದಿದ್ದರೆ ಅವನಿಗೆ ಉಳಿಗಾಲವಿಲ್ಲ'' ಎಂದು ಶ್ರೀರಾಮ ಗುಡುಗಿದ ಎಂಬುದು ನಿನ್ನಿನ ಕಥೆ **ಇನ್ನು ಮುಂದಿನ ಕಥೆ ಇಂದು ಕೇಳೋಣ.**

# ಅಧ್ಯಾಯ -೩೩

# ''ರಘುನಾಥಾ ರಾವಣ ಸೀತೆಯನ್ನು ಹರಣ ಮಾಡಿಕೊಂಡು ಗಗನ ಮಾರ್ಗದಿಂದ ಹೋದ''

ಹೀಗೆ ಕ್ಷಾತ್ರವೃತ್ತಿ ಉಕ್ಕೇರಿ ಬಂದ ಶ್ರೀರಾಮ ಸೀತಾ ಶೋಧನೆಗೆ ಲಕ್ಷ್ಮಣನೊಡನೆ ಮುಂದೆ ನಡೆದ. ಅಷ್ಟರಲ್ಲಿ ರಕ್ತದಲ್ಲಿ ಮುಳುಗಿ ನೆಲದಮೇಲೆ ಬಿದ್ದುಕೊಂಡಿದ್ದ ಪಕ್ಷಿಶ್ರೇಷ್ಠನನ್ನು ಕಂಡು ಈ ಗೃಧ್ರರೂಪಧಾರಿ ರಾಕ್ಷಸನೇ ಸೀತೆಯನ್ನು ಭಕ್ಷಿಸಿರಬೇಕೆಂದು ಕಲ್ಪನೆ ಮಾಡಿಕೊಂಡು ಶ್ರೀರಾಮನು ಕ್ಷರ ಸಂಜ್ಞರ ಬಾಣವನ್ನು ಆ ಪಕ್ಷಿರಾಜನ ಮೇಲೆ ಪ್ರಯೋಗಿಸಿದ. ನೂರೆಯೊಂದಿಗೆ ನೆತ್ತರವನ್ನು ಕಾರುತ್ತಿದ್ದ ಆ ಪಕ್ಷಿರಾಜ ''ಜಟಾಯು'' ಶ್ರೀರಾಮನಿಗೆ ಕೇಳುತ್ತಾನೆ. ''ಮರಣೋನ್ಮುಖನಾದ ನನ್ನ ಮೇಲೆ ಯಾಕೆ ನಿನ್ನ ಈ ಬಾಣ ಪ್ರಯೋಗ ರಘುನಾಥಾ? ರಾವಣ ಸೀತೆಯನ್ನು ಹರಣಮಾಡಿಕೊಂಡು ಹೋಗುವಾಗ ಆತನನ್ನು ತಡೆದುದರ ಪರಿಣಾಮದಿಂದ ನಾನು ಹೀಗೆ ಉರುಳಿ ಬಿದ್ದಿರುವೆ'' ಮುಂದುವರಿದು ಜಟಾಯು ಹೇಳುತ್ತಾನೆ - ''ರಥದಲ್ಲಿ ರಾವಣನೊಡನೆ ಸೀತಾದೇವಿ ಯನ್ನು ಕಂಡೆ. ರಾಘವನಿಲ್ಲದಲೆ ರಾಜ್ಞಿಸೀತೆ! ಏನು ವಿಚಿತ್ರ ವಿದು! ಮೈದುನ ಲಕ್ಷ್ಮಣ ಕೂಡ ಜೊತೆಗೆ ಇಲ್ಲವೆಂದು ತುಂಬಾ ಕಳವಳವಾಯಿತೆನಗೆ. ಆ ದೃಶ್ಯವನ್ನು ಕಣ್ಣುಗಳಿಂದ ನೋಡಿ ನನಗೆ ಸಹಸಲಾಗಲಿಲ್ಲ. ನನ್ನಲ್ಲಿಯ ಸರ್ವ ಬಲದಿಂದ ಹಾರಿ ರಥದ

ಮಾರ್ಗವನ್ನು ತಡೆಗಟ್ಟಿ ಅದನ್ನು ನಿಲ್ಲಿಸಿದೆ.

ಕಾಮಿಯಾದ ಆ ನೃಶಂಸ ರಾವಣ ಸೀತಾದೇವಿಯನ್ನು ಯಾತಕ್ಕಾಗಿ ತನ್ನ ಮನೆಗೆ ಸಾಗಿಸಿಕೊಂಡು ನಡೆದಿರುವನೆಂಬುದನ್ನಲ್ಲ ಮನಸ್ಸಿನಲ್ಲಿ ತಿಳಿದೆ. ತಡೆಯಲಾಗಲಿಲ್ಲ ನನಗೆ. ಆ ದುಷ್ಟನ ಕೈಗಳನ್ನು ಕಚ್ಚಿದೆ.

ರಾಮರಾಜ್ಞಿಯನ್ನು ರಕ್ಷಿಸಲೆಂದು ಆ ಕಾಮುಕ ರಾವಣನ ಜೊತೆ ಬಹು ಘೋರವಾಗಿ ಹೆಣಗಿದೆ. ಆತನ ಮುಕುಟ ಕವಚಗಳನ್ನು ಮುರಿದೆ. ಬಾಣ ಬತ್ತಳಿಕೆಗಳನ್ನು ಪುನಃ ಅವನಿಗೆ ಸ್ಪರ್ಶ ಮಾಡಗೊಡಲಿಲ್ಲ ನಾನು.

ವಜ್ರಕ್ಕೆ ಸಮಾನಾದ ನನ್ನ ಪಕ್ಕಗಳನ್ನು ಬೀಸಿ ಆತನ ಸರ್ವಾಂಗಕ್ಕೂ ನೋವು ಮಾಡಿದೆ. ಈ ತಿಕ್ಕಾಟದಲ್ಲಿ ದಣಿದನವ. ಅವನ ಸಾರಥಿಯನ್ನು ಕೆಳಗೆ ಕೆಡಹಿದೆ. ಸೀತಾದೇವಿಯನ್ನು ದೂರ ಸರಿಸಿ ರಥದ ಅಕ್ಷವನ್ನು ಮುರಿದು ಚಲ್ಲಿದೆ. ಅದರ ಚಕ್ರಗಳನ್ನೂ ಭಗಿಸಿದೆ. ಆಗ ರಾವಣನ ಛತ್ರ ಧರೆಗೆ ಉರುಳಿತು. ನಮ್ಮಿಬ್ಬರ ಮಧ್ಯ ನಿಕರದ ಕಾಳಗ ನಡೆಯಿತು. ಆಗ ರಾವಣನಿಗೆ ಸಹಿಸಲಾಗಲಿಲ್ಲ. ಹಲ್ಲು ತಿನ್ನುತ್ತ ನನ್ನ ಮೇಲೆ ಸಾಗಿ ಬಂದು ತನ್ನ ಖಡ್ಗದಿಂದ ನನ್ನ ರೆಕ್ಕೆಗಳನ್ನು ಕತ್ತರಿಸಿಬಿಟ್ಟ.

ಆಗ ನಾನು ಭೂಮಿಗೆ ಬಿದ್ದೆ. ಸೀತಾದೇವಿ ಗದಗದ ನಡುಗುತ್ತಾ ನಿಂತುದನ್ನು ಕಂಡು ಕಡು ಮಿಡುಕಿದೆ ನಾನು. ಆ ದುಷ್ಟ ಅವಳನ್ನು ಅವಚಿ ಹಿಡಿದೊಡನೆ ಅವಳು ಚೀರಾಡಿ ವಿಲಿವಿಲಿ ಒದ್ದಾಡಿದಳು ಆ ವೈದೇಹಿ. ಆದರೆ ಕಾಮಾಂಧನಾದ ರಾವಣನಿಗೆ ಅದರ ಪರಿವೇ ಇರಲಿಲ್ಲ.

ಆಗ ನನ್ನ ಜೀವ ಕಣ್ಣುಗಳಲ್ಲಿ ಮಾತ್ರ ಇತ್ತು. ಆ ಮಾಯಾವಿ ರಾವಣ ನಿನ್ನ ಪ್ರೀತಿಯ ಸಾಮ್ರಾಜ್ಞಿಯನ್ನು ಗಗನ ಮಾರ್ಗದಿಂದ ಎತ್ತಿಕೊಂಡು ಹೋದನೆಂಬುದನ್ನು ಕಣ್ಣಾರೆ ಕಂಡೆ. ಹೋಗುವಾಗ ಅವಳು ಒಂದೇ ಸವನೆ ಆಕ್ರಂದನ ಮಾಡುತ್ತಿದ್ದಳು'' ಎಂದು ಮರಣೋನ್ಮುಖನಾದ ಜಟಾಯು ನುಡಿದ.

ರಾವಣ ಸೀತೆಯನ್ನು ನಿಶ್ಚಯವಾಗಿಯೂ ಗಗನ ಮಾರ್ಗದಿಂದ ಲಂಕೆಗೆ ಅಪಹರಿಸಿಕೊಂಡು ಹೋದನೆಂಬದನ್ನು ಪಕ್ಷಿರಾಜ ಜಟಾಯು ಹೇಳಿ ಅಸುನೀಗಿದ. ಅವನ ಮೃತದೇಹದ ಸಂಸ್ಕಾರವನ್ನು ಯಥೋಚಿತವಾಗಿ ಮಾಡಿ, ರಾಮಲಕ್ಷ್ಮಣರು ಮುಂದೆ ನಡೆದರು. ಅನಂತರ ತುಸು ಮಾರ್ಗ ಕ್ರಮಿಸುವಷ್ಟರಲ್ಲಿ ಅವನಿಗೆ ಕಬಂಧನೆಂಬ ಒಬ್ಬ ಶೀರ್ಷಹೀನ ರಾಕ್ಷಸ ಭೆಟ್ಟಿಯಾದ. ವಾಸ್ತವಿಕವಾಗಿ ಅವನು ಮಹಾತೇಜಸ್ವಿಯಾದ ದನುಪುತ್ರನಾಗಿದ್ದ ಅವನು ರಾಮಲಕ್ಷ್ಮಣರನ್ನು ಗುರುತಿಸಿ ''ಶ್ರೀರಾಮನು ಲಕ್ಷ್ಮಣ ಸಮೇತನಾಗಿ ಈ ವನಕ್ಕೆ ಬಂದಾಗ ಅವನು ನಿನ್ನ ಕೈಗಳನ್ನು ಕತ್ತರಿಸಿದಾಗ ನೀನು ಸ್ವರ್ಗಕ್ಕೆ

ಹೋಗುವಿ'' ಎಂದು ಇಂದ್ರನು ನನಗೆ ಹೇಳಿದ್ದಾನೆ. ಆದುದರಿಂದ ಶ್ರೀರಾಮಾ, ನನ್ನ ವಧೆ ಮಾಡಿ ದಹನ ಮಾಡಿ ಬಿಡು!'' ಎಂದು ಬೇಡಿಕೊಂಡ. ಆಗ ಶ್ರೀರಾಮ '' ಆಗಲಿ ನಿನ್ನ ಅಪೇಕ್ಷೆಯಂತೆ ಮಾಡುವೆ. ಆದರೆ ಯಾವನೋ ಲಂಕಾಪತಿ ರಾವಣನಂತೆ ಆತ ನನ್ನ ಸೀತೆಯನ್ನು ಹರಣಮಾಡಿಕೊಂಡು ಹೋದನೆಂದು ಪಕ್ಷಿರಾಜ ಜಟಾಯು ನನಗೆ ತಿಳಿಸಿದ. ಈ ಕುರಿತು ಸಾದ್ಯಂತ ವಿವರವನ್ನೇನ್ನಾದರೂ ಕೊಡಬಲ್ಲಿಯಾ?'' ಎಂಬುದಕ್ಕೆ ''ಶ್ರೀರಾಮಚಂದ್ರಾ ನನ್ನ ದೇಹ ದಹನವಾಗಲಿ ಮೊದಲು. ಅನಂತರ ಎಲ್ಲ ವಿವರವನ್ನು ನಿನಗೆ ನಾನು ಕೊಡಬಲ್ಲೆ'' ಎಂದನಾ ಕಬಂಧ. ಅದರಂತೆ ಶ್ರೀ ರಾಮಲಕ್ಷ್ಮಣರು ಸೇರಿ ಅವನನ್ನು ಒಂದು ತಗ್ಗಿನಲ್ಲಿ ಹಾಕಿ ದಹನ ಮಾಡಿದರು. ಆಗ ಅವನು ಪುನರ್ಜಾತನಾಗಿ ಅಗ್ನಿಕುಂಡದಿಂದ ಹೊರಬಂದು ಶ್ರೀ ರಾಮನಿಗೆ '' ಶ್ರೀರಾಮಚಂದ್ರ ನೀನು ಕಿಷ್ಕಿಂಧಾಪತಿ ಸುಗ್ರೀವನ ಸಖ್ಯ ಬೆಳೆಸು. ನಿನ್ನ ಪತ್ನಿಯನ್ನು ಶೋಧಿಸುವ ಕಾರ್ಯದಲ್ಲಿ ಆತನು ನಿನಗೆ ನೆರವು ನೀಡುವನು.'' ಎಂದು ನಿವೇದಿಸಿ ಮಾರ್ಗದರ್ಶನ ಮಾಡಿ ಅದೃಶ್ಯನಾದ.

## ಅಧ್ಯಾಯ -೩೪

## ''ನಿನ್ನ ದರ್ಶನದಿಂದ ಶಬರಿ ಧನ್ಯಳಾದಳು'' (ಶಬರಿ)

ಶ್ರೀ ರಾಮಲಕ್ಷ್ಮಣರು ಹಾಗೇ ಮುಂದೆ ಸಾಗಿ ಪಂಪಾಸರೋವರದ ಪಶ್ಚಿಮ ತೀರವನ್ನು ತಲುಪಿದಾಗ ಅವರಿಗೆ ಶಬರಿಯ ಆಶ್ರಮ ಹತ್ತಿತು. ಆ ತಪಸ್ವಿನಿಯು ಅವರ್ಣನೀಯ ಉತ್ಸಾಹದಿಂದ ಶ್ರೀರಾಮನೆದುರು ಬಂದು ನಿಂತು ನಮಸ್ಕರಿಸಿ ಸದ್ಭಾವನೆಯಿಂದ ಪುಲಕಿತಳಾಗಿ ''ಶ್ರೀರಾಮ ನಿನ್ನ ಚರಣಗಳು ನನ್ನ ಈ ಆಶ್ರಮವನ್ನು ಸ್ಪರ್ಶಿಸಿದವು. ಧನ್ಯಳಾದಳು ಈ ಶಬರಿ'' ಎಂದು ಶ್ರೀರಾಮಚಂದ್ರನ ಪಾದಗಳ ಮೇಲೆ ಮಸ್ತಕವನ್ನಿಟ್ಟು ಮಾತು ಮುಂದುವರಿಸಿದಳು.

''ಶ್ರೀ ರಾಮಚಂದ್ರ, ನಿನ್ನ ಮಹತಿಯನ್ನೆಂತು ವರ್ಣಿಸಲಿ ನಾನು! ಚಿತ್ರಕೂಟಕ್ಕೆ ನಿನ್ನ ಶ್ರೀ ಚರಣಗಳು ತಲುಪುವದೊಂದೇ ತಡ ಅದೆಷ್ಟು ಜನ ಮುನಿಗಳು ಮುಕ್ತರಾದರೆಂಬುದು ಗೊತ್ತೇ ನಿನಗೆ? ಅಪ್ಪಾ ರಾಮಾಚಂದ್ರಾ, ಈ ವೃಕ್ಷದಡಿಯಲ್ಲಿ ಬಂದು ಕ್ಷಣ ನಿಲ್ಲುವೆಯಾ? ನಿನ್ನನ್ನು ಪೂಜಿಸುವೆ. ''ಹೀಗೆ ನಿಲ್ಲು'' ಎಂದು ನುಡಿದೆ ನಿನಗೆ, ಮೂಢಳನ್ನು ಕ್ಷಮಿಸು.

ಇದೋ ನನ್ನ ನಯನಗಳಿಂದ ಆನಂದಾಶ್ರುಗಳು ಧಾರೆ ಹರಿದು ಬರುತ್ತಿದೆ. ಆದರಿಂದ ನಿನ್ನ ಪಾವನ ಪಾದಗಳ ಪ್ರಕ್ಷಾಲನವಾಗಲಿ. ಇದರಿಂದ ಪ್ರವಾಸದಲ್ಲಿ

ನಿಮಗಾದ ಶ್ರಮ ತುಸು ಪರಿಹಾರವಾದೀತು.

ಇನ್ನು ಇದು ಚಂದನ. **ಗುರು ಸೇವೆಯಲ್ಲಿಯೇ ನನ್ನ ಜೀವನವನ್ನು ತೇಯ್ದು ಇಟ್ಟಿರುವೆ. ವಿಲೇಪನಕ್ಕೆ ಅದೇ ನಿನಗೆ ಚಂದನ. ರೋಮಾಂಚನಗಳೇ ಪುಷ್ಪಗಳು.**

**ನಿಜ ಜ್ಞಾನದ ದೀಪವನ್ನು ಹಚ್ಚಿ ಇಟ್ಟಿರುವೆ. ಅದೇ ದೀಪ ನಿನಗೆ. ಆರತಿ ಅದು. ಶ್ಯಾಮ ವರ್ಣದ ಅನಂತನೇ ಇಂದು ನನ್ನೆದುರು ನಿಂತಿದ್ದಾನೆ. ಏನು ಭಾಗ್ಯ ನನ್ನದು! ಅವನಿಗೆ ಆತ್ಮನಿವೇದನ ಮಾಡುವೆ.**

ಇನ್ನು ನೈವೇದ್ಯಕ್ಕೆ ನಾನೇನು ಇಡಲಿ ಪ್ರಭುವಿಗೆ? ಪ್ರಸಾದವೆಂದು ಆತನಿಂದ ನಾನು ಏನು ಪಡೆಯಲಿ? ಚಕೋರನ ಮನೆಗಿಂದು ಹುಣ್ಣಿಮೆಯ ಚಂದ್ರ ಹಸಿದು ಬಂದಂತಾಗಿದೆ. ನನಗೇನು ಕೊರತೆ ಇಲ್ಲಿ? ಕಂದ ಮೂಲಗಳಿವೆ. ಬೋರೆಯ ಹಣ್ಣುಗಳಿವೆ ಎಂದು, ಶಬರಿಯು ''ರಾಮಚಂದ್ರಾ, ಈ ಕಂದಮೂಲಗಳನ್ನು ಭಕ್ಷಿಸು. ಪಕ್ವವಾಗಿರುವ ಮಧುರವಾಗಿರುವ ಈ ಬದರೀ ಫಲಗಳನ್ನು ಸೇವಿಸು.

ಇದೇನು ಈ ಬದರೀ ಫಲಗಳನ್ನು ಹಕ್ಕಿಗಳು ಕಚ್ಚಿದಂತಿವೆಯಲ್ಲ ಎಂದು ಅನುಮಾನಿಸುವೆಯಾ? ಅಲ್ಲ **ದೇವಾ, ಹಕ್ಕಿ ಕಚ್ಚಿದವುಗಳಲ್ಲಾ ಇವು. ಸಿಹಿ ಇವೆ ಎಂಬುದನ್ನು ಅರಿಯಲು ನಾನೇ ಕಚ್ಚಿ ನೋಡಿ ಸಿಹಿ ಇದ್ದವುಗಳನ್ನು ಮಾತ್ರ ನಿನ್ನೆದುರು ಇಟ್ಟಿರುವೆ. ಮೋಸವಲ್ಲವಿದು, ಪ್ರೇಮ -ರಾಮಚಂದ್ರಾ''**

ಆಗ ಲಕ್ಷ್ಮಣ ಬದರೀ ಫಲಗಳ ಕಡೆಗೆ ನೋಡಿ ಸಂಶಯ ದೃಷ್ಟಿ ತಾಳಿದ್ದನ್ನು ಗಮನಿಸಿ ಶಬರಿ ''**ಯಾಕೆ ಸೌಮಿತ್ರೀ, ಏನು ಸಂಶಯ ನಿನಗೆ ? ಎಂಜಲವೆಂದು ತಾನೇ? ಅಲಪ್ಪ ಅಲ್ಲ . ಅಭಿಮಂತ್ರಿಸಿದ ಬದರೀ ಫಲಗಳಿವು. ನಿಃ ಸಂಕೋಚದಿಂದ ಸೇವಿಸು.** ಈ ಶಬರಿಯ ವನದಲ್ಲಿ ನಿತ್ಯ ವೇದದ ಮಾಧುರ್ಯವಿರುತ್ತದೆ ಬಲ್ಲೆಯಾ?'' ಹೀಗೆ ಅನ್ನುತ್ತಿದ್ದಂತೆಯೇ **ಶ್ರೀರಾಮನ ದರ್ಶನದಿಂದ ಪಾವನಳಾದ ಶಬರಿ ತನ್ನ ಇಚ್ಛೆಯಂತೆ ಆತ್ಮಾನಂದದಿಂದ ಗುರುವಿನ ಅನಂತನಲ್ಲಿ ಲೀನವಾಗಿ ಹೋದಳು.**

## ಅಧ್ಯಾಯ - ೩೫

## ''ಸುಗ್ರೀವನಿಂದು ರಾಘವನ ಸನ್ಮಿತ್ರನಾದ'' (ಸುಗ್ರೀವ)

ಶ್ರೀರಾಮಲಕ್ಷ್ಮಣರು ಶಬರಿಯ ಆಶ್ರಮದಿಂದ ಹಾಗೇ ಮುಂದೆ ಸಾಗಿ ಋಷ್ಯಮೂಕ ಪರ್ವತಕ್ಕೆ ಬಂದರು. ರಾಜ್ಯಪದಭ್ರಷ್ಟನಾದ ಕಪಿ ಶ್ರೇಷ್ಠ ಸುಗ್ರೀವ

ಹನುಮಂತನನ್ನೊಳಗೊಂಡು ತನ್ನ ಮಂತ್ರಿಗಳ ಸಮೇತ ತಲೆ ತಪ್ಪಿಸಿಕೊಂಡು ಇದೇ ಪರ್ವತದ ಮೇಲೆ ತಿರುಗುತ್ತಿದ್ದ. ಸುಗ್ರೀವನ ಅಣ್ಣ ವಾಲಿಯು ಆತನ ಪತ್ನಿಯನ್ನು ಬಲಾತ್ಕಾರದಿಂದ ಅಪಹರಿಸಿ ಅವನನ್ನು ಕಿಷ್ಕಿಂಧದಿಂದ ಹದ್ದು ಪಾರು ಮಾಡಿದ್ದ. ರಾಮಲಕ್ಷ್ಮಣರು ಬರುತ್ತಿರುವುದನ್ನು ದೂರದಿಂದಲೇ ಕಂಡ ಸುಗ್ರೀವ ಅಣ್ಣ ವಾಲಿಯೇ ತನ್ನ ಮೇಲೇರಿ ಬರಲು ಇಬ್ಬರು ಧನುರ್ಧರನ್ನು ಕಳುಹಿಸರಬೇಕೆಂಬ ಶಂಕೆಯಿಂದ ಆತನು ಮಲಯ ಪರ್ವತ ಮೇಲೆ ಓಡಿ ಹೋಗಿ, ವಸ್ತುಸ್ಥಿತಿಯನ್ನು ಅರಿತುಕೊಂಡು ಬರಲು ತನ್ನ ಮಂತ್ರಿ ಹನುಮಂತನನ್ನು ಕಳುಹಿಸಿದ. ಸಚಿವೋತ್ತಮ ಹನುಮಂತ ಶ್ರೀರಾಮನನ್ನು ಮೊದಲ ಸಲ ಸಂಧಿಸಿದ ಸಂದರ್ಭವಿದು. ಈ ಪ್ರಥಮ ದರ್ಶನದಲ್ಲಿಯೇ ಶ್ರೀರಾಮ ಮತ್ತು ಹನುಮಂತ ಇವರಲ್ಲಿ ಸ್ನೇಹ ಭಾವ ನಿರ್ಮಾಣವಾದುದು. ಇಬ್ಬರೂ ಪರಸ್ಪರ ಆಕರ್ಷಿಸಿದರು. ಹನುಮಂತನೇ ಶ್ರೀರಾಮನಿದ್ದಲ್ಲಿಗೆ ಸುಗ್ರೀವನನ್ನು ಕರೆತಂದು ಪರಸ್ಪರ ಪರಿಚಯ ಮಾಡಿಕೊಟ್ಟ. ಇಬ್ಬರೂ ಸಮಯೋಚಿತವಾಗಿ ಮಾತು ಆಡಿದರು, ವಿಚಾರ ವಿನಿಮಯವಾಯಿತು. ಇಬ್ಬರೂ ಪರಸ್ಪರರನ್ನೂ ಅರಿತುಕೊಂಡರು. ಸಮದುಖಿಃಗಳಾದ ಇಬ್ಬರಲ್ಲಿ ಸ್ನೇಹ ದೃಢವಾಯಿತು. ಇಬ್ಬರೂ ಕೈ ಕುಲಕಿದರು. ಸಮ್ಮುಖದಲ್ಲಿ ಪ್ರಜ್ವಲಿತ ಅಗ್ನಿನಾರಾಯಣನ ಸಾಕ್ಷಿಯಾಗಿ ಸುಗ್ರೀವ ಶ್ರೀ ರಾಮನಿಗೆ ಹೇಳಲು ಪ್ರಾರಂಭಿಸಿದ.

''ವ್ಯೋಮ ಪೃಥ್ವಿಗಳಿಗೆ ಅಗ್ನಿನಾರಾಯಣನಿಗೆ ಸಾಕ್ಷಿಯಾಗಿ ಹೇಳುತ್ತೇನೆ. ಈ ಸುಗ್ರೀವ ಇಂದು ರಾಘವನ ಸನ್ಮಿತ್ರನಾದ.''

ಶ್ರೀರಾಮ ನಾನಾದರೂ ನಿನ್ನಂತೆಯೇ ವನವಾಸಿ ಆಗಿರುವೆನೆಂಬುದು ನಮ್ಮ ಸಚಿವೋತ್ತಮ ಹನುಮಾನನಿಂದ ನಿನಗೆ ಸಾದ್ಯಂತ ವಿಷಯ ತಿಳಿದಿರಲು ಸಾಕು. ''**ದುಃಖಿತನಿಗೆ ದುಃಖದಲ್ಲಿ ದುಃಖಿಯಾದವನೇ ಸಹಾಯವಾಗುತ್ತಾನೆ**'' ಎಂಬುದು ಸುಳ್ಳಲ್ಲ.

ಶ್ರೀರಾಮಾ, ಏನು ಹೇಳಲಿ ನನ್ನ ಸ್ಥಿತಿಯನ್ನು? ನನ್ನಾ ಬಂಧುವೇ ನನಗೆ ವೈರಿಯಾದ . ಆತ ನನ್ನ ಸುಶೀಲ ಭಾರ್ಯೆಯನ್ನೇ ಬಲಾತ್ಕರಿಸಿ ನನ್ನನ್ನು ಕಿಷ್ಕಿಂಧದಿಂದ ಹದ್ದು ಪಾರು ಮಾಡಿದ. ಅವನನ್ನು ನರಕಕ್ಕೆ ಕಳಿಸೋ ಮೊದಲು ನೋಡೋಣ.

ರಾಹುವಿನ ಬಾಹುಗಳಲ್ಲಿ ನಿಸ್ತೇಜನಾಗಿರುವೆ. ಆದರೆ ಕಳೆದು ಹೋದ ರಾಜ್ಯ ಪುನ: ಲಭಿಸಲಿ ನೋಡು. ರಾಮಾ, ಆಗ ನಾನು ತುಂಬಾ ಶಕ್ತಿ ಶಾಲಿಯಾಗುವೆ. ನನ್ನ ಶೌರ್ಯವನ್ನು ನನ್ನ ಮುಖದಿಂದ ನಾನೇ ವರ್ಣನೆ ಮಾಡಲಾರೆ. ಪ್ರತಕ್ಷದಲ್ಲಿ ನೀನೇ ನೋಡುವಿಯಂತೆ. ಆ ನಮ್ಮ ವಾನರ ಸೈನ್ಯ ಮರಳಿ ನನ್ನ ಕೈಗೆ ಬರಲಿ ನೋಡು, ಅವರೆಲ್ಲರೂ ರಾವಣನ ಶತ್ರುಗಳಾದಾರು. ಗುಡ್ಡಗಳನ್ನು ಅಗಿಯುವರು, ಸಮುದ್ರವನ್ನು ದಾಟುವರು,

ಮತ್ತು ಸೀತಾದೇವಿಯನ್ನೂ ಅವರೇ ಶೋಧಿಸಿ ತರುವರು. ಇದರಲ್ಲಿ ಸಂದೇಹವೇನೂ ಇಲ್ಲ. ಶ್ರೀರಾಮಚಂದ್ರಾ, ನನ್ನ ವಾನರ ಸೈನ್ಯದ ಸ್ವಾಮಿಭಕ್ತಿ ಸ್ವಾಮಿನಿಷ್ಠೆ ಇವು ಅವರಲ್ಲಿ ತುಂಬ ಜಾಗೃತ. ಪರೀಕ್ಷಿಸಿ ನೋಡು ಬೇಕಾದರೆ, ಸರ್ವಸ್ವವನ್ನೂ ಅರ್ಪಿಸಲು ಅವರು ಸಿದ್ಧರಾಗುವರೆಂಬುದನ್ನು ಒಮ್ಮೆ ಕಣ್ಣುಗಳಿಂದಲೇ ನೋಡುವಿ.

ಅಂತೂ ನಮ್ಮಿಬ್ಬರಲ್ಲಿ ಇಂದು ಸಖ್ಯವಾಯಿತು. ಇದೋ ಹಿಡಿ ನಿನ್ನ ಕೈಯಲ್ಲಿ ನನ್ನ ಕೈಯನ್ನು. ಭಯಂಕರವಾದುದು ಯಾವುದಿದೆ ಇನ್ನೂ ಭಯಪಡಲು? ಆದರೆ ಕ್ಷಮೇಂದ್ರನಾದ ಶ್ರೀರಾಮಚಂದ್ರಾ, ನನ್ನ ಬಂಧು ವಾಲಿಯನ್ನು ವಧೆ ಮಾಡಲು ಮೊದಲು ಸಿದ್ಧನಾಗು ಎಂದಿಷ್ಟೇ ನಾನು ನಿನ್ನನ್ನು ಕೇಳಿಕೊಳ್ಳುವುದು.

ಸೀತಾದೇವಿ ಅವಳೆಲ್ಲಿಯೇ ಇರಲಿ ಪೃಥ್ವಿಯನ್ನೇ ತಿರುವಿಹಾಕಿ, ಅವಳನ್ನು ಶ್ರೀರಾಮಚಂದ್ರನ ಸಾಮೀಪ್ಯಕ್ಕೆ ತಂದು ಇಡುವೆ, ಈ ನನ್ನ ಪ್ರತಿಜ್ಞೆಗೆ ಅಡ್ಡ ಬಂದವರನ್ನು ಸ್ವರ್ಗಕ್ಕಟ್ಟುವೆ.

ಈ ವರೆಗೆ ಸಚಿವರಾಗಿದ್ದ ಹನುಮಾನ, ಅಂಗ ಮೊದಲಾದವರೇ ಕೇಳಿರಿ. **''ನೀವಿನ್ನು ನನಗೆ ಸಚಿವರಲ್ಲ ಎಂಬುದನ್ನು ತಿಳಿಯಿರಿ. ನಿಮ್ಮ ಸುಗ್ರೀವನು ನಿಮ್ಮಂತೆಯೇ ಒಬ್ಬ ಮಂತ್ರಿಯೇ ಇನ್ನು. ಈ ಭೂಮಿಗೆಲ್ಲ ಅರಸು ಒಡೆಯ ಶ್ರೀರಾಮನೇ. ಆದುದರಿಂದ ಶ್ರೀರಾಮನಾಜ್ಞೆಯೇ ನಮ್ಮೆಲ್ಲರಿಗೂ ಇನ್ನು ಸನ್ಮಾನ್ಯ''** ಎಂದು ಸುಗ್ರೀವ ಸಾರಿದ.

## ಅಧ್ಯಾಯ - ೩೬

## ''ವಾಲಿಯ ವಧವಲ್ಲ ಖಲ ನಿರ್ಧಲನ ದುಷ್ಟತನದ ನಿರ್ಮೂಲನವಿದು'' (ಶ್ರೀರಾಮ)

ಸುಗ್ರೀವನು ಈ ರೀತಿಯಾಗಿ ಅಗ್ನಿಸಾಕ್ಷಿಯಾಗಿ ಸನ್ಮಿತ್ರನಾಗಿ ಶ್ರೀರಾಮಚಂದ್ರನ ಸಾಮಿತ್ವವನ್ನು ಸಾರಿದ ನಂತರ ಶ್ರೀರಾಮ ಆತನಿಗೆ ಸಹಾಯ ಮಾಡಲು ವಚನವಿತ್ತ. ಸುಗ್ರೀವ ವಾಲಿಗೆ ಯದ್ಧದ ಆವಾಹನವನ್ನಿತ್ತ. ವಾಲಿ ಸುಗ್ರೀವರ ನಡುವೆ ನಿಖರದ ಕಾದಟ ನಡೆಯಿತು. ಆದರೆ ಯುದ್ಧದಲ್ಲಿ ಸುಗ್ರೀವನು ಪರಾಜಿತನಾಗುವ ಚಿನ್ಹೆಗಳು ತೋರಿದೊಡನೆ ಶ್ರೀರಾಮನು ಮರೆಯಲ್ಲಿ ನಿಂತು ವಾಲಿಗೆ ಬಾಣ ಬಿಟ್ಟ. ಆಗ ವಾಲಿಯು ಮೃತ್ತಪ್ರಾಯವಾಗಿ ಭೂಮಿಯ ಮೇಲೆ ಉರುಳಿದ. ತಾನು ಶ್ರೀರಾಮನಿಗೆ ಯಾವುದೇ ರೀತಿಯ ಅಪರಾಧ ಮಾಡದಿರುವಾಗ ಆತನ ಬಾಣದಿಂದ ತನಗೆ ಮರಣ ಸನ್ನಿಹಿತವಾದುದು ತಿಳಿಯಿತವನಿಗೆ. ಕಳವಳಗೊಂಡು ಶ್ರೀರಾಮನಿಗೆ '' **ರಾಮಾ, ನಾನು**

**ನಿನ್ನೆದುರು ಯುದ್ಧಕ್ಕೆ ನಿಲ್ಲದಿರುವಾಗ ಮರದ ಮರೆಗೆ ನಿಂತು ನನ್ನನ್ನು ವಧೆ ಮಾಡಿ ಅದೆಂತಹ ಪುರುಷಾರ್ಥ ನೀನು ಸಾಧಿಸಿದ್ದು?'' ಆಗ ರಾಮ ಹೇಳುತ್ತಾನೆ ''ಇದು ವಾಲಿಯ ವಧೆಯಲ್ಲ ಖಲ ನಿರ್ದಲನ, ದುಷ್ಟತನದ ನಿರ್ಮೂಲನತನ ಮಾಡಿದಂತೆ ಇದನ್ನು ಈ ನಿನ್ನಾ ಅಂತ್ಯಾವಸ್ಥೆಯಲ್ಲಿ ಈಗಾದರೂ ನೀನು ಅರಿತುಕೋ.**

''ವಾಲಿಯೇ, ಈ ಧರೆ ಎಲ್ಲವನ್ನೂ ನ್ಯಾಯನೀತಿಯನ್ನರಿತಂಥ ನನ್ನ ತಮ್ಮ ಭರತ ಆಳುತ್ತಿದ್ದಾನೆ. ರಾಜನಂತೆ ಪ್ರಜೆಗಳು ನಾವದರೂ ನ್ಯಾಯನೀತಿಯನ್ನು ಬಿಟ್ಟು ಹೋಗುವವರಲ್ಲ. ನಿನ್ನ ವಧೆ ನ್ಯಾಯನೀತಿಗೆ ಸಮ್ಮತಿಸಿಯೇ ಇದೆ. ''ತಮ್ಮನು ಪುತ್ರಸಮಾನ'' ಎಂದು ಧರ್ಮ ಹೇಳುತ್ತದೆ. ಹೀಗಿರುವಾಗ ಪುತ್ರಸಮಾನನಾದ ನಿನ್ನ ತಮ್ಮ ಸುಗ್ರೀವನ ಸತಿಯನ್ನು ಹರಣಮಾಡಿಕೊಂಡು ಒಯ್ದಿರುವಿಯಲ್ಲ ನೀನು! ನಿನ್ನ ಮನ, ಹೀನ ಪ್ರಲೋಭಗಳಿಂದ ತುಂಬಿದೆ.

ಮದದ ಮೂರ್ತಿಯಂತೆ ಪ್ರತ್ಯಕ್ಷ ಮೂರ್ತಿಯೇ ನೀನಾಗಿರುವಿ. ಆದುದರಿಂದ ಈ ರೀತಿಯ ವಧೆಯ ಶಿಕ್ಷೆ ನಿನಗೆ ಯೋಗ್ಯವೇ ಆಗಿದೆ. ಬೇಟೆಗಾಗಿಯೇ ಮೃಗ ಪಶು ಮರಣ ಹೊಂದುವಂತೆ, ಪಶು ಸಮಾನನಾದ ವಿಷಯಾಂಧನಾದ ನಿನ್ನ ಅಂತ್ಯವು ಈ ರೀತಿ ಆದುದೇ ಯೋಗ್ಯ.

ವಾಲೀ, ರಾಜನು ಅಡವಿಯಲ್ಲಿ ಬೇಟೆಗೆ ಹೋದಾಗ ಗಿಡಗಳ ಮರೆಯಿಂದಲೇ ಬೇಟೆಗಳ ಮೇಲೆ ಬಾಣ ಬಿಡುವುದಿಲ್ಲವೆ? ಇದೊಂದು ವಿಧದ ಕ್ರೀಡೆ. ದೋಷವೇನಿದೆ ಇದರಲ್ಲಿ ? ಕ್ರೂರ ಪಶುಗಿಂತ ಕ್ರೂರ ನೀನು. ಶಾಖಾಮೃಗ. ಆದುದರಿಂದ ನಿನ್ನ ವಧೆ ಹೀಗೆ ಆದುದೇ ಯೋಗ್ಯವಾಗಿದೆ. ಸುಗ್ರೀವನಿಗೆ ಜೀವಕ್ಕೆ ಜೀವ ಕೊಡುವೆನೆಂದು ಭಾಷೆ ಕೊಟ್ಟಿರುವೆ. ತಮ್ಮನ ಸಲುವಾಗಿ ಅಣ್ಣನ ವಧೆ ಮಾಡಿ ನಾನಿತ್ತ ವಚನ ಪಾಲಿಸಿದೆ.

ಆದರೂ ವಾಲೀ, ನಿನಗೆ ಅಂತ್ಯದಲ್ಲಿ ಮೋಕ್ಷವಾಗಲೆಂದು ಹಾರೈಸುವೆ. ಚಿಂತಿಸಬೇಡ . ನಿನ್ನ ತಮ್ಮನನ್ನು ನಾನು ನೋಡಿಕೊಳ್ಳುತ್ತೇನೆ. ನಿನ್ನ ರಾಜ್ಯ ಇಂದು ಸುಗ್ರೀವನ ಕರಗಳಲ್ಲಿ ಸಮರ್ಪಣೆ ಎಂದು ಶ್ರೀರಾಮನೆಂದಾಗ ವಾಲಿ ಸಮಾಧಾನದಿಂದ ಅಸುನೀಗಿದ.

ಶ್ರೀ ರಾಮನು ವಾಲಿಯ ವಧೆ ಮಾಡಿದ ನಂತರ ಸುಗ್ರೀವನಿಗೆ ಕಿಷ್ಕಿಂಧದ ರಾಜ್ಯ ಪ್ರಾಪ್ತವಾಯಿತು. ಸುಗ್ರೀವ ರಮೆಯರ ಮಧುರ ಪುನರ್ಮಿಲನವಾಯಿತು. ವಿಲಾಸದಲ್ಲಿ ಮಗ್ನನಾದ ಆತನಿಗೆ ಶ್ರೀರಾಮ ಕಾರ್ಯದ ವಿಸ್ಮೃತಿ ಆಯಿತು. ಲಕ್ಷ್ಮಣ ಸಂತಾಪದಿಂದ ಅವನಿಗೆ ಕರ್ತವ್ಯದ ನೆನಪು ಮಾಡಿಕೊಟ್ಟಾಗಲೇ ಅವನ ಕಣ್ಣುಗಳು ತೆರೆದವು. ಸುಗ್ರೀವನು ತನ್ನ ಎಲ್ಲ ವಾನರ ಗಣಗಳನ್ನು ನಿಮಂತ್ರಿಸಿದ. ಆತನ ಆಜ್ಞೆಯಂತೆ ಕೋಟ್ಯಾವಧಿ ವಾನರರು

ಒಂದೆಡೆ ಬಂದು ಸೇರಿದರು. ಸೀತಾದೇವಿಯ ಶೋಧನೆಗೆ ಸುಗ್ರೀವ ಅವರನ್ನು ಎರಡು ದಿಕ್ಕುಗಳಿಗೂ ಕಳುಹಿಸಿದ. ಈ ಮಹತ್ ಕಾರ್ಯ ಹನುಮಾನನಿಂದಲೇ ಆದೀತೆಂಬುದನ್ನು ಗುರುತಿಸಿ, ಶ್ರೀರಾಮನು ತನ್ನ ಬೆರಳಿನಲ್ಲಿಯ ಮುದ್ರಿಕೆಯನ್ನು ಆತನ ಕೈಗಿತ್ತ.

ವಾನರ ಸೇನೆಯ ತಂಡಗಳು ಎಂಟು ದಿಕ್ಕುಗಳಿಗೂ ಸಾಗಿದವು. ದಕ್ಷಿಣದ ಕಡೆಗೆ ನಡೆದ ತಂಡದಲ್ಲಿ ಹನುಮಾನ, ನೀಲ, ಅಂಗದ, ತಾರ, ಜಾಂಬವಾನ ಮುಂತಾದ ವೀರರಿದ್ದರು. ಅವರೆಲ್ಲ ಸೇರಿ ಎಲ್ಲ ಕಡೆಗೆ ನೋಡಿ ಆಯಿತು. ಅದೆಷ್ಟು ಶೋಧಿಸಿದರೂ ಸೀತೆಯ ಸುಳಿವು ಸಿಗಲಿಲ್ಲ. ಕಪಿಶ್ರೇಷ್ಠನಿಗೆ ಏನೂ ತೋಚದಂತಾಯಿತು. ವಾಲಿ ಪುತ್ರ ಅಂಗದನಂತೂ ತೀರಾ ಹತಾಶನಾದ. ಸೀತಾದೇವಿಯ ಶೋಧನೆಗಾಗಿ ಸುಗ್ರೀವ ಶ್ರೀರಾಮನಿಗಿತ್ತ ಒಂದು ತಿಂಗಳ ಅವಧಿ ಮುಗಿದು ಹೋಯಿತು. ಅವರೆಲ್ಲ ನಿರಾಶರಾಗಿ ಏನು ಮಾಡಬೇಕೆಂಬುದು ತಿಳಿಯದೇ ಆ ಎಲ್ಲ ಕಪಿಶ್ರೇಷ್ಠರು ಒಂದು ಪರ್ವತದ ಮೇಲೆ ಬಂದು ಕುಳಿತರು.

ಅಷ್ಟರಲ್ಲಿ ಅಲ್ಲಿಗೆ ಜಟಾಯುವಿನ ಬಂಧುವೂ ದಶರಥರಾಜನ ಮಿತ್ರನೂ ಆದ ಸಂಪಾತಿ ಎಂಬ ಗೃಧ್ರರಾಜನು ಅಲ್ಲಿ ಇವರ ಸಾಮೀಪ್ಯಕ್ಕೆ ಬಂದು ''ಮಿತ್ರರೇ, ನನಗೆ ಚತುಷ್ಷಷ್ಠಿ ವಿದ್ಯೆ ಅವಗತವಿದೆ. ಬಹು ದೂರವಿದ್ದುದನ್ನೂ ನಾನು ಇಲ್ಲಿಂದಲೇ ಈಕ್ಷಿಸಬಲ್ಲೆ. ನನಗೆ ಇಲ್ಲಿಂದಲೇ ಜನಕ ಕನ್ಯೆ ಮತ್ತು ರಾವಣ ಕಾಣಿಸುತ್ತಾರೆ. ಸೀತಾದೇವಿಯು ಈಗ ಸುವರ್ಣದ್ವೀಪದಲ್ಲಿರುವ ಲಂಕೆಯಲ್ಲಿ ರಾವಣನ ಅಶೋಕ ವನದಲ್ಲಿ ಬಂಧಿಸಲ್ಪಟ್ಟಿರುವಳು. ಈ ಕ್ಷಾರ ಸಮುದ್ರದ ಅಪಾರ ಜಲಸ್ತೋಮವನ್ನು ಉಲ್ಲಂಘಿಸಿ ಆ ಕಡೆಗೆ ಹೋಗುವ ಉಪಾಯವನ್ನೇನಾದರೂ ಕಂಡು ಹಿಡಿಯಿರಿ. ''ಎಂದು ಆ ಗೃಧ್ರರಾಜ ಸಲಹೆಯನ್ನಿತ್ತ . ಆಗ ಅಂಗದಾದಿಗಳು ನಮ್ಮಲ್ಲಿ ಸಮುದ್ರವನ್ನು ಉಲ್ಲಂಘಿಸಬಲ್ಲಂತಹ ಸಾಮರ್ಥ್ಯ ಯಾರಲ್ಲಿದೆ ಎಂದು ಬಹುಪರಿಯಿಂದ ವಿಚಾರ ಮಾಡ ಹತ್ತಿದ್ದರು. ಕಡೆಗೆ ಜಾಂಬವಂತನೆಂದ ''ಮಿತ್ರರೇ, ಈ ಮಹಾನ್ ಕಾರ್ಯವನ್ನು ನಮ್ಮೊಳಗೆ ಒಬ್ಬ ಹನುಮಾನನೇ ಸಾಧಿಸಬಲ್ಲ. ಅವನೇ ಸಮರ್ಥನು ಈ ಕಾರ್ಯಕ್ಕೆ''

## ಅಧ್ಯಾಯ-೩೭

## ''ಸಾಗರೋಲ್ಲಂಘನಮಾಡಬಲ್ಲವನೆಂದರೆ ಸಮರ್ಥಹನುಮಾನನೊಬ್ಬನೆ'' (ಜಾಂಬುವಂತ)

ಮಿತ್ರರೇ , ಗರುಡ ತನ್ನ ಕಾಲುಗಳಲ್ಲಿ ಸರ್ಪವನ್ನು ಕಚ್ಚಿಕೊಂಡು ಗಗನದಲ್ಲಿರೆಕ್ಕೆ ಹರಡಿ

ಒಂದೇ ನೆಗೆತಕ್ಕೆ ಸಮುದ್ರ ಲಂಘಿಸಬಹುದು. ಅಂತಹ ಗರುಡನಿಗಿಂತ ಬಲವಾನ ನಮ್ಮ ಹನುಮಾನ. ಆಂಜನೇಯ ಆತ್ಮಜನಿವ. ಅನಿಲನ ಸುಪುತ್ರನೀತ. ಮಹಾಬಲಾಶಾಲಿ ಧೀಮಾನ.ಇಚ್ಛಿಸಿದರೆ ತನ್ನ ನಿಜಶಕ್ತಿಯಿಂದ ದಿಗ್ಗಜಗಳನ್ನೇ ಹಣಿದಾನು.

ಈತನ ಜನ್ಮವಾದುದು ಸೂರ್ಯೋದಯಕ್ಕೆ. ಜನ್ಮಿಸಿದಾಕ್ಷಣ ಮೂರುನೂರು ಯೋಜನಗಳಷ್ಟು ದೂರ ಇವನು ಗಗನದೆಡೆಗೆ ನೆಗೆದ. ರವಿಬಿಂಬವೇ ಫಲವೆಂದು ಬಗೆದು ಅದನ್ನು ಹಿಡಿಯಲು ಹೋದ ಭಾಸ್ವಾನನೀತ.

ಈ ಬಾಲವೀರನು ರವಿಯನ್ನು ಹಿಡಿಯಲು ಮೂರು ಲೋಕಗಳು ಕಂಪಿಸತೊಡಗಿದವು. ಚಿಕ್ಕ ಬಾಲಕನ ಈ ಸಾಹಸಕ್ಕಾಗಿ ಮೇಘವಾನನಿಗೆ ವಜ್ರಹಿಡಿಯಬೇಕಾಗಿ ಬಂತು. ದೇವೇಂದ್ರನ ಆ ವಜ್ರಾಘಾತದಿಂದ ಇವನ ಗದ್ದಕ್ಕೆ ಅಲ್ಪ ಗಾಯವಾಯಿತು. ಆಗ ವಾಯುವಿಗೆ ಕೋಪ ತಡೆಯಲಾಗದೇ ಆತ ನಿಂತುಬಿಟ್ಟ.

ಪವನವೇ ನಿಂತ ಮೇಲೆ ಜೀವಿಗಳ ಜೀವನವೇ ನಿಂತಿತು. ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಆಗ ದೇವೇಂದ್ರ, ವಾಯುವಿನ ಸಾಂತ್ವನ ಮಾಡಿ ಅವನ ಪುತ್ರ ಹನುಮಾನನನಿಗೆ ವರವಿತ್ತ. ದೇವೇಂದ್ರನ **ಆ ವರದಿಂದ ಹನುಮಾನನು ಶಸ್ತ್ರವು ಭೇದಿಸದಂತಹ ರಣಾಗ್ರಣಿಯಾದ. ಹರಿ ಕೃಪೆಯಿಂದ ಇಚ್ಛಾಮರಣಿಯಾದ. ಇವನ ತೇಜದಿಂದ ಸೂರ್ಯ ಬೆಳಗ ಹತ್ತಿದ.**

ಹನುಮಂತಾ, ಈ ಮಹಾನ್‌ಕಾರ್ಯಕ್ಕೆ ನೀನೇ ಸಮರ್ಥ. ಏಳಿನ್ನೂ ನಮ್ಮಂತೆ ಸಾಮನ್ಯನಲ್ಲ ನೀನು. ವಾಮನನಂತೆ ಒಮ್ಮೆ ಪಾದವನ್ನೆತ್ತಿ ''ಜಯ ಜಯ ರಘುವೀರ ಸಮರ್ಥ'' ಎಂದು ಗರ್ಜಿಸಿ ಉಡ್ಡಾಣ ಮಾಡಿದಾಗ ಎರಡನೆಯ ನಿನ್ನ ಪಾದ ಲಂಕೆಯಲ್ಲಿಯೇ ಎಂಬುದು ನಿಶ್ಚಿತ'' ಎಂದು ಜಾಂಬುವಂತ ಹುರುದುಂಬಿಸಿದಾಗ ಹನುಮಾನನಲ್ಲಿಯೂ ಸ್ಫೂರ್ತಿ ತುಂಬಿ ಬಂತು.

# ಅಧ್ಯಾಯ - ೩೮

## ''ಶ್ರೀರಾಮನ ಸ್ವಾಮಿನಿ ಇವಳೇ '' (ಹನುಮಾನ)

ಹೀಗೆ ಹನುಮಂತನ ಅಸೀಮವಾದ ಸಾಮರ್ಥ್ಯವನ್ನು ಜಾಂಬುವಾನ ವರ್ಣನ ಮಾಡುತ್ತಿದ್ದಂತೆಯೇ ಆತನ ಬಾಹುಗಳು ತಾವೇ ಸ್ಫುರಿತತೊಡಗಿದವು. ನೋಡು ನೋಡುವಷ್ಟರಲ್ಲಿ ಆತ ಪ್ರಚಂಡ ರೂಪ ಧರಿಸಿ ನಿಂತ. ವಾನರರು ಆತನ ಅತ್ಯದ್ಭುತ ರೂಪವನ್ನು ಕಂಡು ತುಂಬಾ ಹರ್ಷಿತರಾಗಿ ಅವನ ಸುತ್ತುವರಿದು ಕುಣಿಯುತ್ತಾ ಅವನ ಸ್ತುತಿ ಮಾಡಲು ಪ್ರಾರಂಭಿಸಿದರು.

ಅನಂತರ ಕ್ಷಣಾರ್ಧದಲ್ಲಿ ಹನುಮಂತ ಮಹೇಂದ್ರ ಪರ್ವತವನ್ನೇರಿ ಲಂಕೆಯನ್ನು ನೆಗೆದು ಆಕಾಶಮಾರ್ಗದಿಂದ ಉಡ್ಡಾಣ ಮಾಡಿ ತ್ರಿಕುಟಾಚಲವನ್ನು ತಲುಪಿದ. ಇಂದ್ರನ ಅಮರಾವತಿಯಂತೆ ತೋರುವ ಲಂಕೆಯನ್ನು ಆತ ದೂರದಿಂದಲೇ ಅವಲೋಕಿಸಿದ. ಆ ಸಮೃದ್ಧ ನಗರವನ್ನು ರಕ್ಷಿಸಲು ಬಲಾಢ್ಯರಾದ ರಾಕ್ಷಸರು ದಕ್ಷರಾಗಿ ನಿಂತುದನ್ನು ಹನುಮಂತ ಕಂಡ. ನಗರವನ್ನು ಪ್ರವೇಶಿಸುವುದೇ ಕಠಿಣವಿತ್ತು. ಆದರೆ ಅವನು ತತ್‌ಕಾಲ ಸೂಕ್ಷ್ಮ ದೇಹಧಾರಿಯಾಗಿ ನಗರವನ್ನೆಲ್ಲಾ ಸುತ್ತಾಡಲು ಪ್ರಾರಂಭಿಸಿದ. ಲಂಕಾಧಿಪತಿ ರಾವಣನ ಅಂತಃಪುರವನ್ನೆಲ್ಲಾ ಅವನು ಶೋಧಿಸಿದ. ಆದರೆ ಮೈಥಿಲಿಯು ಆತನ ದೃಷ್ಟಿಗೆ ಎಲ್ಲಿಯೂ ಬೀಳಲಿಲ್ಲ. ಆಗ ಆತ ನಿರಾಶನಾಗಿ ಅಶೋಕವನ ಸುತ್ತಲಿನ ಎತ್ತರಿಸಿದ ಗೋಡೆಯನ್ನೇರಿ ಒಳಗಿನ ಅತ್ಯಂತ ಸುಂದರವಾದ ವನವನ್ನು ನೋಡಿದ ಮತ್ತು ಅಲ್ಲಿ ಬದಿಯಲ್ಲಿಯೇ ಇದ್ದ ಶಿಂಶಿಪಾ ವೃಕ್ಷವನ್ನೇರಿ ಕುಳಿತು ಹಾಗೇ ಕೆಳಗೆ ದೃಷ್ಟಿ ಬೀರಿದ. ಒಂದು ಅಶೋಕ ವೃಕ್ಷದಡಿಯಲ್ಲಿ ಒಬ್ಬ ಸ್ತ್ರೀ ರಾಕ್ಷಸಿಯರ ಕಾವಲಿನಲ್ಲಿ ಕುಳಿತುದು ಅವನಿಗೆ ಕಂಡಿತು. ಯಾರಿರಬಹುದು ಇವಳು? ಇವಳ ಸುತ್ತಲೂ ರಾಕ್ಷಸಿಯರೇಕೆ? ಆತ ಸೀತಾದೇವಿಯನ್ನು ಈ ಮೊದಲು ಎಂದೂ ಕಂಡಿರಲಿಲ್ಲ. ಶ್ರೀರಾಮನ ಸ್ವಾಮಿನಿ ಇವಳೇ ಎಂಬುದನ್ನು ದೃಢಪಡಿಸಿಕೊಳ್ಳಲು ಸೂಕ್ಷ್ಮವಾಗಿ ಅವಲೋಕಿಸತೊಡಗಿದ.

ಚಂದಿರನ ವಿರಹದಿಂದ ಬೆಂದ ರೋಹಿಣಿಯಂತಾಗಿರುವಳು ಇವಳು. ವ್ಯಾಘ್ರಗಳ ಮಧ್ಯ ಸಿಲುಕಿ ತಪ್ಪಿಸಿಕೊಂಡ ಹರಿಣಿಯಂತಾಗಿದೆ ಇವಳ ಸ್ಥಿತಿ. ಪಕ್ಷಿಯೊಂದು ತಪ್ಪಿ ಗಿಡುಗನ ಗೂಡಿಗೆ ಬಂದಂತಾಗಿದೆ. ಇವಳು ಹಿಮಪ್ರದೇಶದಲ್ಲಿ ತುಂಬಿ ಹರಿಯುವ ವಾಹಿನಿಯಂತಾಗಿರುವಳು. ಮುಖ ಮಲಿನವಾಗಿದೆ ಇವಳದು. ಸೊರಗಿ ಕಡ್ಡಿಯಂತಾಗಿದ್ದರೂ ಸುರೇಖೆ ಸುಂದರಳಿವಳು. ಶಿಶಿರ ಋತುವಿನಲ್ಲಿ ಚಂಪಕ ವೃಕ್ಷದ ಶಾಖೆಯಂತೆ ಇರುವಳು. ವ್ರತವನ್ನು ಹಿಡಿದ ಯೋಗಿನಿ ಇವಳು. ಇವಳೇ ನಮ್ಮ ಶ್ರೀರಾಮನ ಸ್ವಾಮಿನಿ ಇರಬಹುದು ಎಂದು ಅನುಮಾನಿಸಿದ ಹನುಮಾನ.

ಅತ್ತು ಅತ್ತು ಕಣ್ಣುಗಳಲ್ಲಿ ಅಂಧತೆ ಬಂದಂತಾಗಿದೆ. ಏನೋ ಪಾಪ. ಕಪೋಲಗಳ ಮೇಲೆ ಆರ್ದ್ರ ಶುಷ್ಕತೆ ಕಂಡು ಬರುವುದು. ಚಿಂತಾಕ್ರಾಂತಳಾಗಿರುವುದರಿಂದ ನಿದ್ರೆಯೇ ಇವಳಿಗೆ ಆದಂತೆ ಕಾಣುವುದಿಲ್ಲ. ಪತಿ ಚಿಂತನದಲ್ಲಿ ಈ ಸತಿ ಮಗ್ನಳಾಗಿ ಹೋಗಿರುವಳಲ್ಲ! ಮಲೀನವಾದ ಪಂಕದಲ್ಲಿದ್ದ ಪದ್ಮಿನಿಯಂತಿರುವಳು ಇವಳು. ಖಚಿತ ಖಚಿತ ಇವಳೇ ಇರಬೇಕು, ಆ ಸತಿ ಭೂಮಿಜಾ ಸೀತಾದೇವಿ.

ದೈವವೇ, ಎಂತಹ ದಾರುಣ ಸ್ಥಿತಿ ಇವಳದು! ಅತ್ಯಂತ ಮಾನಿನಿಯಾದರೂ ಅದೆಷ್ಟು ಅಪಮಾನಿತಳಾಗಿ ಇಲ್ಲಿ ಕುಳಿತಿರುವಳಲ್ಲ! ಆಹಾ! ಏನೀ ದೇವಿಯ ಮೈಬಣ್ಣ

ಸುವರ್ಣದಂತಿರುವಳು. ಈ ಶಶಾಂಕವದನೆಯು ಅಧೋಮುಖಳಾಗಿ ಕುಳಿತಿರುವಳು. ಸಂಧಿಗ್ಧದ ಸ್ಮೃತಿ ಇವಳು. ಅನಾಯ್ಯದಿಂದ ಗಳಿಸಿದ ಸಂಪತ್ತು ಇವಳು. ಒಂದು ಅಮೂರ್ತ ಚಿತ್ರವೇ ಇವಳಾಗಿರುವಳು. ಇಲ್ಲಿ ವನದಲ್ಲಿ ಪರಾಜಿತಳಾಗಿದ್ದರೂ ಕೀರ್ತಿಶಾಲಿನಿ ಇವಳು.

ಶ್ರೀರಾಮ ವರ್ಣಿಸುತ್ತಿದ್ದನಲ್ಲ ಅದೇ ಆಕೃತಿ ಇದು. ಏನೂ ವ್ಯತ್ಯಾಸ ಕಾಣಲೊಲ್ಲದು. ಇದರಲ್ಲಿ ಏನೂ ಸಂಶಯವಿಲ್ಲ. ಅದೇ ಮುಖಮುದ್ರೆ, ಬಹುಭೂಷಣ, ಪ್ರವಾಲಮುದ್ರಾ, ಎಲ್ಲ ಶ್ರೀರಾಮ ಹೇಳಿದಂತೆಯೇ ಇವೆ. ನಿಃಸಂಶಯ, ಇವಳೇ ಆ ಸುಭದ್ರೆ ಸೀತಾದೇವಿ. ಇವಳೇ ಆ ಜಾನಕಿ -ಜನಕನಂದಿನಿ. ಇದರಲ್ಲಿ ಸಂಶಯವಿಲ್ಲ. ಇಂಥದೇ ಒಂದು ಕುಂಡಲ ಇಂಥದೇ ಒಂದು ವಲಯ ಬಿದ್ದುದನ್ನು ರಘುರಾಮ ಎತ್ತಿ ಗುರುತಿಸಿದ್ದ. ಹೌದು ಹೌದು ಇವಳವೇ ಅವು. ಶ್ರೀರಾಮ ಕೃಪೆಯಿಂದ ಈ ತಾಯಿಯ ದರ್ಶನ ಒಮ್ಮೆ ಆಯಿತಲ್ಲ ನನಗೆ! ಎಂತಹ ಅಮೃತ ಗಳಿಗೆ ಇದು! ಯಶತಂದಿತೊಮ್ಮೆ ಇದು ಎಂದು ಮನದಲ್ಲಿ ಶ್ರೀರಾಮ ಜಯರಾಮ ಜಯ ಜಯ ರಾಮ ಎಂದು ಶ್ರೀರಾಮನನ್ನು ನೆನೆದ.

## ಅಧ್ಯಾಯ - ೩೯

## ''ವೃಥಾ ಬಡಬಡಿಸಬೇಡ ರಾವಣಾ'' (ಸೀತಾದೇವಿ)

ಈ ರೀತಿಯಾಗಿ ಹನುಮಂತನಿಗೆ ಇವಳೇ ಸೀತಾದೇವಿ ಎಂಬುದು ಖಚಿತವಾಗಿ ಗೊತ್ತಾಗಿದ್ದರೂ ಅವಳೆದುರು ಒಮ್ಮೆಲೇ ಹೋಗಿ ನಿಲ್ಲಲು ಅವನು ತುಸು ಹಿಂಜರಿದ. ಯಾಕೆಂದರೆ ಅವಳು ಇವನನ್ನು ಈ ಮೊದಲು ಎಂದೂ ನೋಡಿರಲಿಲ್ಲ. ಶ್ರೀರಾಮ ಸುಗ್ರೀವರ ಮಿತ್ರತ್ವವಾದುದೂ ಅವಳಿಗೆ ಕಲ್ಪನೆ ಇರಲಿಲ್ಲ. ಅಂದ ಮೇಲೆ ನಾನೂ ಒಬ್ಬ ಮಾಯವೀ ರಾವಣನೆಂದು ಅವಳು ಭಾವಿಸಿ ನನ್ನ ಸಂಗಡ ಮಾತಾಡಲು ಅವಳು ಸಮ್ಮತಿಸದೇ ಹೋದರೆ ಯಾರು ಕಂಡಾರು? ಈ ಪ್ರಕಾರವಾಗಿ ಹನುಮಂತ ವಿಚಾರಮಾಡುತ್ತಿದ್ದಾಗಲೇ ಸೇವಕರೊಂದಿಗೆ ರಾವಣ ಅಲ್ಲಿಗೆ ಬಂದು ಸೀತಾದೇವಿಗೆ ಬೆದರಿಕೆ ಹಾಕಲು ಪ್ರಾರಂಭಿಸಿದ. ಸಿಡಿಮಿಡದೆದ್ದ ನಾಗರಾಣಿಯಂತೆ ಪೂತ್ಕರಿಸುತ್ತಲೇ ಅವಳು ರಾವಣನಿಗೆ ಹೇಳಹತ್ತಿದ್ದಳು.

''ನಿಶಾಚರನಾದ ರಾವಣಾ, ವೃಥಾ ಹೀಗೆ ಬಡಬಡಿಸಬೇಡ. ನಾನು ರಾಮ ಕೀರ್ತಿಯ ಮೂರ್ತಸ್ವರೂಪಳೆಂದು ತಿಳಿ. ಸುರಾಸುರರೂ ಬಲ್ಲರಿದನು. ವಂದನಾರ್ಹಳು ನಾನು. ಪರಾಂಗನೆ, ಪತಿವ್ರತೆ. ತೀವ್ರ ನನ್ನನ್ನು ಮುಕ್ತಮಾಡಿ ಪುಣ್ಯಗಳಿಸು. ರಾವಣಾ, ನೀನು ನಿಜವಾಗಿಯೂ ವೀರನಾದರೆ ನಾರಿಯಾದ ನನ್ನ ಲಜ್ಜೆ ರಕ್ಷಿಸು. ಕೇಳಿಲ್ಲಿ

ರಾಜನಾದವನು ಪಾಪ ಕರ್ಮಗಳಿಗೆ ಎಡೆಗೊಡಬಾರದು. ಯಾಕೆಂದರೆ, ಅತನು ಮಾಡುವ ಪಾಪಗಳಿಂದ ಅನ್ಯಾಯಗಳಿಂದ, ಆತನ ರಾಜ್ಯ ಹೆಸರಿಗೆ ಮಾತ್ರ ಜಗತ್ತಿನ ಮೇಲೆ ಉಳಿದೀತು. ಹೀಗಿರುವಾಗ ನಿನ್ನ ಕೈಗಳಿಂದಲೇ ನಿನ್ನ ಪುರವನ್ನು ದಹಿಸಬೇಕೆನ್ನುವಿಯಾ? ವಿಚಾರಮಾಡು.

ರಾವಣಾ ಲೋಕನಾಥ ರಾಮನೇ ನನ್ನ ನಯನಗಳೆದುರು ನಿಲ್ಲುತ್ತಾನೇ ಹೊರತು ಬೇರಾರೂ ಕಾಣುವುದಿಲ್ಲ ನನಗೆ. ಹಾಗೇ ಒರಗಿದನೋ ಶ್ರೀರಾಮನ ವಾಮಹಸ್ತ ನನಗೆ ದಿಂಬು ಆಗುವುದು. ಆ ಧನುರ್ಧರನನ್ನೆ ನಿತ್ಯ ಚಿಂತನದಿಂದ ನಾನು ಪೂಜಿಸುತ್ತಿರುವೆ. ನಾನು ಆತನಿಗೇ ಮಾತ್ರ ತಕ್ಕವಳು ಹೊರತು ಬೇರಾರಿಗೂ ಅಲ್ಲ. ಆದುದರಿಂದ ನನ್ನನ್ನು ನನ್ನ ಪ್ರಿಯ ಶ್ರೀರಾಮಚಂದ್ರನ ಸಾಮೀಪ್ಯಕ್ಕೆ ಮರಳಿ ಕಳಿಸು. ಅವನಿಗೆ ಶರಣಾಗತನಾಗು. ಶ್ರೀರಾಮ ನಿನಗೆ ಆಶ್ರಯ ಕೊಡುವನು. ಆತನೊಡನೆ ಸಖ್ಯಮಾಡು, ಮತ್ತು ನಿತ್ಯ ಶುದ್ಧಳಾದ ಈ ಜಾನಕಿಯನ್ನು ರಾಘವನಿಗೆ ಒಪ್ಪಿಸಿ ಜೀವನದಲ್ಲಿ ಕೃತಾರ್ಥನಾಗು ರಾವಣಾ.

ಒಂದು ವೇಳೆ ರಾಮಚಂದ್ರ ಕೆರಳಿದರೆ, ಒಂದು ಕ್ಷಣಕೂಡ ಮುಂದೆ ನಿನ್ನ ಆಯುಷ್ಯ ಉಳಿಯದು. ಇಂದ್ರನ ವಜ್ರಾಯುಧದ ಗುರಿ ಒಂದು ವೇಳೆ ತಪ್ಪೀತು. ಆದರೆ ರಾಮಬಾಣ ವ್ಯರ್ಥವಾಗದು. ಪ್ರಳಯಕ್ಕಿಂತ ಭಯಂಕರವಾದುದೆಂಬುದನ್ನು ನೆನಪಿಡು ರಾವಣಾ. ಒಂದು ವೇಳೆ ನಿನ್ನ ದುರದೃಷ್ಟದಿಂದ ಆ ಮಹಾವೀರ ಶ್ರೀರಾಮ ಯುದ್ಧಕ್ಕೆ ನಿಂತುದಾದರೆ, ನಿನ್ನೊಬ್ಬನನ್ನೇ ಅಲ್ಲ ನಿನ್ನ ವಂಶವನ್ನು ಕೂಡ ಅವನು ಇಡುವವನಲ್ಲ. ಅಂಥ ಸಮರ್ಥ ಆ ಶ್ರೀರಾಮ. ಆದುದರಿಂದ ಅಧಮನೇ, ಕಾಮಾಂಧನೇ, ಈಗಾದರೂ ತುಸು ವಿಚಾರ ಮಾಡಿ ನೋಡು. ಇಲ್ಲದಿದ್ದರೆ ನಿನ್ನ ದೇಹದ ಸರ್ವಭಾಗಗಳಲ್ಲಿ ನೇರವಾಗಿ ರಾಮಾಬಾಣ ಸೇರುವದನ್ನು ನನ್ನ ಕಣ್ಣುಗಳು ಕಾಣುವವು ಆಗಿಹೋಗಿಲಿ. ವಸುಂಧರೆ ಒಮ್ಮೆ ಭಾರಮುಕ್ತಳಾದರೂ ಆಗಲಿ'' ಎಂದು ಸಿಡಿಮಿಡಿದೆದ್ದು ಸೀತಾದೇವಿ ನುಡಿದಾಗ ರಾವಣಾ ಅಲ್ಲಿಂದ ಕಾಲ್ತೆಗೆದ. ಮಹಾ ಪತಿವ್ರತೆಯಾದ ಜಾನಕಿಯು ಈ ರೀತಿಯಾಗಿ ಸಂತಾಪದಿಂದ ಕಿಡಿಕಿಡಿಯಾಗಿ ನುಡಿದುದನ್ನು ಕೇಳಿ ರಾವಣನಂತಹ ಪಾಪಾತ್ಮನೂ ಕ್ಷಣಕಾಲ ಗಾಬರಿಗೊಳ್ಳದೇ ಉಳಿಯಲಿಲ್ಲ. ಜನಸ್ಥಾನದಲ್ಲಿಯ ಶ್ರೀರಾಮಲಕ್ಷ್ಮಣರ ಅತುಲಪರಾಕ್ರಮವು ಅವನಿಗೆ ಗೊತ್ತಿತ್ತು. ಆದರೂ ಸೀತೆಯನ್ನು ವಶಮಾಡಿಕೊಳ್ಳುವದರಲ್ಲಿ ನಿರಾಶನಾಗದೇ ಅವಳಿಗೆ ಅದಕ್ಕಾಗಿ ಒಂದು ತಿಂಗಳ ಅವಧಿಯನ್ನು ಪುನಃ ಕೊಟ್ಟು ರಾವಣ ಅಶೋಕ ವನದಿಂದ ತೆರಳಿದ.

# ಅಧ್ಯಾಯ - ೪೦

## ''ರಘುನಾಥ ಹೇಗಿದ್ದಾನೆ ಹೇಳು ದೂತಾ'' (ಸೀತಾದೇವಿ)

ಈ ವರೆಗೂ ಇದೆಲ್ಲವನ್ನು ಕೇಳುತ್ತ ಶಿಂಶಪಾವೃಕ್ಷದ ಮೇಲೆ ಸೂಕ್ಷ್ಮದೇಹಿಯಾಗಿ ಅಡಗಿ ಕುಳಿತ ಹನುಮಂತನಿಗೆ ಇವಳೇ ಜಾನಕೀ ಎಂಬುದು ಚೆನ್ನಾಗಿ ಮನವರಿಕೆಯಾಯಿತು. ಸುತ್ತಲಿನ ರಾಕ್ಷಸರೆಲ್ಲ ನಿದ್ರಾವಶರಾದುದನ್ನು ಖಚಿತ ಮಾಡಿಕೊಂಡು ಮಂಜುಳವಾದ ಸ್ವರದಲ್ಲಿ '' ಶ್ರೀರಾಮ ಜಯರಾಮ ಜಯ ಜಯ ರಾಮ, ಜಾನಕಿ ಜೀವನ ರಾಮ ನಾಮ'' ಎಂದು ಹಾಡಲು ಪ್ರಾರಂಭಿಸಿದ. ಆ ಗಾಯನದಿಂದ ಚಕಿತಳಾಗಿ ಸೀತಾದೇವಿಯು ''ಯಾರಿವರು ಇಲ್ಲಿ ಶ್ರೀರಾಮ ಸ್ಮರಣೆ ಮಾಡುವವರು?'' ಎಂದು ಮನದಲ್ಲಿ ಚಿಂತಿಸಿ ಶಿಂಶಪಾವೃಕ್ಷದ ಕಡೆಗೆ ದೃಷ್ಟಿ ಬೀರಿದಳು. ಆಗ ಹನುಮಂತ ಅವಳಿಗೆ ಕಂಡ. ಒಂದು ಸಣ್ಣ ಟೊಂಗಿಯನ್ನು ಸೀತಾದೇವಿಗೆ ಅತಿ ಸಮೀಪವಾಗುವಂತೆ ಬಾಗಿಸಿಕೊಂಡು ಹನುಮಂತ ಶ್ರೀರಾಮನಿತ್ತ ಮುದ್ರಿಕೆಯನ್ನು ಅವಳ ಕೈಯಲ್ಲಿಟ್ಟ. ಆಗ ಸೀತಾದೇವಿಗೆ ಅಪರಿಮಿತ ಆನಂದವಾಯಿತು. ಹನುಮಂತ ನಿಶ್ಚಯವಾಗಿಯೂ ರಾಜದೂತನೇ ಆಗಿರುವನೆಂಬುದನ್ನು ಮನವರಿಕೆ ಮಾಡಿಕೊಂಡು ಅವಳು ಶ್ರೀರಾಮನ ಕುರಿತು ಅವನನ್ನು ವಿಚಾರಿಸಹತ್ತಿದಳು.

ದೂತಾ, ಈ ಮುದ್ರಿಕೆ ಶ್ರೀರಾಮನದೇ ಎಂಬುದನ್ನು ಗುರುತಿಸಿದೆ. ಆದರೆ ನನ್ನ ರಘುನಾಥಾ ಹೇಗಿದ್ದಾನೆ. ಅವನ ಅವಸ್ಥೆಯನ್ನಷ್ಟು ಹೇಳು, ಹೇಗಿದ್ದಾನೆ ಈಗ ಆತ?

ಮುಂದೆ ಕರದಲ್ಲಿ ಬಿಲ್ಲು, ಹಿಂದೆ ಬೆನ್ನಿಗೆ ಅಕ್ಷಯ ಶರನಿಧಿ ಧರಿಸಿ, ಯಾವಾಗಲೂ ತತ್‌ಪರನಾಗಿ ಇರುವ ಆ ನನ್ನ ರಘುವರ, ಈಗ ವಿರಹದಿಂದ ಬಹಳ ನೊಂದಿರುವನೇ? ಆ ಶ್ಯಾಮಲನ ನಯನಗಳನ್ನು ಚಿಂತೆ ಏನಾದರೂ ಸುತ್ತು ವರಿದಿದೆಯೇ? ಹೇಳು ದೂತಾ. **ಆ ವಿರಹದ ದುಃಖದಲ್ಲಿ ನಿಜ ಧರ್ಮವನ್ನೆ ಮರೆತು ''ಇನ್ನೇನು ಮಾಡವುದು. ಇದು ನನ್ನ ಕರ್ಮ'' ಎಂದು ಕೈ ಕಟ್ಟಿ ಕುಳಿತಿರುವನೇನು ಮತ್ತೆ? ತಾನೂ ನೃಪತಿ ಎಂದು ತಿಳಿದು ತನ್ನ ಕರ್ತವ್ಯವನ್ನು ಇಂದಿಗೂ ಪಾಲಿಸುವನಲ್ಲವೇ ಆತ?**

**ದೂತಾ, ಹೇಳು ನನ್ನ ಪತಿ ಶ್ರೀರಾಮಚಂದ್ರ ಇಂದಿಗೂ ಧೈರ್ಯ ಕಳೆದುಕೊಂಡಿಲ್ಲವಷ್ಟೆ? ಆ ವೀರನಿಗೆ ಶೌರ್ಯದ ವಿಸ್ಮರಣೆಯಾಗಿದೇನು ಮತ್ತೆ?** ಆತನಿಗೆ ವನದಲ್ಲಿ ಸನ್ಮಿತ್ರರ ಸೈನ್ಯದ ನೆರವು ಇರುವದಲ್ಲವೇ? ಅವರ ಸಹಕಾರ ಇರುವದಲ್ಲವೇ ಅವನಿಗೆ? ಇನ್ನಿತರ ರಾಜರುಗಳು ಅವನ ವಿಜಯವನ್ನು

ಅಪೇಕ್ಷಿಸುತ್ತಿರುವರಲ್ಲವೇ? ಏನು ನನ್ನ ಪ್ರಿಯಕರ ಶ್ರೀರಾಮ ಲೋಕ ಪ್ರೀತಿಯನ್ನು ಕಳೆದುಕೊಂಡಿರುವನೋ? **ಯತ್ನದ ಮಾಹತಿಯನ್ನು ಮರೆತಿಲ್ಲವಷ್ಟೇ ರಘುಪತಿ?** ಭಯ ನನಗೆ ದೂತಾ ನಿಜ ಹೇಳು.

ದೈವಗತಿಯಿಂದ ನಾನು ಹೀಗೇ ಹೆರವರ ಮನೆಯಲ್ಲಿ ಕೊಳೆಯುತ್ತ ಬಿದ್ದಿರುವಾಗ ಆ ನನ್ನ ಸ್ವಾಮಿ ನನ್ನನ್ನು ಮರೆತು ಕುಳಿತುಬಿಟ್ಟನೇನು ಮತ್ತೆ? ಏನು ನನ್ನ ಸ್ಮೃತಿ ಅವನನ್ನು ಸದಾ ಕಾಡುತ್ತಿದೆಯೋ?

ದೂತಾ, ಆ ನನ್ನ ನಾಥ ಸ್ವತಃ ಬಂದು ನನ್ನನ್ನು ಮುಕ್ತಮಾಡುವನಲ್ಲವೇ? ಅವಶ್ಯ ಬಿದ್ದರೆ ಭರತ ಸೈನ್ಯವನ್ನು ಕಳಿಸಿ ಸಹಾಯ ಮಾಡುವನಲ್ಲವೆ? ಈ ವಿಪತ್ ಕಾಲದಲ್ಲಿ ಅವನ ಚಿತ್ತ ಮೋಹವನ್ನಾವರಿಸಿ ಸೀತೆಯ ಮೇಲಿನ ಆತನ ಪ್ರೀತಿ ಅಳಿಸಿಲ್ಲವಷ್ಟೇ? ಹಾಗದರೆ ಆತ ಈ ವೈದೇಹಿಯನ್ನು ಮುಕ್ತ ಮಾಡುವುದೆಂದು ? ಆತ ನನ್ನನ್ನು ಮುಕ್ತ ಮಾಡುವ ಸುವರ್ಣಗಳಿಗೆಯನ್ನು ನೋಡುವ ಭಾಗ್ಯ ನನ್ನದಿದೆಯಲ್ಲವೇ ದೂತಾ? ರಾಮಬಾಣವು ರಾವಣನ ಎದೆಯನ್ನು ಅದೆಂದು ಹೊಕ್ಕೀತು? ಅದನ್ನು ನನ್ನ ಕಣ್ಣುಗಳು ನೋಡುವುದೆಂದು? ಆ ರಘುನಾಥನ ಪಾದಗಳು ಇತ್ತಕಡೆಗೆ ಹೊರಳುವುದೆಂದು ಹೇಳು ದೂತಾ.

ಕೇಳಿಲ್ಲಿ ದೂತಾ, ಆತನ ಕುಶಲವನ್ನು ಕೇಳುವವರೆಗೆ ಮಾತ್ರ ಈ ಧರೆಯೊಂದಿಗೆ ನಾನು ಎಲ್ಲಿಯಾದರೂ ಹೇಗಾದರೂ ಯಾವ ಸ್ಥಾನದಲ್ಲಿಯಾದರೂ ಜೀವಿಸಿರುವೆ. ಆದರೆ ದೂತಾ ಜನ್ಮದಲ್ಲಿ ಅವರ ಭೆಟ್ಟಿ ಎಂದಾದೀತು ? ಆದೀತಲ್ಲವೆ? ಹೇಳು ದೂತಾ, ನುಡಿ'' ಹೀಗೆ ಸೀತಾದೇವಿ ಹನುಮಾನನ ಎದುರು ಪ್ರಶ್ನೆಗಳ ಸುರಿಮಳೆಯನ್ನೇ ಮಾಡಿದಳು. ಹನುಮಂತ ಸೀತಾದೇವಿಗೆ ಸಮಂಜಸವಾದ ನುಡಿಗಳಿಂದ ಉತ್ತರ ರೂಪದಲ್ಲಿ ಧೈರ್ಯ ಕೊಟ್ಟು ಅವಳಿಂದ ಗುರುತಿಗಾಗಿ ಮಣಿಯೊಂದನ್ನು ಪಡೆದುಕೊಂಡು ಅಲ್ಲಿಂದ ರಾಮನೆಡೆಗೆ ಹೊರಟ ಎಂದು, ಗೀತರಾಮಾಯಣದ ೪೦ನೆಯ ಅಧ್ಯಾಯದೊಂದಿಗೆ **ಶ್ರೀ ರಾಮಾಯಣ ನಿತ್ಯ ಚಿಂತನ** ಸಪ್ತಾಹದ ೫ನೆಯ ದಿನ ಮುಗಿದುದು.

ಶ್ರೀರಾಮಚಂದ್ರಾರ್ಪಣಮಸ್ತು

ರಾಮರಕ್ಷಾ ಕಥಾಭಾಗ-

ಸನ್ನದ್ಧ: ಕವಚಿ ಖಡ್ಗೀ ಚಾಪ ಬಾಣ ಧರೋ ಯುವಾ
ಗಚ್ಛನ್ ಮನೋರಥೋऽಸ್ಮಾಕಂ ರಾಮಃಪಾತು ಸ ಲಕ್ಷ್ಮಣಃ ॥ ೨೧॥

ರಾಮೋ ದಾಶರಥಿಃ ಶೂರೋ ಲಕ್ಷ್ಮಣಾನುಚರೋ ಬಲೀ।
ಕಾಕುತ್ಸ್ಥಃ ಪುರುಷಃ ಪೂರ್ಣಃ ಕೌಸಲ್ಯೇಯೋ ರಘೂತ್ತಮಃ ॥೨೨॥

ವೇದಾಂತವೇದ್ಯೋ ಯಜ್ಞೇಶಃ ಪುರಾಣಪುರುಷೋತ್ತಮಃ।
ಜಾನಕೀವಲ್ಲಭಃ ಶ್ರೀಮಾನ್ ಅಪ್ರಮೇಯಪರಾಕ್ರಮಃ ॥೨೩॥

ಇತ್ಯೇತಾನಿ ಜಪನ್ನಿತ್ಯಂ ಮದ್ಭಕ್ತಃ ಶ್ರದ್ಧಯಾನ್ವಿತಃ।
ಅಶ್ವಮೇಧಾಧಿಕಂ ಪುಣ್ಯಂ ಸಂಪ್ರಾಪ್ನೋತಿ ನ ಸಂಶಯಃ ॥೨೪॥

ರಾಮಂ ದೂರ್ವಾದಲಶ್ಯಾಮಂ ಪದ್ಮಾಕ್ಷಂ ಪೀತವಾಸಸಮ್।
ಸ್ತುವಂತಿ ನಾಮಭಿರ್ದಿವ್ಯೈಃ ನ ತೇ ಸಂಸಾರಿಣೋ ನರಾಃ। ॥೨೫॥

**ಜಾನಕೀ ಜೀವನ ಸ್ಮರಣ ಜಯ ಜಯ ರಾಮ**
**ಶ್ರೀರಾಮ ಜಯ ರಾಮ ಜಯ ಜಯ ರಾಮ (೧೦ಸಾರೆ)**
**''ಜಯ ಜಯ ರಘುವೀರ ಸಮರ್ಥ''**

# ಸಪ್ತಾಹದ ೬ ನೆಯ ದಿನ

ಶ್ರೀ ರಾಮ ಜಯರಾಮ ಜಯ ಜಯರಾಮ ( ೧೦ ಸಾರೆ )

''ಜಯ ಜಯ ರಘುವೀರ ಸಮರ್ಥ''

**ಧ್ಯಾನ್ಯ ಶ್ಲೋಕ :-**

**ಧ್ಯಾಯೇದಾ ಜಾನುಬಾಹುಂ --------- ಮಂಡನಂ ರಾಮಚಂದ್ರಂ**

**ಇತಿಧ್ಯಾನಂ**

''ಜಯ ಜಯ ರಘುವೀರ ಸಮರ್ಥ''

**ಪೂರ್ವಾಕಥಾನುವಾದ :-**

ಶ್ರೀರಾಮಲಕ್ಷ್ಮಣರು ಜಾನಕಿಯನ್ನು ಶೋಧಿಸುತ್ತ ಮುಂದೆ ಸಾಗುತ್ತಾರೆ. ಮಾರ್ಗದಲ್ಲಿ ಜಟಾಯು ಪಕ್ಷಿರಾಜ ರಕ್ತದ ಮಡುವಿನಲ್ಲಿ ಬಿದ್ದುದನ್ನು ಕಂಡರು. ರಾವಣ ಸೀತೆಯನ್ನು ಹರಣ ಮಾಡಿಕೊಂಡು ಹೋಗುತ್ತಿರುವುದನ್ನು ಸಹಿಸಲಾಗದೆ ಜಟಾಯು ಅವನೊಡನೆ ಕಾದಾಟಕ್ಕೆ ನಿಂತಾಗ ರಾವಣ ಅವನ ರೆಕ್ಕೆಗಳನ್ನು ಕತ್ತರಿಸಿದ ಕಾರಣ ಜಟಾಯು ಈ ರೀತಿ ಬಿದ್ದಿರುವನೆಂಬದನ್ನು ಅವರಿಗೆ ತಿಳಿಯಿತು. ಮತ್ತು ಗಗನ ಮಾರ್ಗದಿಂದ ಸೀತಾದೇವಿಯನ್ನು ರಾವಣ ಎತ್ತಿಕೊಂಡು ಹೋದನೆಂಬುದು ಗೊತ್ತಾಯಿತು. ಅನಂತರ ಶ್ರೀರಾಮಲಕ್ಷ್ಮಣರಿಗೆ ಕಬಂಧನೆಂಬ ರಾಕ್ಷಸ ಭೆಟ್ಟಿಯಾದ. ಅವನ ಸೂಚನೆಯಂತೆ ಅವನನ್ನು ದಹಸಿದಾಗ ಆತ ಶಾಪಮುಕ್ತನಾಗಿ ಪುನರ್ಜಾತನಾಗಿ ''ಸುಗ್ರೀವನ ಸಖ್ಯ ಮಾಡು ಅವನಿಂದ ಸೀತಾದೇವಿಯ ಶೋಧನೆಗೆ ನಿನಗೆ ತುಂಬಾ ನೆರವು ಸಿಗುವುದು'' ಎಂದು ಸೂಚನೆಕೊಟ್ಟು ಅವನು ಅಂತಾರ್ಧಾನನಾದ.

ಶ್ರೀರಾಮಲಕ್ಷ್ಮಣರು ಹಾಗೇ ಮುಂದೆ ಸಾಗಿ ಪಂಪಾಸರೋವರದ ಪಶ್ಚಿಮ ತೀರವನ್ನು ತಲುಪಿದಾಗ ಅವರಿಗೆ ಶಬರಿಯ ಆಶ್ರಮ ಹತ್ತಿದೆ. ಮಹಾನ್ ತಪಸ್ವಿನಿ ಶಬರಿಯ ಆತಿಥ್ಯವನ್ನು ಪಡೆದು ಅವಳಿಗೆ ಶ್ರೀರಾಮ ಕೈವಲ್ಯ ಪದವಿಯನ್ನಿತ್ತು ಮುನ್ನಡೆದ.

ಹಾಗೇ ಮಂದೆ ಅವರು ಋಷ್ಯ ಮೂಕ ಪರ್ವತ ತಲುಪಿದರು. ರಾಜ್ಯಪದ ಭ್ರಷ್ಟ ಸುಗ್ರೀವ ಇವರನ್ನು ಕಂಡ. ಅಣ್ಣ ವಾಲಿಯೇ ತನ್ನ ಮೇಲೆ ಸಾಗಲು ಇಬ್ಬರು ಧನುರ್ಧಾರರನ್ನು ಕಳಿಸಿರಬಹುದೆಂಬ ಶಂಕೆಯಿಂದ ಮಂತ್ರಿ ಹನುಮಾನನನ್ನು ಶ್ರೀರಾಮಚಂದ್ರನ ಕಡೆಗೆ ಕಳುಹಿಸುತ್ತಾನೆ. ಈ ಪ್ರಥಮ ದರ್ಶನದಲ್ಲಿಯೇ ಶ್ರೀರಾಮ ಹನುಮಾನರು ಪರಸ್ಪರ ಆಕರ್ಷಿತರಾಗುತ್ತಾರೆ. ಹನುಮಾನ ಸುಗ್ರೀವನನ್ನು ಕರೆತಂದು ಪರಸ್ಪರ ಪರಿಚಯ ಮಾಡಿಕೊಟ್ಟ. ಇಬ್ಬರೂ ಪರಸ್ಪರ ಸಹಾಯ ಮಾಡುವುದಾಗಿ ಅಗ್ನಿ ಸಾಕ್ಷಿಯಾಗಿ ವಚನಬದ್ಧರಾಗುತ್ತಾರೆ. ವಾಲಿಯನ್ನು ವಧೆ ಮಾಡಿ ಸುಗ್ರೀವನಿಗೆ ರಾಜ್ಯಪದ ಕೊಡಿಸುವುದಾಗಿ ಶ್ರೀರಾಮ ವಚನವಿತ್ತಂತೆ ವಾಲಿಯ ವಧೆ ಆಯಿತು. ''ವಾಲಿಯ ವಧೆ ಇದಲ್ಲ ದುಷ್ಟತನದ ನಿರ್ಮೂಲನವಿದು''ಎಂದು ಶ್ರೀರಾಮಚಂದ್ರ ಸಾರುತ್ತಾನೆ.

ಸುಗ್ರೀವನಿಗೆ ಕಿಷ್ಕಿಂಧದ ರಾಜ್ಯಪ್ರಾಪ್ತಿಯಾಗಿದೆ. ಅವನ ಆಜ್ಞೆಯಂತೆ ಕೋಟ್ಯಾವಧಿ ವಾನನರು ಸೇರಿರುತ್ತಾರೆ. ಸೀತಾದೇವಿಯ ಶೋಧನೆಗೆ ಎಂಟು ದಿಕ್ಕುಗಳಿಗೂ ವಾನರರ ತಂಡಗಳು ಹೋದವು. ದಕ್ಷಿಣದ

ತಂಡದಲ್ಲಿ ಹನುಮಾನ, ನೀಲ, ಅಂಗದ, ಜಾಂಬುವಾನ ಮೊದಲಾದ ವೀರಶ್ರೇಷ್ಠರಿದ್ದರು. ಅದೆಷ್ಟು ಶೋಧಿಸಿದರೂ ಸೀತಾದೇವಿಯ ಸುಳಿವು ಅವರಿಗೆ ಸಿಗಲಿಲ್ಲ. ಹೀಗೆ ಅವರೆಲ್ಲ ನಿರಾಶರಾಗಿ ಕುಳಿತಿದ್ದಾಗ ಸಂಪಾತಿ ಎಂಬ ಗೃಧ್ರರಾಜನಿಂದ ''ಸೀತಾದೇವಿಯು ಸುವರ್ಣದ್ವೀಪದಲ್ಲಿರುವ ಲಂಕಾ ಪಟ್ಟಣದ ಅಶೋಕ ವನದಲ್ಲಿ ರಾವಣನ ಬಂಧನದಲ್ಲಿರುವಳು'' ಎಂಬುದು ಅವರಿಗೆ ತಿಳಿಯುತ್ತದೆ. ಸಾಗರೋಲ್ಲಂಘನಕ್ಕೆ ಸರ್ವಥಾ ನೀನೇ ಸಮರ್ಥ. ವಾಮನನಂತೆ ಒಮ್ಮೆ ಪಾದವನ್ನೆತ್ತಿ ''ಜಯ ಜಯ ರಘುವೀರ ಸಮರ್ಥ'' ಎಂದು ಉಡ್ಡಾಣ ಮಾಡಿದಾಗ ನಿನ್ನ ಎರಡನೆಯ ಪಾದ ಲಂಕೆಯಲ್ಲಿಯೇ ನಿಶ್ಚಿತ ಎಂದು ತಿಳಿ'' ಎಂದು ಜಾಂಬುವಾನ ವರ್ಣನ ಮಾಡುತ್ತಿದ್ದಂತೆಯೇ, ನೋಡುನೋಡುವಷ್ಟರಲ್ಲಿ, ಹನುಮಾನ್ ಪ್ರಚಂಡ ರೂಪವನ್ನು ಧರಿಸಿ ಕ್ಷಣಾರ್ಧದಲ್ಲಿ ಮಹೇಂದ್ರ ಪರ್ವತವನ್ನೇರಿ ಆಕಾಶ ಮಾರ್ಗದಿಂದ ಲಂಕೆಯನ್ನು ತಲುಪುತ್ತಾನೆ. ಅಶೋಕ ವನ ಸುತ್ತಲಿನ ಗೋಡೆಯನ್ನೇರಿ ಸುಂದರವಾದ ಆ ವನದಲ್ಲಿ ಶೋಧಿಸತೊಡಗಿದಾಗ ಒಬ್ಬ ಸ್ತ್ರೀ ರಾಕ್ಷಸಿಯರ ಕಾವಲಲ್ಲಿದ್ದುದನ್ನು ಕಂಡ ಇವಳೇ ನಮ್ಮ ಶ್ರೀರಾಮನ ಸ್ವಾಮಿನಿ ಇರಬೇಕೆಂದು ಅನಿಸಿತವನಿಗೆ. ಪತಿ ಚಿಂತೆಯಲ್ಲಿ ಮಗ್ನಳಾಗಿ ಹೋಗಿರುವಳಲ್ಲ - ದೈವವೇ ಎಂತಹ ದಾರುಣ ಸ್ಥಿತಿ ಇವಳದು ಎಂದು ಹನುಮಾನ ಮರುಗಿದ. ಇಷ್ಟರಲ್ಲಿ ರಾವಣನ ಆಗಮನವಾಯಿತು. ಸೀತಾದೇವಿಗೆ ಬೆದರಿಕೆ ಹಾಕಲು ಪ್ರಾರಂಭಿಸಿದಾಗ ಅವಳು ಸಿಡಿಮಿಡಿದೆದ್ದು ಹೇಳುತ್ತಾಳೆ. '' ರಾವಣಾ ಬಡಬಡಿಸಬೇಡ, ಪರಾಂಗನೆ ಪತಿವ್ರತೆ ನಾನು, ತೀವ್ರ ನನ್ನನ್ನು ಮುಕ್ತಿ ಮಾಡಿ ರಾಮಚಂದ್ರನ ಸಾಮೀಪ್ಯಕ್ಕೆ ಕಳಿಸಿ ಪುಣ್ಯಗಳಿಸು. ರಾಜನು ಮಾಡಿದ ಪಾಪಗಳಿಂದ ರಾಜ್ಯಕ್ಕೆ ಕೇಡು ಹೀಗಿರುವಾಗ ನಿನ್ನ ಕೈಗಳಿಂದಲೇ ನಿನ್ನ ಪುರವನ್ನು ದಹಿಸಬೇಕೆನ್ನುವಿಯಾ? ವಿಚಾರಮಾಡು, ರಾಮಚಂದ್ರನಿಗೆ ಶರಣಾಗಿ ಅವನ ಆಶ್ರಯವನ್ನು ಪಡೆ. ಒಂದು ವೇಳೆ ರಾಮಚಂದ್ರ ಕೆರಳಿ ನಿಂತರೆ ನಿನ್ನೊಬ್ಬನನ್ನಲ್ಲ ನಿನ್ನ ವಂಶವನ್ನೇ ಅವನು ಇಡುವವನಲ್ಲ, ವಿಚಾರ ಮಾಡು'' ಎಂದು ಸೀತಾದೇವಿ ಕಿಡಿನುಡಿಗಳಿಗೆ ರಾವಣ ಅಲ್ಲಿಂದ ಕಾಲ್ತೆಗೆದ.

ಇದೆಲ್ಲವನ್ನೂ ಕೇಳುತ್ತಾ ಶಿಂಶಿಪಾ ವೃಕ್ಷದ ಮೇಲೆ ಅಡಗಿ ಕುಳಿತ ಹನುಮಂತನಿಗೆ ಇವಳೇ ಜಾನಕಿ ಎಂಬುದು ಪೂರ್ಣ ಮನವರಿಕೆಯಾಗಿದೆ. ಆಗ ಅವನು ತಾನು ಕುಳಿತುಕೊಂಡ ಟೊಂಗಿಯನ್ನು ಸೀತಾದೇವಿಗೆ ಅತಿ ಸಮೀಪವಾಗುವಂತೆ ಬಾಗಿಸಿಕೊಂಡು ಶ್ರೀರಾಮನಿತ್ತ ಮುದ್ರಿಕೆಯನ್ನು ಅವಳ ಕೈಗಿತ್ತ. ಆಗ ಸೀತಾದೇವಿಗೆ ಅಪರಿಮಿತ ಆನಂದವಾಗಿದೆ. ಈತ ರಾಜದೂತನೇ ಎಂಬುದನ್ನು ಖಚಿತ ತಿಳಿದುಕೊಂಡು ಶ್ರೀರಾಮನ ಕ್ಷೇಮ ಸಮಾಚಾರ ಕುರಿತು ಅನೇಕ ಪ್ರಶ್ನೆಗಳನ್ನು ಅವಳು ಕೇಳುತ್ತಾಳೆ. ''ದೂತಾ ನನ್ನ ಶ್ರೀರಾಮ ಹೇಗಿದ್ದಾನೆ? **ವಿರಹದ ದುಃಖದಲ್ಲಿ ನಿಜಧರ್ಮ ಮರೆತು ಕೈಕಟ್ಟಿಕೊಂಡು ಕುಳಿತಿಲ್ಲವಷ್ಟೆ? ಆತ ಧೈರ್ಯ ಕಳೆದುಕೊಂಡಿಲ್ಲ ಅಲ್ಲವೇ?** ರಾಜರ ಬೆಂಬಲ ಅವನಿಗೆ ಇದೆಯಲ್ಲವೇ? ನನ್ನನು ಅವನು ಮುಕ್ತಮಾಡುವದು ಅದೆಂದು? ಆ ಸುವರ್ಣಗಳಿಗೆಯನ್ನು ನೋಡುವ ಭಾಗ್ಯ ನನಗಿದೆಯಲ್ಲವೇ? ಈ ರೀತಿಯ ಪ್ರಶ್ನೆಗಳ ಸುರಿಮಳೆಗೆ ಹನುಮಂತ ಸಮಂಜಸ ನುಡಿಗಳಿಂದ ಸಮರ್ಪಕವಾಗಿ ಹೇಳಿ ಅವನಿಗೆ ಧೈರ್ಯವನ್ನಿತ್ತು, ಅವಳಿಂದ ಗುರುತಿಗಾಗಿ ಮಣಿಯೊಂದನ್ನು ಪಡೆದುಕೊಂಡು ಅಲ್ಲಿಂದ ರಾಮನೆಡೆಗೆ ಹೊರಟ ಎಂಬಲ್ಲಿಗೆ ನಿನ್ನೆಯ ಕಥೆ ಮುಗಿದಿದೆ. **ಇಂದು ಇನ್ನು ಮುಂದಿನ ಕಥೆ.**

## ಅಧ್ಯಾಯ - ೪೧

## ''ಲಂಕೆಗೆ ಬೆಂಕಿಯನ್ನು ಹಚ್ಚಿದ ಹನುಮಂತ'' (ಲವ-ಕುಶ)

ಸೀತಾದೇವಿಗೆ ಎಲ್ಲ ಪ್ರಶ್ನೆಗಳಿಗೂ ಹನುಮಾನ ಸಮರ್ಪಕವಾಗಿ ಉತ್ತರವನ್ನಿತ್ತ.

''ಶ್ರೀರಾಮನು ಖಚಿತವಾಗಿಯೂ ಬರಲಿರುವನು ತಾಯಿ ಯೋಚಿಸಬೇಡ ''ಎಂದು ಆತ ಶಪಥವನ್ನಿಟ್ಟು ಹೇಳಿದ . ದೂತ ಇಲ್ಲಿಗೆ ಬಂದು ತನ್ನನ್ನು ಕಂಡು ಎಲ್ಲ ವಿಷಯ ನಿವೇದನ ಮಾಡಿದನೆಂಬ ಗುರುತಿಗಾಗಿ ಸೀತಾದೇವಿಯು ತನ್ನದೊಂದು ಮಣಿಯನ್ನು ಹನುಮಾನನ ಸ್ವಾಧೀನ ಮಾಡಿ ಶ್ರೀರಾಮನಿಗೆ ಅದನ್ನು ತಲುಪಿಸಲು ಆಜ್ಞಾಪಿಸಿದಳು. ವಾಸ್ತವಿಕವಾಗಿ ಸೀತೆಯನ್ನು ಕರೆದುಕೊಂಡು ಹೋಗಲು ಸ್ವತಃ ಹನುಮಾನ ಸಿದ್ಧನಿದ್ದರೂ ತನ್ನ ಬಿಡುಗಡೆಯನ್ನು ಸ್ವತಃ ರಾಮನೇ ಮಾಡಬೇಕೆಂದೂ ಪರಪುರುಷನ ಹೆಗಲೇರಿ ಪಾರಾಗುವುದು ತನಗೆ ಉಚಿತವೆನಿಸದೆಂದೂ ಸೀತಾದೇವಿ ಒತ್ತಿ ಹೇಳಿದ್ದರಿಂದ ಧರ್ಮನಿಷ್ಠ ಹನುಮಾನನಿಗೂ ಅವಳ ಮಾತು ಯೋಗ್ಯವೆನಿಸಿತು. ಅಂತೂ ಒಮ್ಮೆ ಸೀತಾದೇವಿಯ ಅನುಮತಿಯನ್ನು ಪಡೆದು ತಾನು ಕೃತಾರ್ಥನಾದೆನೆಂಬ ಭಾವನೆಯಿಂದ ಹನುಮಾನ ಹೊರಡಲನುವಾದ.

ಹೊರಡುವ ಸಮಯಕ್ಕೆ ಆತನ ಮನದಲ್ಲಿ ಒಂದು ವಿಚಾರ ಸುಳಿಯಿತು. ಮನಸ್ಸಿನಲ್ಲಿಯೇ ಅವನೆಂದ ''ನಾನು ಇಲ್ಲಿಯವರೆಗೆ ಹೇಗೋ ಬಂದಿದ್ದೇನೆ. ಈ ರಾಕ್ಷಸರ ಬಲವಾದರೂ ಎಷ್ಟಿದೆ ನೋಡಬೇಕು'' ಎಂದು ಅನಿಸಿತವನಿಗೆ. ಈ ವಿಚಾರ ಅವನ ತಲೆಯಲ್ಲಿ ಬರುವೊಂದೇ ತಡ ಆ ಸುಂದರವಾದ ಅಶೋಕ ವನವನ್ನೆಲ್ಲಾ ಉಧ್ವಸ್ತಗೊಳಿಸಲು ಪ್ರಾರಂಭಿಸಿದ. ತಡೆಯಲು ಬಂದ ರಾಕ್ಷಸ ಜಂಬಮಾಲಿಯನ್ನು ಮತ್ತು ರಾವಣ ಪುತ್ರ ಅಕ್ಷನನ್ನು ವಧೆಮಾಡಿದ. ಆಗ ರಾವಣನ ಇನ್ನೊಬ್ಬ ಮಗ ಇಂದ್ರಜೀತನು ಬ್ರಹ್ಮಾಸ್ತ್ರದಿಂದ ಹನ್ನುಮ್ಮಾನನನ್ನು ಬಂಧಿಸಿ ರಾವಣನ ಸಭೆಗೆ ಕರೆದೊಯ್ದ. ಆಗ ರಾವಣನು ತತ್ಕಾಲ ಆತನನ್ನು ವಧೆಮಾಡಲು ಆಜ್ಞೆಯನ್ನಿತ್ತ. ಆಗ ರಾವಣನ ತಮ್ಮ ವಿಭೀಷಣನೆಂದ ''ಅಣ್ಣಾ ದೂತನನ್ನು ವಧೆಮಾಡುವುದು ರಾಜನೀತಿಗೆ ಸಮ್ಮತವಿಲ್ಲ. ತಿಳಿದು ನೋಡು ''ಎಂದು ಆಗ್ರಹದಿಂದ ಪ್ರತಿಪಾದನ ಮಾಡಿದ. ಹಾಗಾದರೆ ಇವನಿಗೆ ಏನು ಮಾಡಬೇಕೆಂಬ ಬಗ್ಗೆ ಪುನಃ ಸಭೆಯಲ್ಲಿ ವಿಚಾರವಾಗಿ ಹನುಮಂತನ ಬಾಲಕ್ಕೆ ಬಟ್ಟೆ ಸುತ್ತಿ ಬೆಂಕಿಯನ್ನಿಡಬೇಕೆಂಬ ಮಾತು ಸರ್ವಾನು ಮತದಿಂದ ನಿರ್ಣಯವಾಯಿತು. ತದನುಸಾರ ರಾವಣ ಆಜ್ಞೆಯಿತ್ತ. ರಾಕ್ಷಸರು ಸೇರಿ ಆ ಕಾರ್ಯವನ್ನು ಪೂರೈಸಿದರು. ಆಶೋಕ ವನದಲ್ಲಿದ್ದ ಸೀತಾದೇವಿಗೆ ಈ ಸುದ್ದಿ ತಿಳಿಯಿತು. ಆಗ ಅವಳು ಅಗ್ನಿನಾರಾಯಣನಿಗೆ ಹನುಮಾನನನ್ನು ರಕ್ಷಿಸಲು ಪ್ರಾರ್ಥಿಸಿದಳು. ಹನುಮಾನ ತನ್ನ ಉರಿಯುತ್ತಿರುವ ಬಾಲದೊಂದಿಗೆ ರಾವಣನ ಸಭೆಯಿಂದ ಸಹಜವಾಗಿ ಉಡ್ಡಾಣ ಮಾಡಿ ಲಂಕೆಗೆ ಬೆಂಕಿಯನ್ನಿಡಲು ಪ್ರಾರಂಭಿಸಿದ.

ಅತ ಬೃಹದಾಕಾರನಾಗಿ ಕಂಡ. ಅವನ ಬಾಲವು ಮಿಂಚಿದಂತೆ ಕಂಡಿತು. ಆ ಮಾಹಾವಾತನು ಗರ್ಜನೆ ಮಾಡುತ್ತ ನಗರದ ಮೇಲೆಲ್ಲ ಅಗ್ನಿಯನ್ನು ಸುರಿಸಲು

ಪ್ರಾರಂಭಿಸಿದ. ಆ ಹನುಮಾನನ ನೆಗೆದಾಟವನ್ನು ನಾವೇನು ವರ್ಣಿಸಬಲ್ಲೆವು? ಈ ಶಿಖರದಿಂದ ಆ ಶಿಖರಕ್ಕೆ ಈ ಮನೆಯಿಂದ ಆ ಮನೆಗೆ ಚಂಡಿನಂತೆ ಹಾರಾಡಿ ಪುಟಿದಾಡಿ ಅವುಗಳನ್ನೂ ಸುಡಹತ್ತಿದ. ಮಂದಿರಗಳು ಮನೆಗಳು ಶಿಖರಗಳು ಧಗ ಧಗ ಉರಿಯತೊಡಗಿದವು. ಅಂತಃಪುರದಿಂದ ಕಿರಿಚಾಟ ಒದರಾಟ ಅಳುಗಳು ಕೇಳಬರಹತ್ತಿದ್ದವು. ಎಲ್ಲ ವಸ್ತುಗಳೂ ಅಗ್ನಿಗೆ ಆಹುತಿ ಆಗಹತ್ತಿದವು. ಮನೆಗಳ ಸಾಲು ಸಾಲುಗಳೇ ಉರಿಯ ತೊಡಗಿದವು. ಪ್ರಸಾದಗಳೆಲ್ಲ ಸುಟ್ಟು ಇದ್ದಿಲು ಬೂದಿ ಆದವು. ಇಡೀ ಲಂಕಾನಗರವೇ ಧಗಧಗಿಸುತ್ತಾ ಉರಿಯ ಹತ್ತಿತು.

ಮಲಗಿದಲ್ಲಿಯೇ ಬೆಂದು ಹೋದವರು ಕೆಲವರು, ಸುಟ್ಟುಕೊಂಡು ಓಡಾಡುತ್ತಿರುವವರು ಹಲವರು. ಭೀತಿಯಿಂದ ಬಾಯಿ ಕಳೆದುಕೊಂಡವರು ಬಹಳಷ್ಟು ಜನ ಹೀಗೆ ಅಗ್ನಿ ಪ್ರಳಯದಲ್ಲಿ ದಿಗ್ಭ್ರಾಂತರಾದ ಜನ ಒಬ್ಬರನ್ನೊಬ್ಬರು ಗುರುತಿಸದಂತಾದರು. ಎಲ್ಲೆಲ್ಲಿಯೂ ದಿಕ್ಕೆಟ್ಟ ಜನಗಳ ಓಡಾಟವೇ ಓಡಾಟ. ತಾಯಿಗಳು ಮಕ್ಕಳ ಪರಿವಿಲ್ಲದೆ ಅವುಗಳನ್ನು ಬಿಸಾಡಿ ಓಡಹತ್ತಿದರು. ಇದೇನಿದು ಕನಸು ಮನಸ್ಸಿಲ್ಲದೇ ಕಲ್ಪನೆ ಇಲ್ಲದೇ ಕಲ್ಪಾಂತ ಬಂದಿತಲ್ಲ! ಎಂದು ಎದ್ದು ನಿಂತವರೆಲ್ಲ ಅಡ್ಡ ಬಿದ್ದರು.

ಮಹಾ ಅಗ್ನಿಪ್ರಳಯದಿಂದ ಇನ್ನೂ ಏನಾಯಿತೆಂಬುದನ್ನು ಕೇಳಿರಿ. ಡೋಲು ಖಡ್ಗಗಳು ಕರಗಿ ನೀರಾಗಿ ಹೋದವು. ವೀರ ವೃತ್ತಿಯಂತೂ ಸದೇಹ ಸುಟ್ಟುಕರಕಾಗಿ ಹೋಯಿತು. ಜ್ವಾಲೆಗಳಲ್ಲಿ ಜ್ವಾಲೆ ಸೇರಿ ಎಲ್ಲ ಭಸ್ಮವಾಯಿತು. ಅಗ್ನಿಯ ಜೊತೆಗೆ ಗಾಳಿ, ಗಾಳಿಯ ಜೊತೆಗೆ ಅಗ್ನಿಸೇರಿ, ಎಲ್ಲಿ ಯಾರಿಗೂ ಆಸರೆ ಉಳಿಯಲಿಲ್ಲ. ಅಗಸೆ ಅಗಳಿಗಳು ಸುಟ್ಟವು. ಕಾವಲು ಸುಟ್ಟಿತು. ಮೂರ್ತಿಮಂತ ಅನಲ ಕುಣಿಯುತ್ತಿದ್ದಂತೆಯೇ ಲಂಕಾ ಪಟ್ಟಣವೇ ಅಗ್ನಿಗೆ ಆಹುತಿಯಾಯಿತು.

ಈ ರೀತಿಯಾಗಿ ಇಡೀ ಲಂಕೆಯು ಅಗ್ನಿಗೆ ಆಹುತಿಯಾಗಿ ಉರಿಯಹತ್ತಿದ ಮೇಲೆ ಹನುಮಾನ ಶಾಂತ ಚಿತ್ತದಿಂದ ಉರಿಯುತ್ತಿದ್ದ ತನ್ನ ಬಾಲವನ್ನು ಸಾಗರದಲ್ಲಿ ಅದ್ದಿ ನಂದಿಸಿಕೊಂಡ. ಅನಂತರ ಆಕಾಶ ಮಾರ್ಗದಿಂದ ಶ್ರೀರಾಮನೆಡೆಗೆ ಬಂದು ಸೀತಾದೇವಿ ಕೊಟ್ಟಿದ್ದ ಮಣಿಯನ್ನು ಆತನ ಕೈಗಿತ್ತ, ಮತ್ತು ಲಂಕೆಯಲ್ಲಿ ನಡೆದುದೆಲ್ಲವನ್ನೂ ಆತನಿಗೆ ನಿವೇದಿಸಿದ. ಶ್ರೀರಾಮನು ಅದು ಜಾನಕಿಯದೇ ಎಂದು ಸರಿಯಾಗಿ ಗುರುತಿಸಿ ಅತ್ಯಂತ ಹರ್ಷಿತನಾಗಿ ಹನುಮಾನನ್ನು ಬಿಗಿಯಾಗಿ ಅಪ್ಪಿಕೊಂಡ. ಲಂಕೆಯಲ್ಲಿ ರಾವಣನ ಸಭೆಯಲ್ಲಿ ನಡೆದ ವೃತ್ತಾಂತವನ್ನು ಮತ್ತು ಸೀತಾದೇವಿ ನುಡಿದ ಹೃದಯ ಸ್ಪರ್ಶಿ ಮಾತುಗಳನ್ನು ಸವಿಸ್ತಾರವಾಗಿ ಹನುಮಾನ ಶ್ರೀರಾಮನಿಗೆ ಅರುಹಿದ.

ಅನಂತರ ಎಲ್ಲರೂ ಸೇರಿ ವಿಚಾರವಿನಿಮಯವಾದ ನಂತರ ಲಂಕೆಗೆ ಹೊರಡುವನು ಎಂಬುದು ನಿಶ್ಚಯವಾಯಿತು. ಶ್ರೀರಾಮ ಲಕ್ಷ್ಮಣರು ಎಲ್ಲರನ್ನೂ ಕರೆದುಕೊಂಡು ದಕ್ಷಿಣದತ್ತ ಸಾಗಿ ಸಮುದ್ರ ತೀರವನ್ನು ಬಂದು ತಲುಪಿದರು.

ಸಮುದ್ರವನ್ನು ದಾಟುವುದು ಹೇಗೆ ಎಂಬುದು ಸಮಸ್ಯೆಯೇ ಆಯಿತು. ಸಮುದ್ರನಾಥನಿಗೆ ದಾರಿ ಮಾಡಿಕೊಡಲು ಸತತವಾಗಿ ಮೂರುದಿವಸಗಳವರೆಗೆ ಶ್ರೀರಾಮನು ಪ್ರಾರ್ಥಿಸಿದರೂ ಪ್ರಯೋಜನವಾಗಲಿಲ್ಲ. ಕಡೆಗೆ ಶ್ರೀರಾಮನು ಸಂತಾಪದಿಂದ ಸಾಗರದ ಮೇಲೆ ಶಸ್ತ್ರವನ್ನೆತ್ತಿದ. ರಾಮಬಾಣದ ಭಯದಿಂದ ಸಮುದ್ರನಾಥ ಸಾಕಾರನಾಗಿ ಪ್ರಕಟನಾಗಿ ''ರಾಮಚಂದ್ರಾ, ನಿಮ್ಮ ಸೈನ್ಯದಲ್ಲಿ ನಳನೆಂಬ ವಾನರನಿರುವನು. ವಿಶ್ವಕರ್ಮನ ಪುತ್ರನಾತ, ಅವನ ಕೈಯಿಂದ ಸೇತುವೆ ಕಟ್ಟಿಸು. ಅದನ್ನು ನಾನು ಆನಂದದಿಂದ ನನ್ನ ಎದೆಯ ಮೇಲೆ ಧರಿಸುವೆ.'' ಎಂದು ಹೇಳಿ ಅದೃಶ್ಯನಾದ. ತದನುಸಾರ ಶ್ರೀರಾಮನು ನಳನಿಗೆ ಆಜ್ಞೆ ಇತ್ತ. ವಾನರರೆಲ್ಲ ಸೇರಿ ದೊಡ್ಡ ದನಿಯಿಂದ ಹಾಡುತ್ತ ಸಾಗರದ ಮೇಲೆ ಸೇತುವೆ ಕಟ್ಟಲು ಪ್ರಾರಂಭಿಸಿದರು.

## ಅಧ್ಯಾಯ - ೪೨

## ''ಸಾಗರಕ್ಕೆ ಸೇತುವೆಯನ್ನು ಕಟ್ಟಿರಿ'' (ವಾನರ ಗಣ)

ವಾನರರೇ ಆ ಗಿರಿರಾಜನ ದೇಹವನ್ನೇ ಕಿತ್ತಿ ಆನೆಯಂತಹ ಶಿಲೆಯನ್ನು ಎತ್ತಿ ನೀರಿಗೆ ನೂಕಿರಿ. ಈ ಸೇತು ಬಂಧನದಿಂದ ಲಂಕಾಪಟ್ಟಣವನ್ನು ಜಗ್ಗಿ ಎಳೆದು ನಮ್ಮ ಸಮೀಪಕ್ಕೆ ತರೋಣ. ಇನ್ನೇನು? ತರುಗಳನ್ನು ತಂದು ಚೆಲ್ಲಿರಿ. ಗುಡ್ಡವನ್ನೇ ಕಿತ್ತು ತಂದೆಸಿಯಿರಿತ್ತ. ಇವುಗಳ ಭಾರ ಸಾಗರವು ಸಂತೋಷದಿಂದ ಹೊರುವುದು. ಈ ಪೃಥ್ವಿಯನ್ನೆ ಆಚೆಯ ತೀರಕ್ಕೆ ಎಳೆಯಿರಿ. ಶೇಷನಂತೆ ವಡವಾಗ್ನಿಯು ಪ್ರಥ್ವಿಯನ್ನು ಹೊತ್ತುನಿಲ್ಲುವುದು. ನಮ್ಮ ಉದರದಲ್ಲಿ ಶ್ರೀರಾಮ ಭಕ್ತಿಗೆ ಉಕ್ಕು ಬರಹತ್ತಿದೆ. ಸತ್‌ಕಾರ್ಯಕ್ಕೆ ಹೊರಟ ಪಥಿಕರಿಗಾಗಿ ಸೇತುವೆಯನ್ನು ಕಟ್ಟಿರಿ. ವಾನರರು ಶ್ರೀರಾಮನನ್ನು ತಮ್ಮ ಬೆನ್ನಮೇಲೆ ಹತ್ತಿಸಿಕೊಂಡು ಕಡಲಾಚೆಯ ತೀರಕ್ಕೆ ಹಚ್ಚುವುದು. ಹಿಂದೆಗೆಯಬೇಡಿರಿ, ಉಸಿರು ಬಿಡಬೇಡಿರಿ, ನಳನಂತಹ ಮುಂದಾಳು ನಮ್ಮ ಹಿಂದೆ ಇದ್ದಾನೆಂದ ಮೇಲೆ ಹಿಂಜರಿಯಬೇಡಿರಿ. ಕೋಟಿ ಕೋಟಿ ನಮ್ಮ ಕೈಗಳು ಕೂಡಿ ದುಡಿದರೆ ಏನಾಗಲಿಕ್ಕಿಲ್ಲ? ಸೇತು ಬಂಧನದ ಈ ಪ್ರಾರಂಭವೇ ನಾವು ಕೈಕೊಂಡಿರುವ ಕಾರ್ಯದ ಪೂರ್ಣತೆಯ ಚಿನ್ನಗಳಿಂದ ಕೂಡಿದೆ. ಇಲ್ಲಿ ನೋಡಿರಿ ಶ್ರೀರಾಮ ಪ್ರಭುವಿನ ಲೀಲೆ! ಪಾಷಾಣವೇ

ಲೀಲೆಯಿಂದ ತೇಲುತ್ತದೆ. ನಮ್ಮ ಶ್ರೀರಾಮ ಪ್ರಭು ತನ್ನ ಚರಣಗಳನ್ನು ನೀರಿನಲ್ಲಿರಿಸಿದರೆ ಸಾಕು ಆ ಎಲ್ಲ ನದಿಗಳಿಗೆ ತೀರ್ಥದ ಪಾವಿತ್ರ್ಯ ಬರುತ್ತದೆ. ಇಲ್ಲಿ ನೋಡಿರಿ ವಾನರರೇ, ಸಾಗರದ ತೆರೆಗಳೇ ಶಿಲೆಗಳಾಗಿ ಮಾರ್ಪಟ್ಟು ಒಂದಕ್ಕೊಂದು ಹೊಂದಿಕೊಳ್ಳಹತ್ತಿದ್ದವು. ಶ್ರೀರಾಮನ ಲೀಲೆಯದು ವಾನರರೇ ''**ರಘುಪತಿ ರಾಘವ ರಾಜಾರಾಮ ಪತಿತ ಪಾವನ ಸೀತಾರಾಮ. ಜಯ ಲಂಕಾರೀ! ಜಾನಕಿ ಜೀವನ ಸ್ಮರಣ ಜಯ ಜಯ ರಾಮ ಜಯ ಜಯ ರಘುವೀರ ಸಮರ್ಥ'' ಎಂದು ಗರ್ಜನೆ ಮಾಡಿರಿ,** ಯುದ್ಧಕ್ಕೆ ಮೊದಲೇ ಈ ಸ್ಫೂರ್ತಿಯ ಭೇರಿ ಮೊಳಗಲೊಮ್ಮೆ.

ಸೇತುವೆಯಲ್ಲವಿದು ವಾನರರೇ, ಶ್ರಮದ ಕೃತು ಇದು. ಶ್ರೀರಾಮನ ಉದ್ದೇಶ ವಿಶಾಲವಾದುದು. ಅವನ ಶುಭ ನಾಮದ ಮಹಿಮೆ ಇದು. ನಮ್ಮ ಮಹಾನ್ ಸಂಘ ಈ ಕಾರ್ಯವನ್ನು ನಾಲ್ಕು ದಿಕ್ಕುಗಳೂ ಸ್ತಬ್ಧವಾಗಿ ನೋಡುತ್ತಿವೆ. ವಾನರರೇ ಇನ್ನೇನು ಸೇತುವೆ ಪೂರ್ತಿ ಆಯಿತು. ರಾಘವ ವಿಜಯ ಆದ ಲಂಕೆ ಸೋತಿತು. ಮೈಥಿಲಿ ಮುಕ್ತಳಾದಳು. ಎಂದು ವಾನರ ವೀರರು ಗರ್ಜಿಸುತ್ತಾ ಸೇತು ಬಂಧನದ ಕಾರ್ಯವನ್ನು ಮುಂದುವರಿಸಿದರು.

ಈ ರೀತಿಯಾಗಿ ವಾನರರು ಗರ್ಜಿಸುತ್ತಾ ಶ್ರೀರಾಮನನ್ನು ನೆನೆಯುತ್ತಾ ಅವನ ಮಹಿಮೆಯನ್ನು ಹಾಡುತ್ತ ಇಪ್ಪತ್ತು ಮೂರು ಯೋಜನ ಉದ್ದವಾದ ಸೇತುವೆಯನ್ನು ಸಮುದ್ರದ ಮೇಲೆ ನಿಲ್ಲಿಸಿದರು. ಒಮ್ಮೆ ಶ್ರೀರಾಮನೊಂದಿಗೆ ಸುಗ್ರೀವನ ಅಬ್ಜಾವದಿ ವಾನರ ಸೈನ್ಯವು ದೊಡ್ಡ ಧ್ವನಿಯಿಂದ ಗರ್ಜಿಸುತ್ತಾ ಸಮುದ್ರವನ್ನು ದಾಟಿ ಲಂಕೆಯ ಬಾಗಿಲಿಗೆ ಹೋಗಿ ''ಜಯ ಜಯ ರಘುವೀರ ಸಮರ್ಥ''ಎಂದು ಗರ್ಜಿಸಿ ನಿಂತಿತು.

ವಾನರ ಸೇನೆಯ ಈ ಮಹಾನ್ ಗರ್ಜನೆ ರಾವಣನ ಕಿವಿಗೆ ಬಿದ್ದೊಡನೆ ಆತ ಗಂಭೀರವಾಗಿ ಎದ್ದು ಶ್ರೀರಾಮನ ಸೈನ್ಯದ ಬಲಾಬಲದ ಕಲ್ಪನೆ ತನಗೆ ಬರಲೆಂದು ದೂತನನ್ನು ಶ್ರೀರಾಮ ಬೀಡು ಬಿಟ್ಟ ಕಡೆಗೆ ಕಳುಹಿಸಿದ. ದೂತನಾದರೂ ಶ್ರೀರಾಮ ಸೇನೆಯ ಅಸಾಮಾನ್ಯ ಬಲದ ಕಲ್ಪನೆ ರಾವಣನಿಗೆ ಕೊಟ್ಟ. ರಾವಣನಾದರೂ ತನ್ನ ಶ್ವೇತ ಭವನದ ಮೇಲೇರಿ ಮೇಲಂತಸ್ತಿನ ಮೇಲೆ ನಿಂತು ತಾನು ಸ್ವತಃ ಶ್ರೀರಾಮನ ಆ ಮಹಾ ಸೇನಾ ಸಾಗರವನ್ನು ಅವಲೋಕಿಸಿದನು. ವೈಯಕ್ತಿಕವಾಗಿ ಪ್ರತ್ಯೇಕ ವೀರರ ಬಲವನ್ನು ದೂತನ ಮುಖದಿಂದ ಶ್ರವಣ ಮಾಡಿದ. ಈ ರೀತಿಯಾಗಿ ಶ್ರೀರಾಮ ಸೇನೆಯ ಅತ್ಯಧಿಕ ಸಾಮರ್ಥ್ಯವನ್ನು ಮನಗಂಡನಾದಾರೂ ರಾವಣನು ತನ್ನ ಮಂತ್ರಿಗಳನ್ನು ಕರೆದು ಯುದ್ಧಾರಂಭದ ಸೂಚನೆ ಕೊಟ್ಟ, ಶ್ರೀರಾಮನ ಸತ್‌ಪಕ್ಷವನ್ನು ನೆನೆದು ರಾವಣನ ತಮ್ಮ ವಿಭೀಷಣ ಈ ಮೊದಲೇ ಶ್ರೀರಾಮನನ್ನು ಕೂಡಿಕೊಂಡಿದ್ದ. **ಮೋಸಗಾರರಿಗೂ ನೀತಿ**

**ವಿಹೀನರಿಗೂ ಯಾವ ಕಾಲಕ್ಕೂ ಎಂತಹ ಹೀನ ವಿಚಾರಗಳು ಬರುವವು ಎಂಬುದನ್ನು ಹೇಳಲು ಬರುವುದಿಲ್ಲ.** ಅದರಲ್ಲಿ ರಾವಣ ಮಯಾವಿ, ಮೋಸಗಾರ,ನೀತಿ ವಿಹೀನ, ಮೇಲೆ ಕಾಮಾಂಧನಾಗಿದ್ದನಾತ. ಹೇಗಾದರೂ ಯುಕ್ತಿ ಮಾಡಿ ಈಗಾದರೂ ಸೀತೆಯನ್ನು ಒಲಿಸಿಕೊಳ್ಳಬೇಕೆಂದು ಹವಣಿಸಿ ಒಬ್ಬ ರಾಕ್ಷಸನಿಂದ ಶ್ರೀರಾಮನ ಮಾಯಾವಿ ಶಿರವನ್ನು ಮಾಡಿಸಿಕೊಂಡ. ಅದನ್ನು ತೆಗೆದುಕೊಂಡು ಅಶೋಕ ವನಕ್ಕೆ ಹೋಗಿ ಸೀತಾದೇವಿಯ ಮಂದೆ ನಿಂತು, ಹುಸಿನಗೆ ನಗುತ್ತ ಮಾಯಾವಿ ಶಿರದ ಕಡೆಗೆ ಬೆರಳು ಮಾಡಿ '' ಸೀತೇ ನೋಡಿಲ್ಲಿ ಯಾವ ರಾಮನ ಕಾರಣದಿಂದ ನೀನು ಇದುವರೆಗೆ ನನ್ನ ಬಿನ್ನಹಗಳನ್ನು ಧಿಕ್ಕರಿಸುತ್ತಾ ಬಂದಿರುವಿಯೋ ಆ ರಾಮನ ಶಿರ ಇಲ್ಲಿದೆ ನೋಡು, ಕಣ್ತೆರೆದು ನೋಡಿಲ್ಲಿ. ಆ ರಾಮನ ವಧೆಯಾಯಿತು. ಪ್ರಹಸ್ತನೆಂಬ ನನ್ನ ಶೂರ ಸೇನಾ ನಾಯಕ, ಶ್ರೀರಾಮ ಮಲಗಿದ್ದಂತೆಯೇ, ಅವನ ಈ ಶಿರವನ್ನು ಕತ್ತರಿಸಿ ತಂದಿದ್ದಾನೆ. ಎಲ್ಲ ವಾನರ ಸೈನ್ಯವು ಭಯಭೀತವಾಗಿದೆ. ಇದು ನಿನ್ನ ರಾಮನ ಧನುಷ್ಯ. ಇದು ಆತನ ಧಡದಿಂದ ಬೇರ್ಪಡಿಸಿದ ಮಸ್ತಕ'' ಎಂದು ಸೀತಾದೇವಿಗೆ ತೋರಿಸಿ ವಕ್ರದೃಷ್ಟಿಯಿಂದ ಅವಳತ್ತ ನೋಡುತ್ತಾ ನಿಂತ. ಸೀತಾದೇವಿಯು ಶ್ರೀರಾಮನ ಮಸ್ತಕವನ್ನೇ ಹೋಲುವ ಆ ಶಿರಸ್ಸು ಕಂಡಾಕ್ಷಣ ಹೌಹಾರಿದಳು.

ದಿಕ್ಕು ತಿಳಿಯದಂತಾಯಿತು ಅವಳಿಗೆ. ಏನು ನೋಡುತ್ತಿರುವೆ ನಾನು? ಏನು ಕೇಳುತ್ತಿರುವೆ ನಾನು? ಎಂಥ ದುರವಸ್ತೆ ನನ್ನದು! ರಘುವೀರಾ ನೋಡಲಾರೆಯಾ, ನನ್ನನ್ನು ಮಾತಾಡಲಾರೆಯಾ ಎಂದು ಹೃದಯದ್ರಾವಕವಾಗಿ ಆಕ್ರೋಶ ಮಾಡಲಾರಂಭಿಸಿದಳು.

## ಅಧ್ಯಾಯ - ೪೩

## ''ರಘುವರಾ ಮಾತಾಡಲೊಲ್ಲೇಕೆ?'' (ಸೀತಾದೇವಿ)

ಸತಿಯ ಮುನ್ನವೇ ಪತಿಯ ಮರಣವೇ? ಹೇಗಾಯಿತಿದು? ದೈವವು ಹರಿದು ಖಡ್ಗದಂತೆ ನನ್ನ ಮೇಲೆ ಬಿದ್ದಿತಲ್ಲ! ಹೇಗೆ ಸಹಸಲಿ ರಾಘವಾ ನಾನಿದನ್ನು ? ಕೌಸಲ್ಯಾಮಾತೆಯೇ, ನೀನು ಇಷ್ಟು ಪುಣ್ಯ ಹೀನಳೆಂದಾಯಿತೇ? ಲೋಕದಲ್ಲಿ ಏನಾಯಿತಿದು? ಅಭಾಗಿನಿ ಜಾನಕಿ ಅಚಾನಕವಾಗಿ ಕ್ಷಣಾರ್ಧದಲ್ಲಿ ಸರ್ವಸ್ವವನ್ನೂ ಕಳೆದುಕೊಂಡಳೇ? ಪುರುಷೋತ್ತಮನಿವ ಈ ಮೂಢಳ ಹತ್ತಿರ ಹುಡಿಯಲ್ಲಿ ಯಾಕೆ ಮಲಗಿದ?

ರಾಘವಾ, ನಿನ್ನ ಈ ಕಮಲನೇತ್ರಗಳನ್ನು ನಾನು ಸರಿಯಾಗಿ ಗುರುತಿಸುವೆ. ಕರ್ಣಕುಂಡಲಗಳು ಅವೇ ಹೌದು. ರಾಘವಾ ಏನು ನಿನ್ನ ನಿದ್ರೆ ಇದು? ಈ ದೀನಳ

ರೋದನ ಕೇಳಲೊಲ್ಲದೇ ನಿನಗೆ? ದೃಷ್ಟಿ ಗತಿಹೀನವೇಕಾಯಿತು? ಹತ್ತು ದಿಕ್ಕುಗಳೆಲ್ಲ ಸುಂದಾದವೇಕೆ ? ಈ ಸುವರ್ಣಧನು ಹೌದು ಇದು. ಆ ನನ್ನ ರಾಘವನದೇ. ಆದರೆ ಬಾಹುಗಳೆಲ್ಲಿ ಆತನವು ? ಶ್ಯಾಮ ವರ್ಣದ ಆ ಮೂರ್ತಿಯನ್ನು ನಾನು ಮತ್ತೊಮ್ಮೆ ಎಲ್ಲಿ ಎಂದು ಕಾಣುವದು? ಈ ಹತಭಾಗಿನಿ? ಹೀಗೆ ಸೀತಾದೇವಿ ಅತ್ತು ಅತ್ತು ಕಣ್ಣುಗಳು ಒಣಗಿದವು. ಮೈ ದಹಿಸುತ್ತಿತ್ತು. ನಾಥ ಮಾತಾಡಿರಿ, ವಿವಾಹ ಸಮಯದಲ್ಲಿ ನೀವು ಏನೆಂದು ನನಗೆ ಶಪಥ ಕೊಟ್ಟಿದ್ದಿರೆಂದು ಮರೆತು ಹೋಯಿತೇ? ನನಗೆ ಹೇಳದೇ ಕೇಳದೇ ನನ್ನನ್ನು ಇಲ್ಲಿ ಹೆರವರ ಮನೆಯಲ್ಲಿ ಬಿಟ್ಟು ನೀವೊಬ್ಬರೇ ಹೋಗುವುದೇ? ರಘುಕುಲ ತಿಲಕ ರಾಘಾವಾ, ನೀವೇನೋ ಸ್ವರ್ಗಕ್ಕೆ ಹೋಗಿ ಪಿತೃಗಳನ್ನು ಕೂಡಿಕೊಂಡಿರಿ. ಆದರೆ ನಾನು, ನಾನಾರು? ನಿಮ್ಮ ಅರ್ಧಾಂಗಿ ಜಾನಕಿ. ಸಜೀವವಾಗಿ ಹೆರವರ ಮನೆಯಲ್ಲಿ ಉಳಿದಳಲ್ಲ ಇಲ್ಲಿ ! ರಘುಕುಲ ಜಾತರಾದ ನಿಮಗೆ ಶೋಭಿಸುವಂತಹ ಮಾತೇ ಇದು? ಏನು? ಮಾತಾಡಿರಿ ! ಈ ಅಪಾರ ಸಾಗರವನ್ನು ದಾಟಿ ನನಗಾಗಿ ಯಾಕೆ ಬಂದಿರಿ ಹಾಗಾದರೆ? ಕುಲನಾಶಿನಿಯಾದ ನಾನು ಭೂಮಿಯ ಹೊಟ್ಟೆಯಿಂದ ಏಕೆ ಜನ್ಮಿಸಿದೆ? ಜನಕರಾಜ ಯಜ್ಞ ಮಾಡಿದ. ಅದರ ಪೂರ್ಣತೆಯ ಫಲವೇ ಇದು?

ಹೇ ಲಂಕೇಶಾ, ಕೇಳಿಲ್ಲಿ ಯಾವ ಶಸ್ತ್ರದಿಂದ ನನ್ನ ಪ್ರಾಣನಾಥನನ್ನು ವಧಿಸಿದಿಯೋ, ಅದೇ ಶಸ್ತ್ರದಿಂದ ಈ ಸೀತೆಯ ಶಿರವನ್ನು ಕತ್ತರಿಸಿ ತೆಗೆಯಲಾರೆಯಾ? ಅಂತ್ಯದಲ್ಲಿ ರಾಮನ ಹಿಂದೆಯೇ ಹೋಗಲು ಈ ವೈದೇಹಿಗೆ ಅವಕಾಶಕೊಡು ಎಂದಿಷ್ಟೆ ಹೇಳಿಕೊಳ್ಳುವೆ '' ಎಂದು ಸೀತಾದೇವಿ ಆಕ್ರೋಶ ಮಾಡುತ್ತಿದ್ದಂತೇ ರಾವಣ ಅಲ್ಲಿಂದ ಕಾಲ್ತೆಗೆದ.

ಹೀಗೆ ಸೀತಾದೇವಿಯು ಸಂತಾಪದಿಂದ ಆರ್ತಳಾಗಿ ಆಕ್ರೋಶಗೈಯುತ್ತಾ, ಗೈಯುತ್ತಾ ಆ ಪ್ರಾಣಹೀನ ಶಿರಸ್ಸಿನೊಡನೆ ಸಂವಾದ ಮಾಡುತ್ತ ಮಾಡುತ್ತ ಅಲ್ಲಿಯೇ ಮೂರ್ಛಿತಳಾಗಿ ಬಿದ್ದಳು. ಆಗ ಕಾವಲಕ್ಕಿರಿಸಿದ ''ಸರಮಾ'' ಎಂಬ ರಾಕ್ಷಸಿಯು ಸೀತಾದೇವಿಯ ಈ ಶೋಚನಿಯ ಸ್ಥಿತಿಯನ್ನು ಕಂಡು ಕರುಣೆದುಂಬಿ ಅವಳನ್ನು ಉಪಚರಿಸಿ ಎಬ್ಬಿಸಿ ''ದೇವೀ ಇದೇನು ವೃಥಾ ಶೋಕ ನಿನ್ನದು? ಇದು ನಿಜವಾದ ನಿನ್ನ ಶ್ರೀರಾಮನ ಶಿರವಲ್ಲ. ಮಾಯಾವಿ ಶಿರವದು. ರಾವಣನ ಹೀನಕೃತ್ಯವಿದು. ನಿನ್ನ ಶ್ರೀರಾಮ ಸುರಕ್ಷಿತನಿದ್ದಾನೆ. ಈಗ ಆತ ತನ್ನ ಅಪಾರವಾದ ಸೈನ್ಯದೊಂದಿಗೆ ಲಂಕೆಯನ್ನು ಸುತ್ತುಗಟ್ಟಿದ್ದಾನೆ''ಎಂದು ಹೇಳಿದಾಗ ಸೀತಾದೇವಿ ''ಹೌದೇ ತಂಗಿ, ನಿಜವೇ ನೀನು ಹೇಳುವುದು? ಸರಿ ಹಾಗದರೆ ಈಗ ನನ್ನ ಜೀವದಲ್ಲಿ ಜೀವ ಬಂದಂತಾಯಿತು ನೋಡು''

ಎಂದು ಚೇತರಿಸಿಕೊಂಡು ಹೇಗೋ ಎದ್ದು ಕುಳಿತಳು. ಕಣ್ಣುಗಳಲ್ಲಿ ಸಮಸ್ತ ಪ್ರಾಣಶಕ್ತಿಯನ್ನು ಕೇಂದ್ರೀಕರಿಸಿ ಪುನಃ ಅವಳು ಶ್ರೀರಾಮ ದರ್ಶನಕ್ಕಾಗಿ ಕಾತರದಿಂದ ಕಾಯತೊಡಗಿದಳು.

ಇತ್ತ ಶ್ರೀರಾಮ ಲಕ್ಷ್ಮಣ ಸುಗ್ರೀವರೇ ಮೊದಲಾದ ವೀರರು ಸುವೇಲ ಪರ್ವತದ ಮೇಲೇರಿ ಲಂಕೆಯ ವಿಸ್ತಾರವನ್ನು ನಿರೀಕ್ಷಿಸುತ್ತಿದ್ದರು. ವಿಭೀಷಣನು ಅವರಿಗೆಲ್ಲ ಅಲ್ಲಲ್ಲಿಯ ಮಹತ್ವದ ಸ್ಥಾನಗಳ ಕಲ್ಪನೆಯನ್ನು ಮಾಡಿಕೊಡುತ್ತಿದ್ದ. ಅಷ್ಟರಲ್ಲಿ ಸುಗ್ರೀವನ ಲಕ್ಷ್ಯ ಎಲ್ಲಿಯೋ ಕೇಂದ್ರೀಕೃತವಾಯಿತು. ಲಂಕಾಧಿಪತಿ ರಾವಣ, ಶ್ವೇತ ಭವನದ ಪ್ರಾಸಾದದ ಮೇಲಂತಸ್ತಿನ ಮೇಲೆ ನಿಂತು, ಶ್ರೀರಾಮ ಸೇನೆಯ ನಿರೀಕ್ಷೆ ಮಾಡುತ್ತಿರುವುದನ್ನು ಸುಗ್ರೀವ ಕಂಡ. ರಾವಣನನ್ನು ನೋಡಿದಾಕ್ಷಣ ಸುಗ್ರೀವ ಸಂತಾಪದಿಂದ, ತತ್‌ಕ್ಷಣ ಸುವೇಲ ಪರ್ವತದಿಂದ ರಾವಣನಿದ್ದ ಸ್ಥಳಕ್ಕೆ ನೇರವಾಗಿ ಉಡ್ಡಾಣ ಮಾಡಿ ಒಮ್ಮೆಲೇ ಅವನನ್ನು ಮುತ್ತಿದ. ಇಬ್ಬರಲ್ಲಿ ನಿ:ಶಸ್ತ್ರ ನಿಕರದ ದ್ವಂದ್ವ ನಡೆಯಿತು. ರಾವಣ, ಇನ್ನು ತನ್ನನ್ನು ಸ್ವಾಧೀನ ಪಡಿಸಿಕೊಳ್ಳಲು ತನ್ನ ಮಾಯವಿ ಮಂತ್ರವನ್ನು ಪ್ರಕಟಮಾಡಲು ಪ್ರಾರಂಭಿಸಿದ್ದನ್ನು ಸುಗ್ರೀವ ಗುರುತಿಸಿ ಹೇಗೋ ರಾವಣನ ಹಿಡಿತದಿಂದ ಜಾರಿಕೊಂಡು, ಸುವೇಲ ಪರ್ವತದ ಮೇಲಿದ್ದ ಶ್ರೀ ರಾಮಾದಿಗಳನ್ನು ಪುನ: ಬಂದು ಕೂಡಿಕೊಂಡ. ಸುಗ್ರೀವನ ಮೈ ತುಂಬೆಲ್ಲ ಅಲ್ಲಲ್ಲಿ ಆದ ಗಾಯಗಳನ್ನು ಕಂಡು ಶ್ರೀರಾಮ ವಿಷಾದಿಸಿದ. ಯೋಗ್ಯ ಉಪಚಾರ ಮಾಡಿ ಅವನಿಗೆ ಪ್ರೇಮಾಲಿಂಗನವನ್ನಿತ್ತು ಆಮೇಲೆ ಸೌಮ್ಯವಾಗಿಯೇ ''ಸುಗ್ರೀವಾ ನಿನ್ನ ಈ ಸಾಹಸ ಭೂಪತಿಯಾದ ನಿನಗೆ ಶೋಭಿಸಲಾರದು ನೋಡು'' ಎಂದ.

## ಅಧ್ಯಾಯ - ೪೪

## ''ಸುಗ್ರೀವಾ ಈ ನಿನ್ನ ಸಾಹಸ ರಾಜನಾದ ನಿನಗೆ ಶೋಭಿಸುವುದಿಲ್ಲ''

ಆಣೆ ಬಾಣೇ ಪ್ರಸಂಗವಿದು, ತುಂಬಾ ತೊಡಕಿನದು. ಈಕ್ಷಣ ಹೀಗಿರುವಾಗ ಆ ಕಪಟಿ ರಾವಣ ಮಾಯಾವಿ ಆತ, ನೀನು ಇದನ್ನು ಅರಿತು ಯಾರಿಗೂ ಹೇಳದೇ ಕೇಳದೇ ಹೋಗಿ ಆಕಸ್ಮಿಕವಾಗಿ ಆತನನ್ನು ನೀನೊಬ್ಬನೇ ಮೇಲೆತ್ತಿದಿ ಏನಿದು? ನೀನು ಹೀಗೇಕೆ ಮಾಡಿದಿ ಎಂಬುದು ತಿಳಿಯಲಿಲ್ಲ ನನಗೆ. ನಾವಿರಲಿಲ್ಲವೇ ಇಲ್ಲಿ ? ವಿಭೀಷಣ, ನಳ, ಲಕ್ಷ್ಮಣರಿದ್ದರು. ನಮ್ಮಗಳಲ್ಲಿ ಯಾರೊಬ್ಬರನ್ನು ನೀನು ವಿಚಾರಿಸದೇ ನಮಗಾರಿಗೂ ಈ ನಿನ್ನ ಕಾರ್ಯದ ಕಲ್ಪನೆ ಕೂಡ ಕೊಡದೇ, ರಾವಣನಿದ್ದೆಡೆಗೆ ನೇರವಾಗಿ ಉಡ್ಡಾಣ ಮಾಡಿದಿ. ಇದು ತುಂಬಾ ಸಾಹಸದ್ದೇನೋ ನಿಜ. ಆದರೆ ರಾಜನಾದ ನಿನಗೆ ತಕ್ಕದಲ್ಲ. ವಿಚಾರ ಮಾಡಿ

ನೋಡು. ನಿನ್ನ ಅಪಾರ ಕಾರ್ಯ ಶಕ್ತಿಯ ಕಲ್ಪನೆ ನನಗೆ ಇಲ್ಲೆಂದು ಭಾವಿಸುವೆಯಾ? ಅದರ ಅರಿವು ಪೂರ್ಣ ನನಗೆ ಇದೆ. ನನ್ನ ಮೇಲೆ ಅತೀವ ಭಕ್ತಿ ನಿನ್ನದು ಎಂಬುದನ್ನು ನಾನು ಬಲ್ಲೆ. ಆದರೆ ಸಾಂಪ್ರತಕ್ಕೆ ಈ ನಿನ್ನಾ ಸಾಹಸ ಯೋಗ್ಯವಿರಲಿಲ್ಲ, ಅನಪೇಕ್ಷವಾದುದು. ಏನೋ ನಡೆದು ಹೋಯಿತು.

ಸುಗ್ರೀವಾ, ದ್ವಂದ್ವದಲ್ಲಿಯೇ ರಾವಣನನ್ನು ನೀನು ವಧೆ ಮಾಡಬಲ್ಲವನಾಗಿದ್ದರೆ ಇಷ್ಟೆಲ್ಲ ಖಟಾಟೋಪವೇಕೆ? ಈ ಸೈನ್ಯವನ್ನೆಲ್ಲಾ ಯಾಕೆ ಕೂಡಿಸಿದೆ? ಯಾಕೀ ಗುಂಪುಗಳು? ಈ ವಾನರ ಗಣಗಳೇಕೆ? ಶತ್ರುದಮನವಾದ ಸುಗ್ರೀವಾ ನೃಪರು ರಣದಲ್ಲಿ ಭಾವನೆಯನ್ನು ಗುರುತಿಸುವದಿಲ್ಲ ಎಂಬುದನ್ನು ತಿಳಿದುಕೋ. ಮೊದಲು ವೈರಿಯ ಶಕ್ತಿಯ ಮಟ್ಟ ಎಷ್ಟಿದೆ ಎಂಬುದನ್ನು ಅರಿತುಕೊಂಡು, ಯಾವ ರೀತಿ ಯುದ್ಧ ಮಾಡಬೇಕು ಎಂಬುದನ್ನು ಯೋಜನೆ ಮಾಡಬೇಕಾಗುವುದು, ಬಳಿಕ ಪರಾಕ್ರಮ ಪ್ರದರ್ಶನ. ಇವಾವುಗಳ ವಿಚಾರವನ್ನೂ ಮಾಡದೇ ಅವಿಚಾರದಿಂದ ಜಯ ಯಾರಿಗಾದರೂ ಲಭಿಸೀತೇ? ನೀನೇ ಯೋಚಿಸಿ ನೋಡು ಸುಗ್ರೀವಾ.

ಉಕ್ಕಿನ ಶರೀರದ ಆ ರಾವಣನ ಸಂಗಡ ವಿಚಾರವಿಲ್ಲದೇ ನೀನು ಹೆಣಗುತ್ತಿರುವಾಗ, ಒಂದು ಕ್ಷೀಣ ಕ್ಷಣವದು, ನಿನ್ನ ಕೈಸೋತು, ನೀನು ಒಂದು ವೇಳೆ ಮಡಿದಿದ್ದರೆ ಗತಿ ಏನಾಗುತ್ತಿತ್ತು? ಈ ರಾಘವ ನಿನ್ನಂತಹ ಒಬ್ಬ ಸನ್ಮಿತ್ರನನ್ನು ಕಳೆದುಕೊಳ್ಳುತ್ತಿದ್ದ. ನಿನ್ನ ಸೈನ್ಯದ ಎದೆಯೊಡೆದು ಹತಬಲವಾಗುತ್ತಿತ್ತು, ಅಲ್ಲವೇ?

ಈ ದ್ವಂದ್ವದಿಂದ ಲಾಭವಾದರೂ ಏನು ಆಗುತ್ತಿತ್ತು ಹೇಳು ನೋಡೋಣ? ಈ ಅಲ್ಪ ಜಯದಿಂದ ರಾವಣ ಉಬ್ಬುತ್ತಿದ್ದನಷ್ಟೇ ಅಲ್ಲ. ಮತ್ತೇನಾಗುತಿತ್ತು ಗೊತ್ತೇ? ರಾವಣ ರಾಕ್ಷಸರನ್ನು ಕೂಡಿಕೊಂಡು ಉನ್ಮಾದದಿಂದ ಹೆಣಗುತ್ತಿದ್ದ. ವಾನರರು ಹಿಂಜರಿಯುತ್ತಿದ್ದರು.

ಈ ರೀತಿಯಾಗಿ ದಶಕಂಠನದೇ ಜಯವಾಗಿದ್ದರೆ ನಮ್ಮ ಯುದ್ಧದ ಮುಖ್ಯ ಉದ್ದೇಶ ''ಮೈಥಿಲಿಯ ಮುಕ್ತತೆ'' ಇದೆಲ್ಲಿ ಸಾಧಿಸುತ್ತಿತ್ತು? ''ಸಹಾಯ ಮಾಡುವೆನೆಂದು'' ನೀನು ನನಗಿತ್ತ ವಚನ ಶಪಥಗಳೆಲ್ಲ ವ್ಯರ್ಥವೇ ಆಗುತ್ತಿದ್ದವು. ಶಪಥದಿಂದ ಯಾರಾದರೂ ರಾಕ್ಷಸರ ವಧೆ ಮಾಡಿದ್ದು ನೋಡಿರುವೆಯಾ? ಆಗಬಾರದ್ದು ಆಗಿಹೋಯಿತು ಸುಗ್ರೀವಾ. ಅದನಿನ್ನು ಮರೆ. ಏಳಿನ್ನು, ಸತ್ವರ ಹೋಗಿ ಸೇನೆಯನ್ನು ಕೂಡಿಸು. ಕುಶಲ ರಣಜ್ಞ ನೀನು ಸುಯೋಗ್ಯವಾಗಿ ಸೇನೆಯನ್ನು ರಚಿಸು. ರಾವಣನೊಬ್ಬನನ್ನೇ ಅಲ್ಲ ಅವನ ನೆರವಿಗೆ ಬಂದ ಅವನ ಆಪ್ತ ಸೇನೆಯನ್ನೂ ವಧೆ ಮಾಡೋಣ. ನಮ್ಮ ಕಾರ್ಯವನ್ನು ವ್ಯರ್ಥ ಹೋಗಗೊಡುವದು ಬೇಡ ಎಂದು ಶ್ರೀರಾಮನೆಂದಾಗ, ಅವನ ಆಜ್ಞೆಯಂತೆ ಸೈನ್ಯ ಸಜ್ಜು

ಮಾಡಲೆಂದು ಸುಗ್ರೀವ ತೆರಳಿದ.

ಶ್ರೀರಾಮಚಂದ್ರನು ಕಿಷ್ಕಿಂದಾಪತಿ ಸುಗ್ರೀವನಿಗೆ ಹೀಗೆ ಸಕಾಲಕ್ಕೆ ಸರಿಯಾಗಿ ಬುದ್ಧಿಗಲಿಸಿ ಎಚ್ಚರಿಸಿದನು.

ಅನಂತರ ಅವರೆಲ್ಲರೂ ಪರ್ವತದ ಶಿಖರದಿಂದ ಕೆಳಗಿಳಿದರು. ಸುಗ್ರೀವನು ಯಥೋಚಿತವಾಗಿ ಸೇನೆಯನ್ನು ರಚಿಸಿದ.

ಸ್ವರ ಶಾಸ್ತ್ರಕ್ಕೆ ಅನುಸಾರವಾಗಿ ಯೋಗ್ಯ ಮೂಹೂರ್ತ ನೋಡಿ ಯುದ್ಧವನ್ನು ಪ್ರಾರಂಭಿಸಲು ವಾನರ ಸೇನಾಪತಿಗಳಿಗೆ ಆಜ್ಞೆಯನ್ನೀಯಲಾಯಿತು. ಉಕ್ಕೇರಿ ಬರುವ ಸಾಗರದಂತೆ ಗರ್ಜನೆ ಮಾಡುತ್ತ, ವಾನರ ಸೇನಾಪಡೆಗಳು ನೆಗೆ ನೆಗೆಯುತ್ತಾ ಲಂಕೆಯತ್ತ ಹೊರಟವು. ಈ ಪ್ರಚಂಡನಾದ ನಿನಾದದಿಂದ ದುರ್ಗ ಪರ್ವತ ಅಗಸೆಗಳನ್ನೊಳಗೊಂಡು ಇಡೀ ಲಂಕೆಯೇ ಕಂಪಿಸಹತ್ತಿತು. ಇನ್ನು ಇಷ್ಟರಲ್ಲಿಯೇ ಯುದ್ಧ ಪ್ರಾರಂಭವಾಗುವದು, **ಆಗ ರಣನೀತಿ ನಿಪುಣ ರಾಮಚಂದ್ರ ರಾಜಧರ್ಮವನ್ನು ನೆನೆದುಕೊಂಡು ಅಂಗದನಿಗೆ ಹೇಳಿದ.**

## ಅಧ್ಯಾಯ - ೪೫

## ''ಅಂಗದಾ, ಸತ್ವರ ಹೋಗಿ ರಾವಣನಿಗೆ ಹೇಳು'' (ಶ್ರೀರಾಮ)

''ಅಂಗದಾ, ತ್ವರೆಯಿಂದ ಓಡಿಹೋಗಿ ರಾವಣನಿಗೆ ಈ ರೀತಿ ಹೇಳು'' ಯುದ್ಧ ಇನ್ನು ಇಷ್ಟರಲ್ಲಿಯೇ ಪ್ರಾರಂಭವಾಗಲಿದೆ. ಒಮ್ಮೆ ಅದು ಪ್ರಾರಂಭವಾಯಿತೋ ಮುಂದೆ ವಿಚಾರಕ್ಕೆ ಅವಕಾಶವಿಲ್ಲ. ಆದುದರಿಂದ ರಾವಣನಿಗೆ ಕಡೆಯದಾಗಿ ಇನ್ನೊಮ್ಮೆ ವಿಚಾರಮಾಡಲು ತಿಳಿಸು.

ಅಂಗದಾ, ಇನ್ನೂ ಹೇಳು, ರಾಮನು ಸಮುದ್ರವನ್ನು ದಾಟಿ ನಗರ ದ್ವಾರ ಬಳಿ ನಿಂತಿದ್ದಾನೆ. ವಾನರ ಗಣ ಸಮರಗಾನದಿಂದ ಮೈ ಮರೆತಿದೆ. ಆದುದರಿಂದ ವಾದವನ್ನು ಮರೆತು ರಾಘವನಿಗೆ ಶರಣು ಬರ ಹೇಳು. ಅಂಗದ ಕೇಳಿಲ್ಲಿ, ಬ್ರಹ್ಮನಿಂದ ವರ ಪಡೆದೆನೆಂಬ ಹೆಮ್ಮೆಯಿಂದ, ನಿನ್ನ ಬಲವನ್ನೇ ಮರೆತು, ಪಾಪಿಯೇ ಅಖಿಲ ಪೃಥ್ವಿಯನ್ನೇ ಪೀಡಿಸಿದಿ. ದೇವನಾಗ ಅಪ್ಸರೆಯರನ್ನು ಕಾಡಿದಿ. ಆ ನಿನ್ನ ಸರ್ವ ಗರ್ವವನ್ನು ಇಳಿಸುವುದಾಕ್ಕಾಗಿ ಇದೋ ನಿನ್ನ ಮುಂದೆ ಶೌರ್ಯದ ಸೂರ್ಯ ಶ್ರೀರಾಮ ನಿಂತಿದ್ದಾನೆ. ಸೈನ್ಯವೇ ಅವನ ಪ್ರಭೆ. ನಿನ್ನ ರಾಜ್ಯ ಸಂಪದನೊಂದಿಗೆ ನಿನ್ನ ವಂಶವನ್ನೇ ಸುಟ್ಟೀತು?'' ಎಂದು ಎಚ್ಚರಿಕೆ ಕೊಡು ಅವನಿಗೆ.

ಅಲ್ಲದೇ ರಾವಣಾ ನಮ್ಮ ಸೈನ್ಯದ ಶಂಖನಾದವನ್ನು ಕೇಳು, ಧರಣಿಯೇ

ಕಂಪಿಸಹತ್ತಿದೆ. ನಿನಗಾಗಿ ಇಂದು ರಾಕ್ಷಸಕುಲವೇ ಮುಗಿಯಲಿದೆ. ಇನ್ನಾದರೂ ತೃಷೆ ಬಿಡು ಎಂದು ರಾವಣನಿಗೆ ಹೇಳು. ಈಗಕೊನೆಯಲ್ಲಾದರೂ ಮೂಢವೃತ್ತಿಯನ್ನು ಬಿಟ್ಟು, ಬಂಧಿಸಿಟ್ಟ ದೇವಿ ಮೈಥಿಲಿಯನ್ನು ತಂದು ರಾಘವನಿಗೆ ಒಪ್ಪಿಸು. ಅವನಿಗೆ ಶರಣಾಗತನಾಗಿ, ಯುದ್ದದ ಆಪತ್ತಿನಿಂದ ದೂರಾಗು ಎಂದು ಹೇಳು ಆತನಿಗೆ. ಆದರೆ ಸಮಯವನ್ನರಿಯದೇ ಸಮರದಲ್ಲಿ ಸ್ಥಿರಯಾದಿಯಾದರೆ ರಾಮಬಾಣ ನೇರವಾಗಿ ನಿನ್ನನ್ನು ಸ್ವರ್ಗಕ್ಕೆ ಅಟ್ಟುವದು. ನಿನಗೆ ಮೋಕ್ಷದ ದಾರಿ ಇದೊಂದೇ ಉಳಿದಿದೆ ಈಗ ಎಂದು ಹೇಳು. ಒಂದು ವೇಳೆ ಯಾವ ಮಾಯವೀ ಬಲದಿಂದ ನೀನು ರಾಮ ಸಹಚರಿಯನ್ನು ಹರಣಮಾಡಿರುವೆಯೋ, ಆ ನಿನ್ನ ಮಾಯವಿ ಬಲ ಕಂಡದ್ದಾದರೆ ನೆಟ್ಟಗಾಗಲಿಕ್ಕಿಲ್ಲ . ಕೊನೆಯದಾಗಿ ಅಂಗದಾ ಸ್ಪಷ್ಟವಾಗಿ ಹೇಳು ರಾವಣನಿಗೆ ಈ ಯುದ್ಧದಿಂದ ನೀನಂತೂ ಉಳಿಯುವದೇ ಇಲ್ಲ , ಇಷ್ಟೇ ಅಲ್ಲ, ನಿನ್ನ ಹೆಸರು ಕೂಡ ಭೂಮಿಯ ಮೇಲೆ ಉಳಿಯುವುದಿಲ್ಲ. ರಾಮಕೃಪೆಯನ್ನು ತನ್ನದಾಗಿ ಮಾಡಿಕೊಂಡ ಸೂಜ್ಞ ವಿಭೀಷಣನೇ ಲಂಕೆಯ ನೃಪ ಪದದ ಮೇಲೆ ಶೋಭಿಸುತ್ತಾನೆಂದು ಹೇಳು'' ಎಂದು ಶ್ರೀರಾಮಚಂದ್ರ ಅಂಗದನನ್ನು ರಾವಣನೆಡೆಗೆ ತ್ವರಿತವಾಗಿ ಓಡಿಸಿದ.

ಶ್ರೀರಾಮಚಂದ್ರನ ನಿರೋಪವನ್ನು ಹೊತ್ತುಕೊಂಡು ರಾವಣನ ಕಡೆಗೆ ಬಂದ. ಅಂಗದ ಆ ನಿರೋಪವನ್ನು ಇದ್ದಕ್ಕಿದ್ದಂತೆಯೇ ರಾವಣನ ಮುಂದೆ ಇರಿಸಿದ. ನಿರೋಪದ ತೀಕ್ಷ್ಣವಾದ ಶಬ್ದಗಳನ್ನು ಕೇಳುತ್ತಲೇ ರಾವಣನ ಕ್ರೋಧೆಗೆ ಸೀಮೆ ಉಳಿಯಲಿಲ್ಲ ''ಆ ರಾಮನ ನಿರೋಪವಂತೆ, ಈ ವಾನರ ತಂದನಂತೆ, ಸಚಿವರೇ, ಏನು ನೋಡುವಿರಿ? ಈ ದುರ್ಬುದ್ಧಿ ವಾನರನನ್ನು ಹಿಡಿದು ತಾತ್‌ಕಾಲ ವಧೆ ಮಾಡಿರಿ''ಎಂದು ಆಜ್ಞಾಪಿಸಿದ. ರಾವಣನ ಆಜ್ಞೆಯಂತೆ ಅನೇಕ ರಾಕ್ಷಸರು ಸರ್ಪಗಳು ಸುತ್ತಿಕೊಳ್ಳುವಂತೆ ಅಂಗದನ ದೇಹವನ್ನು ಸುತ್ತತೊಡಗಿದರು. ಆದರೆ ಆ ಮಹಾಬಲಾಢ್ಯ ವಾನರ ಅಂಗದ ತನಗೆ ಮುತ್ತಿದ ರಾಕ್ಷಸರೆಲ್ಲರನ್ನೂ ಎತ್ತಿಕೊಂಡೇ ರಾವಣನ ಪ್ರಾಸಾದದ ಶಿಖರದ ಮೇಲೆ ಹಾರಿ ಆ ರಾಕ್ಷಸರನ್ನೆಲ್ಲಾ ಭೂಮಿಗೆ ಅಪ್ಪಳಿಸಿದ.

ಇಂದ್ರವಜ್ರದ ಭಾರದಿಂದ ಹಿಮಾಲಯವು ಕುಸಿದಂತೆ ಅಂಗದನ ಭಾರಕ್ಕೆ ರಾವಣನ ಪ್ರಾಸಾದವು ಕುಸಿಯಿತು. ಶಿಖರವು ವಿದೀರ್ಣವಾಯಿತು. ಕೋಪಾವಿಷ್ಟನಾಗಿದ್ದ ರಾವಣನು ಸೈನ್ಯಕ್ಕೆ ಹೊರಬರುವಂತೆ ಆಜ್ಞಾಪಿಸಿದ.

# ಅಧ್ಯಾಯ - ೪೬

# ''ಅನುಪಮೇಯ'' ಶ್ರೀರಾಮ ರಾವಣರ ಯುದ್ಧ ಸುರುವಾಯಿತು(ಕುಶ ಲವ)

ಆ ಯುದ್ಧದ ಆರ್ಭಟವನ್ನೇನು ವರ್ಣಿಸುವುದು ! ನಭವನ್ನು ಭೇದಿಸುವಂತಹ ಶಂಖ ದುಂದುಭಿಗಳ ಧ್ವನಿಯೊಂದಿಗೆ ''ರಾಮ ರಾವಣರ ಯುದ್ಧ'' ಸುರುವಾಯಿತು. ಆಗ ದೇವೇಂದ್ರನು ಯುದ್ಧ ಸಹಾಯಾರ್ಥವಾಗಿ ಶ್ರೀರಾಮನಿಗೆ ಸಾರಥಿಯೊಂದಿಗೆ ತನ್ನ ರಥವನ್ನು ಕಳಿಸಿದ.

ಈ ಮಹಾನ್ ಯುದ್ಧದಲ್ಲಿ ಅನೇಕ ರಾಕ್ಷಸರು ಮತ್ತು ವಾನರರು ಮೃತಪಟ್ಟರು. ರಣದಲ್ಲಿ ತದೇಕಚಿತ್ತದಲ್ಲಿ ಹೊರಳಾಡ ಹತ್ತಿದರು. ಹೆಣಗಳ ಮೇಲೆ ಹೆಣಗಳು. ಅವೇನು ರಾಕ್ಷಸರವೋ, ಅಥವಾ ವಾನರರವೋ, ಎಂಬುದನ್ನು ಗುರುತಿಸಲು ಬಾರದಂತಾಗಿ ಉರುಳಾಡುತ್ತಿದ್ದರು. ಮರಣಕ್ಕಿಂತ ಶೌರ್ಯವೇ ಭಯಂಕರವಾಗಿ ಕಂಡಿತು. ಅವರಿವರ ಭಾಗಗಳು ಎಷ್ಟೋ ಯೋಜನಗಳ ದೂರ ಹಾರಿ ಬಿದ್ದವು. ಎಂತಹ ಭೀಕರ ದೃಶ್ಯವಿದು ರಣದಲ್ಲಿ ! ಯುದ್ಧವಲ್ಲವದು ಪ್ರಳಯಕಾಲವೇನೋ ಎಂಬುವಂತೆ ಭೂಮ್ಯಾಕಾಶಗಳು ಕಂಪಿಸತೊಡಗಿದವು.

ಎಲ್ಲಿ ಯಾರ ಯಾರ ಮಧ್ಯದಲ್ಲಿ ರಣದಲ್ಲಿ ಕಾಳಗ ಇಲ್ಲಿ ! ಕಾಳಗವಲ್ಲವಿದು. ಅಸಂಖ್ಯರು ಕಾಲನ ಪ್ರವೇಶ ಮಾಡುತ್ತಿದ್ದಾರೆ. ಯಾರು ಉಳಿಸುವವರು ಅವರನ್ನು ? ಆ ಭಯಂಕರ ತುಮಲದಲ್ಲಿ ಯಾರಿಗೂ ಯಾತರ ಪರಿವೆಯೇ ಉಳಿದಿರಲಿಲ್ಲ.

ಈ ರೀತಿಯಾಗಿ ನಡೆದ ರಣದಲ್ಲಿ ನಡೆದ ಭೀಷಣವಾದ ಹೋರಾಟದಲ್ಲಿ ಶ್ರೀರಾಮನು ರಾವಣನ ಸಾರಥಿಯನ್ನು ವಧೆಮಾಡಿ ಅವನ ರಥವನ್ನು ಚೂರು ಚೂರು ಮಾಡಿಬಿಟ್ಟ. ರಾವಣನ ವಿವೇಕ ಹಾರಿತು. ಬಾಣಗಳ ಮಳೆಯನ್ನೆ ಸುರಿಸಿ ಅವನನ್ನು ಜರ್ಜರಿತನನ್ನಾಗಿ ಮಾಡಿಬಿಟ್ಟ. **ರಾವಣ ಹತಬಲನಾದುದನ್ನು ಗುರುತಿಸಿ ಶ್ರೀರಾಮ ಹೇಳಿದ ''ರಾವಣ ಇಂದು ನಿರ್ವಿಣ್ಣನಾಗಿರುವಿ .ಇಂದು ನಿನ್ನ ಪ್ರಾಸಾದಕ್ಕೆ ಮರಳಿ ಹೋಗು. ವಿಶ್ರಾಂತಿ ಪಡೆದುಕೊಂಡು ನಾಳೆ ಬಾ'' ಎಂದ ರಾವಣನಿಗೆ** ಶ್ರೀರಾಮನ ಈ ಮಾತುಗಳಿಂದ ತುಂಬಾ ಅಪಮಾನವಾಯಿತು. ಅಧೋಮುಖನಾಗಿ ರಣದಿಂದ ಹೇಗೋ ಕಾಲ್ತೆಗೆದನು. ಆದರೂ ಅವನಿಗೆ ಸಮಾಧಾನವಾಲಿಲ್ಲ. ಹೇಗಾದೀತು? ಆದರೂ ಈ ಮಹಾ ಪ್ರಸಂಗವನ್ನು ಎದುರಿಸಲು ಮಹಾಬಲಾಢ್ಯನಾದ ತನ್ನ ತಮ್ಮ ಕುಂಭಕರ್ಣನೇ ಸಮರ್ಥನೆಂದು ಭಾವಿಸಿ ತನ್ನ ಪ್ರಾಸಾದವನ್ನು ತಲುಪಿದಾಕ್ಷಣ ಆತನನ್ನು ಎಬ್ಬಿಸಲು

ರಾಕ್ಷಸನಿಗೆ ಆಜ್ಞೆಯಿತ್ತ. ಎಂಟೆಂಟು ತಿಂಗಳುಗಳ ಕಾಲ ಕುಂಭಕರ್ಣ ಮಲಗಿಯೇ ಬಿಡುತ್ತಿದ್ದ. ಆತನನ್ನು ಎಚ್ಚರಗೊಳಿಸಲು ಆತನ ಕಿವಿಯ ಹತ್ತಿರ ಪಣವ, ಭೇರಿ, ಕುಂಭ ಮೊದಲಾದ ವಾದ್ಯಗಳನ್ನು ಮೊಳಗಿಸಿದರು. ಕುಂಭಕರ್ಣನ ಆಕಾರ ಮಹಾಭಯಂಕರವಾದುದು. ಮೈಮೇಲೆ ಆನೆಗಳು ಹಾಯ್ದು ಹೋದರೂ ಆತನಿಗೆ ಏನೋ ಒಂದು ಕೂದಲು ತಟ್ಟಿದಂತೆ ಭಾಸವಾಗುತ್ತಿತ್ತು. ಅಂತೂ ರಾಕ್ಷಸರೆಲ್ಲ ಸೇರಿ ಭಾರಿ ಪ್ರಯತ್ನ ಮಾಡಿ ಹೇಗೊ ಅವನನ್ನು ರಾಜಸಭೆಗೆ ಬರಮಾಡಿಕೊಂಡು ತನ್ನ ಪರಾಜಯದ ವೃತ್ತಾಂತವನ್ನು ವಿವರಿಸಿದ ಮತ್ತು ಅತ್ಯಂತ ದೈನ್ಯದಿಂದ ಅವನ ನೆರವನ್ನು ಕೋರಿದ. ರಾವಣನಿಗೆ ಕುಂಭಕರ್ಣ ಹೇಳಲು ಪ್ರಾರಂಭಿಸಿದ.

## ಅಧ್ಯಾಯ - ೪೭

## ಅಣ್ಣಾ ,ಲಂಕೆಗಿಂದು ಕಠಿಣ ಕಾಲ ಬಂದೊದಗಿದೆ

ಅಣ್ಣಾ ಯೋಗ್ಯ ಸಮಯಕ್ಕೆ ನನ್ನನ್ನು ಎಚ್ಚರಿಸಿದಿ. ಲಂಕೆಗಿಂದು ಕಠಿಣ ಕಾಲ ಬಂದೊದಗಿದೆ ಎಂಬುದನ್ನು ನಾನು ಒಪ್ಪುತ್ತೇನೆ. ಆದರೆ ನಿನ್ನ ದುಷ್ಕೃತಿಗಳಿಗೆ ಅದನ್ನು ನೀನೇ ಬರಮಾಡಿಕೊಂಡಿರುವಿ. **ಪಾಪಿಗಳಿಗೆ ಆತ್ಮಘಾತ, ದುಷ್ಕರ್ಮಿಗಳಿಗೆ ನರಕಪಾತ ಇವು ಕಟ್ಟಿಟ್ಟದ್ದೇ. ಅವು ತಪ್ಪುವುದಿಲ್ಲ. ಇದು ಅಪರಿಹಾರ್ಯ ನಿಯಮವಣ್ಣಾ ತಿಳಿದು ನೋಡು.** ಒಳಗೆ ಆತ್ಮಗರ್ವ ತುಂಬಿದೆ ನಿನ್ನಲ್ಲಿ. ಇನ್ನು ನಿನ್ನ ಬದುಕೇ ತುಂಬಾ ವಿಷಮಯ. ನಿನ್ನ ಜೀವನದಲ್ಲಿ ಯಾರ ಮಾತನ್ನೂ ಲೆಕ್ಕಿಸಲಿಲ್ಲ. ಬೋಧರ ಮಾತುಗಳು ಮಧುರ ಹತ್ತಲಿಲ್ಲ ನಿನಗೆ .ಲಂಕೆಯ ದುರ್ದೈವ ಎನ್ನಬೇಕು ಇದಕ್ಕೆ, ಮತ್ತೇನು?

ತಮ್ಮ ವಿಭೀಷಣ ನಿನ್ನ ಅಹಿತ ಬಯಸುವವನೇ? ಅತಿ ಸತ್ಯವಾದುದನ್ನು ನಿನ್ನ ಹಿತವಾದುದನ್ನೇ ನುಡಿದಿದ್ದ ನಿನಗೆ ಅವನ ಮಾತುಗಳು ಅಪ್ರಿಯವೆನಿಸಿರಬಹುದು. ಆದರೆ ಅವು ಪಥ್ಯದ ವಚನಗಳಿದ್ದವು. ಅವುಗಳಲ್ಲಿ ನಿನ್ನ ಹಿತವಡಗಿತ್ತು. ಅವುಗಳನ್ನು ಧಿಕ್ಕರಿಸಿದಿ ನೀನು. ಆದರೆ ಆದುದೇನು? ಅದರಿಂದ ನೀನು ಪಡೆದುದೇನು? ಆತ್ಮೀಯವಾದ ನಿನ್ನ ಒಬ್ಬ ತಮ್ಮನನ್ನು ಕಳೆದುಕೊಂಡು ಕುಳಿತಿ. ಅದರಲ್ಲಿ ಅತ್ತಿಗೆ ಮಂಡೋದರಿ ಮಹಾ ಪತಿವ್ರತೆ. ಅವಳು ಸೀತಾದೇವಿಯ ಪ್ರೀತಿಯ ಹವ್ಯಾಸಕ್ಕೆ ನೀನು ಬಿದ್ದುದನ್ನು ಕಂಡು ತುಂಬಾ ನೊಂದಳು, ಬೆಂದಳು ಅವಳು. ಈ ದುಷ್ಕೃತ್ಯದಿಂದ ನಿನ್ನನ್ನು ಪರಾವೃತ್ತಗೊಳಿಸಲು ತುಂಬಾ ಪರಿಶ್ರಮಿಸಿದಳು. ಸೀತಾದೇವಿಯನ್ನು ಮರಳಿ ರಾಮಚಂದ್ರನಿಗೆ ಒಪ್ಪಿಸಿ ಪುಣ್ಯಪಡೆಯಲು ಅದೆಷ್ಟು ಸಾರಿ ನಿನ್ನನ್ನು ವಿನಂತಿಸಿಕೊಳ್ಳಲಿಲ್ಲ? ಆದರೆ ಅವಳ ಹಿತದ ಮಾತು ನಿನಗೆ ಅಹಿತವೆನಿಸಿತು. ಅವಳ ಪವಿತ್ರ ಭಾವನೆಯನ್ನು ನೀನು ಕಾಲ್ಕೆಳಗೆ ಹಾಕಿ ತುಳಿದು ಬಿಟ್ಟೆ

ನೀನು, ಇದೂ ಇರಲಿ.

ನಿನ್ನ ರಾಜ್ಯ ಕಾರಭಾರವನ್ನಾದರೂ ಏನು ಹೇಳಲಿ ಅಣ್ಣಾ ನಾನು! ದೇಶ ಕಾಲ ಪರಿಸ್ಥಿತಿಗಳನ್ನು ಅರಿತುಕೊಂಡು ನ್ಯಾಯ ಅನ್ಯಾಯ್ಯಗಳನ್ನೂ ಆಲೋಚಿಸಿ ನೀನೆಂದೂ ಕಾರ್ಯಗಳಿಗೆ ಕೈಹಾಕಲಿಲ್ಲ. ನಿನ್ನ ಮನಕ್ಕೆ ಬಂದ ಹಾಗೆ ನಿರ್ಣಯ. ಯಾರೊಡನೆಯಾದರೂ ವಿಚಾರ ವಿನಿಮಯ ನಿನ್ನದು, ಕೇಳಬೇಡಿರಿ. ಸಚಿವರನ್ನು ನೀನು ಕೊನೆಯವರೆಗೂ ಪರೀಕ್ಷಿಸಿ ನೋಡಲೇ ಇಲ್ಲ. ಅಣ್ಣಾ ನೀನು ಜೀವನದುದ್ದಕ್ಕೂ ಮಾಡುತ್ತ ಬಂದುದೇನಂದರೆ, **ನಿನಗೆ ಪ್ರಿಯವಾದುದನ್ನು ಮಾತ್ರ ಕೇಳಿದಿ. ಅಪ್ರಿಯವಾದುದನ್ನು ತ್ಯಜಿಸಿದಿ. ಇದರಿಂದ ನೀನು ಸಾಧಿಸಿಕೊಂಡದ್ದು ಏನೆಂದರೆ ನಿನ್ನ ಘಾತವನ್ನು ನೀನೇ ಮಾಡಿಕೊಂಡಿ. ಅಂದ ಮೇಲೆ ಆತ್ಮಘಾತಕಿಯಲ್ಲವೇ ಅಣ್ಣಾ ನೀನು?**

ಉಪದೇಶಕ್ಕೆ ಸಮಯವಲ್ಲವಿದು. ನಾನಿನ್ನು ಏಳುವೆ. ಆದರೆ ನನ್ನ **ಅಂತರಂಗದಲ್ಲಿಯ ಬಂಧು ಭಾವನೆಗಳಿಂದ ಸ್ವಾಭಾವಿಕವಾಗಿಯೇ ಈ ಮಾತುಗಳು ಹೊರಹೊಮ್ಮಿದವು. ಒಳಗೆ ಹಿಡಿದಿಟ್ಟುಕೊಳ್ಳಬೇಕೆಂದಾದರೂ ಅವುಗಳನ್ನು ಆವರಿಸಲು ನನ್ನಿಂದ ಆಗಲಿಲ್ಲ, ಕ್ಷಮಿಸು.** ಇದೋ ಲಂಕೇಶಾ, ಅಭಯವನ್ನೀಯುವೆ. ಈ ಕುಂಭಕರ್ಣ ತನ್ನ ಕರ್ತವ್ಯವನ್ನು ಎಂದೂ ಮರೆತಿಲ್ಲ. ಈಗ ಮಾತನಾಡುವವ ಕುಂಭಕರ್ಣನಲ್ಲಿ ಆತನ ಬಂಧು ಭಾವನೆ ಮಾತಾಡುತ್ತದೆ. ಈ ಬಂಧು ಭಾವನೆಯ ಪ್ರಭಾವವನ್ನು ರಣದಲ್ಲಿ ಕಾಣುವಿ ನೀನು. ರಿಪುಗಳ ರಕ್ತದಿಂದ ಈ ಪೃಥ್ವಿಯನ್ನು ತೋಯಿಸಿ ಬಿಡುವೆ ನೋಡು ಬೇಕಾದರೆ. ಲಂಕೇಶಾ, ನನ್ನ ಪರಾಕ್ರಮ ನಿನಗೆ ಗೊತ್ತಿಲ್ಲವೇ? ಇಂದ್ರನನ್ನು ಸಹಜವಾಗಿ ವಧೆ ಮಾಡಬಲ್ಲ ಈ ಕುಂಭಕರ್ಣನ ಮುಂದೆ ಆ ಕ್ಷುದ್ರ ರಾಮಚಂದ್ರನ ಪಾಡೇನು? ಕ್ಷೀರ ಸಾಗರವನ್ನು ಪ್ರಾಶನ ಮಾಡಬಲ್ಲೆ ನಾನು .

ಅಣ್ಣಾ ನಾನು ನಿನಗೆ ಈಗ ಅಭಯ ವಚನವಿತ್ತಂತೆ ನೀನು ವಿಜಯಿಯೆಂದು ತಿಳಿ. ಸುಖದಿಂದ ಕುಳಿತು ಮದ್ಯ ಸೇವಿಸು. ಇದೋ ಅಣ್ಣಾ, ನಿನ್ನ ಭಾರವನ್ನೆಲ್ಲಾ ನನ್ನ ಹೆಗಲ ಮೇಲೆ ಹೊತ್ತುಕೊಂಡು ಹೊರಟೆ ನಾನು. ಮತ್ತೇಕೆ ಚಿಂತಿಸುವಿ ಅಣ್ಣಾ ನೀನು? ಎಂದು ನುಡಿದು ಮಹಾನ್ ಪರಾಕ್ರಮ ಕುಂಭಕರ್ಣ ರಣದತ್ತ ನಡೆದ.

ಕುಂಭಕರ್ಣ ರಾವಣನಿಗೆ ಹೇಳಿದುದೆಲ್ಲ ನಿಜವೇ ಇತ್ತು. ಅಣ್ಣನಿಗೆ ವಚನವಿತ್ತಂತೆ ರಣದಲ್ಲಿ ಆತ ಅತುಲ ಪರಾಕ್ರಮ ತೋರಿದ. ವಾನರ ತಂಡವನ್ನೇ ತಿಂದು ತೇಗಿದ. ಅನೇಕ ಬಲಾಢ್ಯ ವಾನರ ವೀರರನ್ನು, ವಧೆ ಮಾಡಿದ. ಕುಂಭಕರ್ಣನ ಪೆಟ್ಟಿಗೆ ಸುಗ್ರೀವನಂತಹ ಬಲಾಢ್ಯ ವೀರ ಮೂರ್ಛಿತನಾದ. ಶ್ರೀರಾಮನ ಸಂಗಡ ನಿಕರದ ಕಾಳಗ ಮಾಡಿದ. ಆದರೆ ಕೊನಗೆ ಶ್ರೀರಾಮನ ಬಾಣದೃಷ್ಟಿಯಿಂದ ಅವನ ಕೈಕಾಲುಗಳು ಕತ್ತರಿಸಿ

ಹೋದವು. ಪರ್ವತ ಗಾತ್ರದ ಅವನ ಪ್ರಚಂಡ ಮಸ್ತಕವು ಅಂತರಿಕ್ಷಕ್ಕೆ ಹಾರಿತು. ಅನಂತರ ಘೋರ ಪರಾಕ್ರಮಿಗಳಾದ ಇಂದ್ರಜೀತಾದಿ ರಾವಣ ಪುತ್ರರು ಶ್ರೀರಾಮನನ್ನು ಎದುರಾಗಿ ಹಣಗಾಡಿದರು. ಅವರನ್ನು ಶ್ರೀರಾಮ ಯಮಸದನಕಟ್ಟಿದ. ತನ್ನ ಮುಖ್ಯ ಯೋಧರೆಲ್ಲ ಮಣ್ಣುಮುಕ್ಕಿ ಹೋದುದನ್ನು ಕಣ್ಣಾರೆ ಕಂಡ ರಾವಣ ಕ್ರೋಧದಿಂದ ಹುಚ್ಚನಾಗಿ ತಾನೊಬ್ಬನೇ ಹೋರಾಡಲು ಮುಂದೆ ಬಂದ. ಇಬ್ಬರ ಮಧ್ಯ ಅನುಪಮವಾದ ಅಸಾಮನ್ಯವಾದ ಅತುಲವಾದ ದ್ವಂದ್ವ ನಡೆಯಿತು. ಉಭಯ ವೀರರೂ ಒಬ್ಬರ ಮೇಲೊಬ್ಬರು ಅಸಂಖ್ಯ ಬಾಣಗಳ ಅಸಂಖ್ಯ ಅಸ್ತ್ರಗಳ ಸುರಿಮಳೆಯನ್ನೇ ಸುರಿಸಿದರು. ರಣದಲ್ಲಿ ರಾಮ ರಾವಣರು ಸ್ಥಿರವಾಗಿಯೇ ಇದ್ದು ಕೇವಲ ಆಯುಧಗಳ ಮಧ್ಯ ತುಮುಲ ದ್ವಂದ್ವ ನಡೆದಿದೆಯೇನೋ ಎಂದು ಕೆಲವು ಕಾಲ ಭಾಸವಾಯಿತು. ಈ ಯುದ್ಧದಿಂದ ಸಪ್ತ ಸಾಗರಗಳು ಕ್ಷುಬ್ಧವಾದವು. ಪಾತಾಳದಲ್ಲಿ ಇದ್ದ ದಾನವರು ಭುಜಂಗಗಳೆಲ್ಲ ವ್ಯಥಿತವಾದವು. ಪೃಥ್ವಿಯು ಅಲುಗಾಡಲು ಪ್ರಾರಂಭಿಸಿತು. ವಾಯುವಿನ ಸಂಚಾರ ನಿಂತಿತು. ಇದು ಪ್ರಳಯವೇನೋ ಎಂದೆನಿಸಹತ್ತಿತ್ತು. ಇಷ್ಟರಲ್ಲಿ ಶ್ರೀರಾಮನು ಮಿಂಚಿನಂತೆ ಭುಜಂಗ ಬಾಣ ಒಂದನ್ನು ಬಿಟ್ಟು ರಾವಣನ ಮಸ್ತಕವನ್ನೇ ಹಾರಿಸಿದ. ಎಲ್ಲೆಡೆ ಹಾಹಾಕಾರವೆದ್ದಿತ್ತು. ಆದರೆ ಏನು ಆಶ್ಚರ್ಯವಿದು! ಮೊದಲಿನ ಮಸ್ತಕದ ಸ್ಥಾನಕ್ಕೆ ಪುನಃ ಒಂದು ಮಸ್ತಕ ಅಲ್ಲಿ ನಿರ್ಮಾಣವಾಯಿತಲ್ಲ! ಏನದ್ಭುತವಿದು! ಎಂದ ಶ್ರೀರಾಮ. ಭುಜಂಗ ಬಾಣ ಶ್ರೀರಾಮ ಬಿಡುವುದು, ಮಸ್ತಕ ಹಾರುವುದು! ಹಾರಿಹೋದ ಮಸ್ತಕದ ಸ್ಥಾನಕ್ಕೆ ಹೊಸ ಮಸ್ತಕ ಪುನಃ ಹಜರ. ಹೀಗೆ ಶ್ರೀರಾಮ ನೂರು ಮಸ್ತಕಗಳನ್ನು ಛೇಧಿಸಿದನಾದರೂ ರಾವಣನ ಅಂತ್ಯದ ಲಕ್ಷಣಗಳು ಕಂಡು ಬರಲಿಲ್ಲ. ಆಗ ಶ್ರೀರಾಮ ಚಿಂತಕ್ರಾಂತವಾಗಿ ತನ್ನ ಸಾರಥಿಗೆ ಹೇಳಹತ್ತಿದ. !

# ಅಧ್ಯಾಯ - ೪೮

## ಇಂದು ನನ್ನ ಬಾಣಗಳು ವಿಫಲವೇಕೆ ಆಗಹತ್ತಿವೆ ?(ಶ್ರೀರಾಮ)

''ಸಾರಥೀ, ಇಂದು ನನ್ನ ಬಾಣಗಳು ನಿಷ್ಫಲವಾಗಹತ್ತಿವೆಯಲ್ಲ ! ಏನಾಗಿರಬೇಕು? ಪುಣ್ಯವೆಲ್ಲ ಅಳಿಯಿತೇ? ನನ್ನ ಬಾಹುಗಳ ತ್ರಾಣವೇ ಇಲ್ಲದಂತಾಯಿತಲ್ಲ.

ಶಸ್ತ್ರಗಳ ದಾರುಣ ಮಳೆಗರೆದೆ ರಾವಣನ ಮೇಲೆ. ಆದರೆ ಪುನಃ ಅವನು ಮರದಂತೆ ಬೆಳೆಯುತ್ತಲೇ ಇದ್ದಾನಲ್ಲ! ಏನು ವಿಚಿತ್ರವಿದು! ರಾಮರಿಪುವಿನ ಪ್ರಾಣ ರಾಮನೆದರು ಹೇಗೆ ಉಳಿಯುವುದು ಎಂಬುದು ತಿಳಿಯದಾಗಿದೆ ನನಗೆ! ಸಾರಥೀ, ಏನು

ಚಮತ್ಕಾರವಿದು! ಏನೂ ಹೊಳೆಯಲೊಲ್ಲದಲ್ಲ ನನಗೆ! ಒಂದು ಶೀರ್ಷವನ್ನು ಛೇಧಿಸಿ ಹಾರಿಸಿದೆನೋ ಅದರ ಸ್ಥಳದಲ್ಲಿ ಪುನಃ ಒಂದು ಶಿರ ತತ್‌ಕಾಲ ಹುಟ್ಟಿ ಬರುತ್ತದೆ. ಇದೇನು ರಾವಣನ ಶರೀರವೋ ಶಿರಗಳ ಖಣಿಯೋ! ಇದು ಏನು ಎಂಬುದು ತಿಳಿಯದಾಗಿದೆ ನನಗೆ. ಶತಶೀರ್ಷಗಳನ್ನೇನೋ ಈ ವರೆಗೆ ನಾನು ಛೇಧಿಸಿ ನಭಕ್ಕೆ ತೂರಿದೆ. ಕಾಲಲ್ಲಿ ತುಳಿದೆ. ಆದರೆ ಪ್ರಾರಂಭದಲ್ಲಿ ಇದ್ದಂತೆಯೇ ಹೊಸ ಹುರುಪಿನೊಂದಿಗೆ ರಾವಣ ತನ್ನ ರಥದ ಮೇಲೆ ಯಥಾಸ್ಥಿತವಾಗಿ ನಿಂತೇ ಇರುವನಲ್ಲ! ಏನಾಶ್ಚರ್ಯವಿದು?

ಇಂದ್ರ ಸಾರಥೀ ಮಾತಲೀ - ಇದರಲ್ಲಿಯ ಗೂಢವೇನು? ಧನುವಿದ್ಯೆಯಲ್ಲಿ, ನಿಪುಣನೆಂದು ಧನುರ್ಧರನೆಂದೇ ನನ್ನನ್ನು ಕರೆಯುವರು ಇಷ್ಟು ಖ್ಯಾತಿವಂತ ನಾನು. ಆದರೆ ಇಂದು ನನ್ನ ವಿದ್ಯೆಗೆ ನನ್ನಿಂದಲೇ ಅಪಮಾನವಾದುದು ನನಗೆ ತುಂಬಾ ಅಸಹ್ಯವಾಗಿದೆ ಸಾರಥಿ. ಖರ, ಮಾರೀಚ ಅಲ್ಲದೇ ವಿರಾಧ ಮೊದಲಾದ ವೀರರನ್ನು ಇದೇ ಬಾಣದಿಂದ ನಾನು ವಧೆ ಮಾಡಿದೆ. ವಾಲಿಯನ್ನು ಕ್ಷಣದಲ್ಲಿ ನಿಷ್ಪ್ರಾಣ ಮಾಡಿದ್ದು ಇದೇ ಬಾಣವಲ್ಲವೇ? ಸಾರಥೀ, ನನ್ನ ಬಾಣಗಳೆಂದರೆ ಭಯದ ಆಗರ. ನನ್ನ ಬಾಣಕ್ಕೆ ಬೆದರಿ ಸಾಗರ ಕೂಡ ಹಿಂಜರಿಯಿತು. ಇಷ್ಟು ವಿಜಯಶಾಲಿ ಬಾಣಗಳಿವು. ಆದರೆ ಇಂದೇಕೆ ಇವು ನಿಷ್ಪ್ರಯೋಜನವಾದವೊ ತಿಳಿಯಲೊಲ್ಲದು. ನನ್ನ ಬಾಣಗಳ ಹೊಡೆತದಿಂದ ರಾವಣ ರಕ್ತದಲ್ಲಿ ಸಚೇಲ ಸ್ನಾನ ಮಾಡಿದನಾದರೂ, ಸಿಂಹದಂತೆ ಗರ್ಜಿಸುತ್ತಲೇ ಇದ್ದಾನೆ. ಇನ್ನೂ ಆತ ಆ ತನುಧಾರಿ (ಅಭಿಮಾನಿ) ರಾವಣ ಧನುರ್ಧಾರಿ ಶ್ರೀರಾಮನಿಗೆ ಈ ರೀತಿಯಾಗಿ ಅವಧ್ಯನಾದದು ಹೇಗೆ?

ದೇವ ಅಪ್ಸರೆಯರು ಇದಕ್ಕಾಗಿ ಚಿಂತೆಯಲ್ಲಿ ಇರಬಹುದು. ಈ ಕುರಿತು ಮುನಿಗಳು ನನಗೆ ತಪಮಾಡಲು ಸೂಚಿಸಬಹುದೇ? ಏನು, ಈ ನಿನ್ನ ಶರಸಂಧಾನ ವ್ಯರ್ಥವಾಯಿತೆನ್ನಲಾ? ಹೀಗೆ ಶ್ರೀರಾಮ ಏನೂ ತಿಳಿಯದವನಾಗಿ ಸುಮ್ಮನೇ ಕುಳಿತ.

ಹೀಗೆ ಇಂದು ತನ್ನ ಬಾಣಗಳೆಲ್ಲ ನಿಷ್ಫಲವಾದವಲ್ಲ ಎಂದು ನೊಂದ ಶ್ರೀರಾಮನಂತಹ ಸಮರ್ಥ ವೀರನ ಮುಖದಿಂದ ಬಂದುದನ್ನು ಕೇಳಿ ಇಂದ್ರಸಾರಥಿ ಮಾತಲಿ ತುಸು ನಗುತ್ತಲೇ ನಮ್ರವಾಗಿ ''ಪ್ರಭೋ, ಎಲ್ಲ ಬಲ್ಲವರು ತಾವು, ಏನೂ ಅರಿಯದವರಂತೆ ಮಾತಾಡುತ್ತಿದ್ದೀರಲ್ಲ! ರಾವಣನ ವಧೆಗೆ ''ಪಿತಾಮಹಾಸ್ತ್ರ'' ಪ್ರಯೋಗಿಸಿರಿ. ದೇವತೆಗಳು ಈ ಮೊದಲೇ ಹೇಳಿದಂತೆ ಆತನ ಮೃತ್ಯುಕಾಲ ಈಗ ಸನ್ನಿಹಿತವಾಗಿದೆ'' ಎಂದ ಮಾತಲಿಯ ನುಡಿಗಳಿಂದ ಶ್ರೀರಾಮನಿಗೆ ಸ್ಮರಣೆ ಬಂದಂತಾಗಿ ಅಗಸ್ತ್ಯ ಋಷಿಗಳಿಂದ ಪಡೆದ ಅತ್ಯಂತ ದೇದೀಪ್ಯಮಾನವಾದ ಪಿತಾಮಹಾಸ್ತ್ರವನ್ನು ಧನುಷ್ಯಕ್ಕೆ

ಹಚ್ಚಿ ಅದನ್ನು ಆಕರ್ಣವ ಎಳೆದು, ಮಹಾಪ್ರತಾಪಿ ರಾವಣನತ್ತ ಬಿಟ್ಟ. ದುಃಸಹವಾದ ಮತ್ತು ಪ್ರತ್ಯಕ್ಷ ಮರಣದಂತೆ ಅನಿವಾರವಾದ ಈ ಬಾಣವು, ರಾವಣನ ಎದೆಯಲ್ಲಿ ಸೇರಿ ಆತನ ಹೃದಯವನ್ನು ಶತಶಃ ವಿದೀರ್ಣ ಮಾಡಿಬಿಟ್ಟಿತು. ಈ ಬಾಣದ ಪ್ರಹಾರದೊಡನೆ ಗತಪ್ರಾಣನಾಗುತ್ತಿದ್ದ ಆ ರಾವಣನ ಕೈಗಳಿಂದ ಧನುಷ್ಯ ಬಾಣಗಳು ಕಳಚಿ ಬಿದ್ದವು. ಮತ್ತು ಮಹಾತೇಜಸ್ವಿಯಾದ ರಾಕ್ಷಸಪತಿ ಭೂಮಿಯ ಮೇಲೆ ಕುಸಿದ. ಆಗ ರಾಕ್ಷಸ ಸೈನ್ಯದಲ್ಲಿ ತುಂಬಾ ಹಾಹಾಕಾರವೆದ್ದಿತು. ರಾಕ್ಷಸ ಸೈನ್ಯವೆಲ್ಲ ದಾರಿಸಿಕ್ಕತ್ತ ಓಡಲಾರಂಭಿಸಿದಾಗ ಆ ಸೈನ್ಯವನ್ನೆಲ್ಲ ವಾನರರು ವಿಧ್ವಂಸ ಮಾಡಿಬಿಟ್ಟರು. ''ರಾವಣ ಮಡಿದ, ಶ್ರೀರಾಮನಿಗೆ ಜಯವಾಯಿತು. ನಮ್ಮ ಶ್ರಮ ಸಾರ್ಥಕವಾಯಿತು'' ಎಂದು ಕೂಗಾಡುತ್ತ ವಾನರರೆಲ್ಲ ಕುಣಿಯಲಾರಂಭಿಸಿದರು. ಅಂತರಿಕ್ಷದಲ್ಲಿ ದೇವತೆಗಳ ನಗಾರಿ ನೌಬತ್ತುಗಳ ಮೃದು ಧ್ವನಿ ಕೇಳಿಸಿತು. ಶ್ರೀರಾಮನ ರಥದ ಮೇಲೆ ಸ್ವರ್ಗದಿಂದ ಪುಷ್ಪವೃಷ್ಟಿ ಆಯಿತು.

## ಅಧ್ಯಾಯ -೪೯

## ದೇವತೆಗಳೇ ಭೂಮಿಯ ಮೇಲೆ ಇಂದು ರಾವಣನ ವಧೆ ಆಯಿತು (ಗಂಧರ್ವ ಅಪ್ಸರಾ)

ಅಪ್ಸರ ಗಂಧರ್ವರ ವಿಜಯ ಗೀತ ಕೇಳಬರಹತ್ತಿತ್ತು ! ''ದೇವತೆಗಳೇ ನೋಡಿರಿ, ಶ್ರೀರಾಮನ ಲೀಲೆಯನ್ನು. ಭೂಮಿಯ ಮೇಲೆ ಇಂದು ರಾವಣನ ವಧೆ ಆಯಿತು'' ''ಜಯ ರಾಮ ಪ್ರಭೋ'' ಎಂದು ವಾನರ ಸೈನ್ಯದ ಗರ್ಜನೆ ದಶ ದಿಕ್ಕುಗಳಲ್ಲಿ ಭೇದಿಸಿತು. ರಾವಣನ ವಧೆ ಆದುದರಿಂದ ದಶ ದಿಕ್ಕುಗಳಲ್ಲಿ ಸೌಖ್ಯವರಳಿತು. ಅವನಿಯು ಕಂಪನರಹಿತಳಾದಳು. ರವಿಯ ಪ್ರಭೆಗೆ ಸ್ಥಿರತೆ ಬಂದಿತು. ಮಧ್ಯಾನ್ಹದ ಬಳ್ಳಿ ಕದಡಿತು. ಒಳ್ಳೇದಾಯಿತು ಬಹಳ ಒಳ್ಳೆದಾಯಿತು ಎಂದು ಮುನಿಗಳು ನುಡಿಯ ತೊಡಗಿದರು. ಕಿನ್ನರರ ವಾದ್ಯಗಳ ಸುಮಧುರ ಗಾನ ಕೇಳಹತ್ತಿತು. ಭೂಲೋಕದ ಮೇಲೆ ಪ್ರಮೋದಕ್ಕೆ ಉಕ್ಕಿ ಬಂತು. ಸುರರ ಮಹಾ ರಿಪು ರಾವಣ ಒಮ್ಮೆ ಮೃತ್ಯು ಮುಖವನ್ನು ಸೇರಿದ ಎಂದು ಎಲ್ಲರಿಗೂ ಸಮಧಾನವಾಯಿತು.

ರಣದಲ್ಲಿ ವಿಜಯಿಗಳಾದ ನೃಪತಿ ಕಪಿಗಣಗಳು ವಿಜಯೋನ್ಮಾದದಿಂದ ಗರ್ಜಿಸಹತ್ತಿದರು. ಎಲ್ಲರೂ ಸೇರಿ ಪರ್ಣಪುಷ್ಪಗಳಿಂದ ಶ್ರೀರಾಮನ ಪೂಜೆ ಮಾಡಿದರು. 'ಜಯ ಜಯ ರಾಮ ಜಯರಾಮ' ಎನ್ನುತ್ತಾ ಶ್ರೀರಾಮನ ಮೇಲೆ ಕಲ್ಪತರುಗಳ ಹೂಗಳನ್ನು ಹಾರಿಸಿರಿ. ರತ್ನ ಮಣಿ ಭೂಷಣಗಳನ್ನು ಆತನ ಮೇಲೆ ತೂರಿರಿ. ಇಂದು **ಸತ್ಯಕ್ಕೆ ಜಯವಾಯಿತು. ಸತ್ಯಕ್ಕೆ ನಿತ್ಯ ಜಯ ಎಂಬುದನ್ನು ಮರೆಯದಿರಿ.**

ಧರ್ಮಪರಾಯಣನಾದ ಶ್ರೀರಾಮ ಕೇವಲ ಮಾನವನಲ್ಲ. ಚಕ್ರಾಯುಧವನ್ನು ಧರಿಸಿದ ಪ್ರತ್ಯಕ್ಷ ನಾರಾಯಣನಿವ. ಜಗದುತ್ಪಾದಕನೀತ. ತ್ರಿಭುವನ ಜೀವನನಿವ. ಕೇವಲ ಲೋಕಕಲ್ಯಾಣಕ್ಕಾಗಿ ಮಾನವರೂಪ ಧರಿಸಿ ಇವನು ಭೂಮಿಗೆ ಇಳಿದಿರುವನು. ಸೃಷ್ಟಿಯ ಉತ್ಪತ್ತಿ ಲಯಗಳೆಲ್ಲ ಈತನ ಸ್ವಾಧೀನ. ಪದ್ಮನಾಭನಿವ, ತಿಭುವನ ತಾರಕ, ಶರಣ್ಯನು. ಈತನೊಬ್ಬನೇ ಖಳರನ್ನು ಸಂಹಾರ ಮಾಡುವವ. ಬ್ರಹ್ಮಾಂಡಕ್ಕೆಲ್ಲ ಇವನದೇ ಆಶ್ರಯ. ''ಶ್ರೀವತ್ಸಲಾಂಛನವನ್ನು'' ಎದೆಯ ಮೇಲಿರಿಸಿಕೊಂಡು, ನಿತ್ಯ ಸಂತರ ರಕ್ಷಣೆ ಈತ ಮಾಡುತ್ತಿರುತ್ತಾನೆ. ಸದೈವ ಸತ್ಯದ ಪಕ್ಷವನ್ನು ವಹಿಸುವುದೊಂದೇ ಈತನಿಗೆ ಗೊತ್ತು. ಈತ ಶ್ರೀವಿಷ್ಣು, ಸೀತಾದೇವಿ ಕಮಲ. ಸ್ವತಃ ಎಲ್ಲವನ್ನು ಅರಿತಿರುವವನಾದರೂ, ಜಗತ್ತಿನ ಕಲ್ಯಾಣಕ್ಕಾಗಿ ಯುದ್ಧ ಮಾಡಿ, ಅತುಲ ಶ್ರೀರಾಮಲೀಲೆ ಈತ ತೋರಿಸಿದ'' ಎಂದು ಗಂಧರ್ವರು, ಅಪ್ಸರೆಯರು, ಶ್ರೀರಾಮನನ್ನು ಹಾಡಿ ಹರಿಸಿದರು ಎಂದು, ಗೀತರಾಮಾಯಣದ ೪೯ನೆಯ ಅಧ್ಯಾಯದೊಂದಿಗೆ **ಶ್ರೀ ರಾಮಾಯಣ ನಿತ್ಯ ಚಿಂತನ** ಸಪ್ತಾಹದ ೬ ದಿನ ಮುಗಿದುದು.

''ಶ್ರೀರಾಮ ಚಂದ್ರಾರ್ಪಣಮಸ್ತು''

ರಾಮರಕ್ಷಾಭಾಗ

ರಾಮಂ ಲಕ್ಷ್ಮಣ ಪೂರ್ವಜಂ ರಘುವರಂ ಸೀತಾಪತಿಂ ಸುಂದರಂ
ಕಾಕುತ್ಸ್ಥಂ ಕರುಣಾರ್ಣವಂ ಗುಣನಿಧಿಂ ವಿಪ್ರಪ್ರಿಯಂ ಧಾರ್ಮಿಕಂ।।೨೫

ರಾಜೇಂದ್ರಂ ಸತ್ಯಸಂಧಂ ದಶರಥತನಯಂ ಶ್ಯಾಮಲಂ ಶಾಂತಮೂರ್ತಿಂ।
ವಂದೇ ಲೋಕಾಭಿರಾಮಂ ರಘುಕುಲ ತಿಲಕಂ ರಾಘವಂ ರಾವಣಾರಿಂ।।೨೬

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ!
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ।।೨೭।।

ಶ್ರೀರಾಮ ರಾಮ ರಘುನಂದನ ರಾಮ ರಾಮ।
ಶ್ರೀರಾಮ ರಾಮ ಭರತಾಗ್ರಜ ರಾಮ ರಾಮ।
ಶ್ರೀರಾಮ ರಾಮ ರಣಕರ್ಕಶ ರಾಮ ರಾಮ।
ಶ್ರೀರಾಮ ರಾಮ ಶರಣಂ ಭವ ರಾಮ ರಾಮ।। ೨೮।।

ಶ್ರೀರಾಮಚಂದ್ರ ಚರಣೌ ಮನಸಾ ಸ್ಮರಾಮಿ।
ಶ್ರೀರಾಮಚಂದ್ರ ಚರಣೌ ವಚಸಾ ಗೃಣಾಮಿ।
ಶ್ರೀರಾಮಚಂದ್ರ ಚರಣೌ ಶಿರಸಾ ನಮಾಮಿ।
ಶ್ರೀರಾಮಚಂದ್ರ ಚರಣೌ ಶರಣಂ ಪ್ರಪದ್ಯೇ ॥ ೨೯॥

ಮಾತಾ ರಾಮೋ ಮತ್ ಪಿತಾ ರಾಮಚಂದ್ರಃ।
ಸ್ವಾಮೀ ರಾಮೋ ಮತ್‌ಸಖಾ ರಾಮಚಂದ್ರಃ।
ಸರ್ವಸ್ವಮ್ಮೇ ರಾಮಚಂದ್ರೋ ದಯಾಲುಃ।
ನಾನ್ಯಂ ಜಾನೇ ನೈವ ಜಾನೇ ನ ಜಾನೇ ॥ ೩೦॥

ದಕ್ಷಿಣೇ ಲಕ್ಷ್ಮಣೋ ಯಸ್ಯ ವಾಮೇ ತು ಜನಕಾತ್ಮಜಾ।
ಪುರತೋ ಮಾರುತಿರ್ಯಸ್ಯ ತಂ ವಂದೇ ರಘುನಂದನಂ॥ ೩೧॥

**ಜಾನಕೀ ಜೀವನ ಸ್ಮರಣ ಜಯ ಜಯ ರಾಮ**
**ಶ್ರೀರಾಮ ಜಯರಾಮ ಜಯ ಜಯ ರಾಮ (೧೦ ಸಾರೆ)**

**''ಜಯ ಜಯ ರಘುವೀರ ಸಮರ್ಥ''**

# ಸಪ್ತಾಹದ ೭ ನೆಯ ದಿನ

ಶ್ರೀ ರಾಮ ಜಯರಾಮ ಜಯ ಜಯರಾಮ ( ೧೦ ಸಾರೆ )

''ಜಯ ಜಯ ರಘುವೀರ ಸಮರ್ಥ''

ಧ್ಯಾನ್ಯ ಶ್ಲೋಕ :-

**ಧ್ಯಾಯೇದಾ ಜಾನುಬಾಹುಂ --------- ಮಂಡನಂ ರಾಮಚಂದ್ರಂ**

**ಇತಿಧ್ಯಾನಂ**

''ಜಯ ಜಯ ರಘುವೀರ ಸಮರ್ಥ''

**ಪೂರ್ವಾಕಥಾನುವಾದ :-**

ಸೀತಾದೇವಿಯಿಂದ ನಿರೋಪ ಪಡೆದುಕೊಂಡು ಲಂಕೆಯಿಂದ ಹೊರಟ ಹನುಮಂತನಿಗೆ ''ಇಲ್ಲಿಯವರೆಗೆ ನಾನು ಬಂದಿರುವೆ. ಈ ರಾಕ್ಷಸರ ಬಲಾಬಲವಾದರೂ ಎಷ್ಟಿದೆ ನೋಡೋಣ'' ಎಂಬ ವಿಚಾರ ಬಂದಿದೆ. ತತ್‌ಕ್ಷಣ ಸುಂದರವಾದ ಅಶೋಕವನವನ್ನು ಉಧ್ವಸ್ತಗೊಳಿಸ ಹತ್ತಿದ. ತಡೆಯಲು ಬಂದ ರಾವಣಪುತ್ರ ಅಕ್ಷರನನ್ನು ವಧೆಮಾಡಿದ ಇಂದ್ರಜೀತ ಹನುಮಂತನನ್ನು ಬ್ರಹ್ಮಾಸ್ತ್ರದಿಂದ ಬಂಧಿಸಿ ರಾವಣನ ಸಭೆಗೆ ಕರೆತಂದ. ರಾವಣ ಅವನನ್ನು ವಧೆ ಮಾಡಲು ಆಜ್ಞಾಪಿಸಿದರೂ ದೂತನನ್ನು ವಧೆ ಮಾಡುವುದು ರಾಜನೀತಿಗೆ ಸಮ್ಮತವಲ್ಲವೆಂದು ವಿಭೀಷಣನ ಮಾತಿಗೆ ಒಪ್ಪಬೇಕಾಯಿತು. ಹಾಗಾದರೆ ಈ ವಾನರನಿಗೆ ಶಿಕ್ಷೆ ಏನು ಎಂಬ ಬಗ್ಗೆ ವಿಚಾರವಿನಿಮಯವಾಗಿ ಕೊನೆಗೆ ಹನುಮಂತನ ಬಾಲಕ್ಕೆ ಬಟ್ಟೆ ಸುತ್ತಿ ಬೆಂಕಿ ಇಡಲಾಯಿತು. ಹನುಮಂತ ತನ್ನ ಉರಿಯುತ್ತಿರುವ ಬಾಲದಿಂದ ರಾವಣನ ಸಭೆಯಿಂದ ಉಡ್ಡಾಣ ಮಾಡಿ ನಗರದ ಮೇಲೆಲ್ಲ ಅಗ್ನಿಯನ್ನು ಸುರಿಸುತ್ತ ನಡೆದ. ಅಗ ಲಂಕಾಪಟ್ಟಣವೇ ಅಗ್ನಿಗೆ ಆಹುತಿ ಆಗಿದೆ. ನಂತರ ಶ್ರೀರಾಮನೆಡೆಗೆ ಬಂದು ಸೀತಾದೇವಿ ಕೊಟ್ಟಿದ್ದ ಮಣಿ ಆತನ ಕೈಗಿತ್ತ. ಮತ್ತು ಲಂಕೆಯಲ್ಲಿ ನಡೆದುದೆಲ್ಲವನ್ನೂ ಸವಿಸ್ತಾರವಾಗಿ ಆತನಿಗೆ ನಿವೇದಿಸಿದ. ಲಂಕೆಗೆ ಹೋಗುವುದೆಂಬ ಮಾತು ನಿಶ್ಚಯವಾಯಿತು. ಶ್ರೀರಾಮ ಸೇನೆಯೊಂದಿಗೆ ಎಲ್ಲರೂ ಸಮುದ್ರ ತೀರಕ್ಕೆ ಬಂದು ತಲುಪಿದರು. ಸಮುದ್ರ ದಾಟುವ ಸಮಸ್ಯೆ ಬಂತು. ಶ್ರೀರಾಮನ ಪ್ರಾರ್ಥನೆಯಂತೆ ಸಮುದ್ರನಾಥ ಪ್ರತ್ಯಕ್ಷನಾಗಿ ಸೇತುವೆಯನ್ನು ಎದೆಯಮೇಲೆ ಧರಿಸುವುದಾಗಿ ಹೇಳಿದ ಮೇರೆಗೆ ಸಮುದ್ರದ ಮೇಲೆ ಶ್ರೀರಾಮನನ್ನು ನೆನೆಯುತ್ತ ವಾನರ ಸೇನೆಯಿಂದ ಸೇತುವೆ ನಿರ್ಮಾಣವಾಗಿ ಎಲ್ಲರೂ ಲಂಕೆಯನ್ನು ತಲುಪಿದರು.

ಸುವೇಲ ಪರ್ವತದ ಮೇಲೇರಿ ಲಂಕೆಯ ವಿಸ್ತಾರವಾದ ನಿರೀಕ್ಷಣೆ ನಡೆಯಿತು. ಆಗ ರಾವಣ ತನ್ನ ಶ್ವೇತ ಭವನದ ಪ್ರಾಸಾದದ ಮೇಲಂತಸ್ತಿನ ಮೇಲೆ ನಿಂತು ಶ್ರೀರಾಮಸೇನೆಯ ನಿರೀಕ್ಷಣೆ ಮಾಡುತ್ತಿದ್ದುದನ್ನು ಸುಗ್ರೀವ ಕಂಡ. ಅವನಿಗೆ ಸಹಿಸಲು ಆಗಲಿಲ್ಲ. ಆಗ ಅವನು ತಾನು ನಿಂತ ಸುವೇಲ ಪರ್ವತದಿಂದ ನೇರವಾಗಿ ಉಡ್ಡಾಣ ಮಾಡಿ ಒಮ್ಮೆಲೆ ರಾವಣನನ್ನು ಮುತ್ತಿದ. ಇಬ್ಬರಲ್ಲಿ ನಿಕರದ ದ್ವಂದ್ವ ನಡೆಯಿತು. ಇನ್ನು ರಾವಣ ತನ್ನ ಮಾಯವಿ ತಂತ್ರದಿಂದ ತನ್ನನ್ನು ವಶಮಾಡಕೊಳ್ಳಹತ್ತಿದ ಎಂಬುದನ್ನು ಗುರುತಿಸಿ ರಾವಣನ ಹಿಡಿತದಿಂದ ಹೇಗೋ ಜಾರಿಕೊಂಡು ಪುನಃ ಸುವೇಲ ಪರ್ವತಕ್ಕೆ ಬಂದಾಗ ''ಸುಗ್ರೀವಾ, ಭೂಪತಿಯಾದ ನಿನಗೆ ಇದು

ಶೋಭಿಸಲಿಲ್ಲ. ಒಂದು ಕ್ಷೀಣ ಕ್ಷಣವದು. ನಿನ್ನ ಕೈಸೋತು ಒಂದು ವೇಳೆ ನೀನು ಮಡಿದಿದ್ದರೆ ಸೀತೆಯ ಮುಕ್ತಿ ಎಲ್ಲಿ?

ನೀನಿತ್ತ ವಚನವೆಲ್ಲಿ? ಎಲ್ಲವೂ ವ್ಯರ್ಥವಾಗುತ್ತಿತ್ತಲ್ಲವೆ ಎಂದು ಅನೇಕ ಬಗೆಯಿಂದ ಅವನಿಗೆ ಉಪದೇಶ ಮಾಡಿ ಸೈನ್ಯ ಸಿದ್ಧಗೊಳಿಸು ಎಂದು ಆಜ್ಞೆ ಇತ್ತ. ವಾನರ ಸೇನೆ ಲಂಕೆಯ ಬಾಗಿಲಿಗೆ ಬಂದು ನಿಂತಿದೆ. ಇನ್ನೇನು ಯುದ್ಧವನ್ನು ಇಷ್ಟರಲ್ಲಿ ಸಾರಬೇಕಿತ್ತು. ಅಷ್ಟರಲ್ಲಿ ಶ್ರೀರಾಮ ತನ್ನ ರಾಜಧರ್ಮಕ್ಕೆ ಅನುಸರಿಸಿ ಅಂಗದನಿಂದ ತನಗೆ ಶರಣು ಬಂದು ಯುದ್ಧದ ಆಪತ್ತಿನಿಂದ ದೂರಾಗಲು ರಾವಣನಿಗೆ ನಿರೋಪ ಕಳುಹಿಸಿದ. ರಾಮನ ನಿರೋಪದ ಮಾತಿನಿಂದ ರಾವಣನ ಕ್ರೋಧಕ್ಕೆ ಸೀಮೆ ಉಳಿಯಲಿಲ್ಲ. ಯುದ್ಧ ಘೋಷಿಸಿಯೇ ಬಿಟ್ಟ. "ರಾಮರಾವಣರ ಯುದ್ಧ ಪ್ರಾರಂಭವಾಯಿತು." ಶ್ರೀರಾಮನು ರಾವಣನ ಸಾರಥಿಯನ್ನು ವಧೆಮಾಡಿ ಅವನ ರಥವನ್ನು ಚೂರು ಚೂರು ಮಾಡಿದ. ರಾವಣನ ಮುಕುಟ ಹಾರಿತು. ರಾವಣ ನಿರ್ವೀರ್ಯವಾಗಿ ಕಂಡ. ವಿಶ್ರಾಂತಿ ಪಡೆದು ನಾಳೆ ಬರಲು ಶ್ರೀರಾಮ ನಿರೋಪಿಸಿದ. ಶ್ರೀರಾಮನ ನಿರೋಪವನ್ನು ಹೇಗೋ ಸಹಿಸಿಕೊಂಡು ರಾವಣ ತನ್ನ ಪ್ರಾಸಾದಕ್ಕೆ ಮರಳಿದ. ಮಹಾಪ್ರಯಾಸದಿಂದ ಮಹಾ ಬಲಾಢ್ಯನಾದ ಕುಂಭಕರ್ಣನನ್ನು ಎಚ್ಚರಿಸಿದ. ಲಂಕೆಗೆ ಕಠಿಣ ಕಾಲ ಬಂದುದು ನಿಜ ಎಂದು ಆಗ ಕುಂಭಕರ್ಣ ಹೇಳುತ್ತಾನೆ. "ಅಣ್ಣಾ ಲಂಕೆಗೆ ಕಠಿಣ ಕಾಲ ಬಂದುದು ನಿನ್ನ ದುಷ್ಟಕೃತ್ಯಗಳ ಫಲ, ನೀನೇ ಬರಮಾಡಿಕೊಂಡಿರುವಿ. ಅಣ್ಣಾ ಜೀವನದಲ್ಲಿ ಯಾರ ಮಾತನ್ನೂ ನೀನು ಕೇಳಲಿಲ್ಲ. ಬೋಧರ ಮಾತು ಮಧುರ ಹತ್ತಲಿಲ್ಲ. ನಿನಗೆ ಲಂಕೆಯ ದುರ್ದೆಶೆ. ನಿನ್ನ ಘಾತವನ್ನು ನೀನೇ ಮಾಡಿಕೊಂಡಿ. ಆತ್ಮ ಘಾತಕಿ! ನೀನು ಅಲ್ಲವೇ ಅಣ್ಣಾ" ಎಂದು ಕುಂಭಕರ್ಣ ಕೇಳುತ್ತಾನೆ. ಉಪದೇಶಕ್ಕೆ ಸಮಯವಿಲ್ಲ ಹೊರಟೆ ನನ್ನ ಮುಂದೆ ಆ ಕ್ಷುದ್ರ ರಾಮಚಂದ್ರನ ಪಾಡೇನು? ಎಂದು ರಣದತ್ತ ನಡೆದ ಶ್ರೀರಾಮನಿಂದ ಕುಂಭಕರ್ಣನ ವಧೆಯಾಗಿದೆ. ಆಗ ರಾವಣ ಕ್ರೋಧದಿಂದ ಹುಚ್ಚನಾಗಿ ತಾನೇ ರಾಮನೊಡನೆ ಹೋರಾಡಲು ಬಂದ. ಶ್ರೀರಾಮನ ಬಾಣಗಳಿಂದ ಅವನ ಶಿರಗಳು ನೂರಾರು ಹಾರಿದರೂ ಪುನಃ ಹೊಸ ಶಿರಗಳು ಅವುಗಳ ಸ್ಥಾನದಲ್ಲಿ ಬಂದು ನಿಲ್ಲುವ ರಾಕ್ಷಸೀ ಮಾಯಾವಿ ನಡೆಯಿತು. ಆಗ ಇಂದ್ರ ಸಾರಥಿ ಮೈಥಿಲಿಯ ಸೂಚನೆಯಂತೆ ಪಿತಾಮಹಾಸ್ತ್ರ ಪ್ರಯೋಗಿಸಿ ಶ್ರೀರಾಮ ರಾವಣನ ವಧೆ ಮಾಡಿದ. ದೇವತೆಗಳಿಗೆಲ್ಲ ಬಹಳ ಸಂತೋಷವಾಗಿದೆ. **"ದೇವತೆಗಳೇ ನೋಡಿರಿ ಶ್ರೀರಾಮಲೀಲೆಯನ್ನು. ಜಗತ್ತಿನ ಕಲ್ಯಾಣಕ್ಕಾಗಿ ಯುದ್ಧ ಮಾಡಿ ತನ್ನ ಅತುಲ ರಾಮಲೀಲೆ ತೋರಿಸಿದ"** ಎಂದು ಗಂಧರ್ವರು, ಅಪ್ಸರೆಯರು ಶ್ರೀರಾಮನನ್ನು ಹಾಡಿ ಹರಿಸಿದರು, ಎಂಬಲ್ಲಿಗೆ ನಿನ್ನೆಯ ಕಥೆ ಮುಗಿದಿದೆ. **ಇನ್ನು ಪ್ರಸ್ತುತ ಇಂದಿನ ಕಥೆ.**

ರಾವಣನ ವಧೆಯ ನಂತರ ಆತನ ಔರ್ಧ್ವ ದೈಹಿಕ ಕರ್ಮಗಳನ್ನು ಯಥಾವಿಧಿಯಾಗಿ ನಿರ್ವಹಿಸಲು ಶ್ರೀರಾಮನು ವಿಭೀಷಣನಿಗೆ ಆಜ್ಞೆ ಮಾಡಿದ "ವಿಭೀಷಣಾ, ವೈರ ಇರುವುದು ಮರಣ ಪರ್ಯಂತ ಮಾತ್ರ. ನಮ್ಮ ಕಾರ್ಯಭಾಗವೆಲ್ಲ ಮುಗಿದಂತಾಯಿತು. ಆದುದರಿಂದ ರಾವಣನ ಉತ್ತರ ಕ್ರಿಯಾದಿಗಳನ್ನು ಯಥೋಚಿತ್ತವಾಗಿ ಯಥಾ ವಿಧಿಯಾಗಿ ಸಾಂಗವಾಗಲಿ. ರಾವಣ ಯಾವರೀತಿಯಾಗಿ ನಿಮ್ಮವನೋ ಅದರಂತೆ ಅವನು ನಮ್ಮವನೂ ಹೌದು" ಎಂದು ಧರ್ಮಪರಾಯಣವಾದ ರಾಮನೆಂದ. ಶ್ರೀರಾಮನ ಆಜ್ಞೆಯಂತೆ ವಿಭೀಷಣ ಮುಂದಿನ ವ್ಯವಸ್ಥೆಗೆ ತೆರಳಿದ.

ರಾವಣನ ಮೃತ್ಯುವಿನಿಂದ ಅವನ ಅಂತಃಪುರದಲ್ಲಿ ಶೋಕದ ಮಹಾಪೂರ

ಹರಿಯಿತು. ಎಲ್ಲೆಲ್ಲಿಯೂ ರೋದನ ಕೇಳಿಬರುತ್ತಿತ್ತು. ರಾವಣನ ವಧೆಯ ನಂತರ ಶ್ರೀರಾಮನು ರಣ ಕರ್ಕಶ ಭಯಂಕರ ಸ್ವರೂಪವನ್ನು ತ್ಯಜಿಸಿ ಮೊದಲಿನಂತೆ ಪುನಃ ಸೌಮ್ಯ ಸ್ವರೂಪದಿಂದ ಶೋಭಿಸಹತ್ತಿದೆ.

ಅನಂತರ ಶ್ರೀರಾಮನು ಹನುಮಾನನಿಗೆ ಸಂಬೋಧಿಸಿ ''ವಾನರಾಧಿಪತಿಯೇ ನಮ್ಮಗಳ ವಿಜಯ ವಾರ್ತೆಯನ್ನು ಮತ್ತು ನಾವು ಕುಶಲರಾಗಿದ್ದುದನ್ನು ಜಾನಕಿಗೆ ಹೋಗಿ ನಿವೇದಿಸು'' ಎಂದ. ತದನುಸಾರ ಹನುಮಾನ ಸೀತಾದೇವಿಯನ್ನು ಕಂಡು ಈ ಸಂತೋಷದ ಸುದ್ದಿಯನ್ನು ಅವಳಿಗೆ ಅರುಹಿದ. ಆನಂದಾತಿಶಯದಿಂದ ಸೀತಾದೇವಿಯ ಮುಖದಿಂದ ಮಾತುಗಳೇ ಹೊರಡದಂತಾದವು. ಆದರೂ ''ಭಕ್ತವತ್ಸಲ ಆ ಪತಿಯ ದರ್ಶನವಾಗಬೇಕು'' ಇಷ್ಟೇ ನನ್ನ ಇಚ್ಛೆ ಎಂದು ಮಾತ್ರ ನುಡಿದಳು.

ಹನುಮಾನ ಮರಳಿ ಶ್ರೀರಾಮನೆಡೆಗೆ ಬಂದು ಸೀತಾದೇವಿಯ ಸ್ಥಿತಿಯನ್ನು, ಆತನ ದರ್ಶನಕ್ಕಾಗಿ ಅವಳಲ್ಲಿದ್ದ ಉತ್ಕಂಠತೆಯನ್ನು ನಿವೇದಿಸಿದಾಗ ಅವನ ಕಣ್ಣುಗಳು ನೀರೂರಿದವು. ಆಗ ಶ್ರೀರಾಮ ''ವಿಭೀಷಣಾ'' ಸೀತೆಯನ್ನು ನನ್ನ ಕಡೆಗೆ ತ್ವರಿತವಾಗಿ ಕರೆದುಕೊಂಡು ಬಾ'' ಎಂದು ಆಜ್ಞಾಪಿಸಿದನು. ಸೀತಾದೇವಿ ಶ್ರೀರಾಮನೆದರು ಬಂದು ನಿಂತಳು. ಬಹಳ ಕಾಲದ ನಂತರ ಪತಿ ಪತ್ನಿಯರಿಗೆ ಪರಸ್ಪರ ಮುಖ ದರ್ಶನವಾಯಿತು. ಉಭಯತರರಿಗೂ ತುಂಬಾ ಸಂತೋಷವಾಗಿ ಉಭಯತರ ಕಣ್ಣುಗಳು ಹನಿಗೂಡಿದವು.

## ಅಧ್ಯಾಯ - ೫೦

## ''ಅನೇಕ ಯತ್ನಗಳು ಮಾಡಿ ಪುನಃ ನಿನ್ನನ್ನು ಒಮ್ಮೆ ಕಂಡೆ'' (ಶ್ರೀರಾಮ)

ಆಗ ರಾಜಾಧಿರಾಜ ಶ್ರೀರಾಮಚಂದ್ರ ಸೀತಾದೇವಿಯನ್ನು ಉದ್ದೇಶಿಸಿ ''ಸೀತೆ ಲೀನತೇ. ಚಾರುತೇ ನಿನ್ನನ್ನು ಪುನಃ ಕಾಣಲು ಅದೆಷ್ಟು ಪ್ರಯತ್ನ ಮಾಡಬೇಕಾಯಿತು, ಗೊತ್ತೆ ನಿನಗೆ?''

ಭಯಾನಕವಾದ ಯುದ್ಧವು ಒಮ್ಮೆ ಮುಗಿಯಿತು. ಇನ್ನೇನು ಭಯ ನಿನಗೆ ಸೀತೆ? ಅಪರಾಧಿಯನ್ನು ಪೂರ್ಣವಾಗಿ ದಂಡಿಸಿದೆ. ನನ್ನ ಕ್ರೋಧವಳಿಯಿತು. ನೃಪತಿಗೆ ಉಚಿತವಾದುದನ್ನು ನಾನು ಮಾಡಿದೆ. ರಣದಲ್ಲಿ ರಿಪು ರಾವಣನ ಪ್ರಾಣವನ್ನೇ ತೆಗೆದುಕೊಂಡೆ. ಅವಮಾನದ ಕಾಲ ಮುಗಿಯಿತು. ಮಾನ ಸನ್ಮಾನಕ್ಕೆ ಏರಿತು. ನಿನ್ನ ಭಾಗ್ಯದಿಂದ ವಾನರರು ಜಯಿಸಿದರು. ನಾವು ನುಡಿದ ಶಬ್ದಗಳೆಲ್ಲ ಪೂರ್ತಿಗೊಂಡವು.

ನಮ್ಮಗಳ ಕೀರ್ತಿ ನಿಷ್ಕಲಂಕವಾಯಿತು. ಪ್ರಿಯೇ, ನನ್ನ ಶೌರ್ಯದಿಂದ ದೈವವನ್ನೇ ಬಾಗಿಸಿ ನಿನ್ನ ಮೂರ್ತಿಯನ್ನು ಪುನಃ ನಾನು ಕಂಡೆ. ಇನ್ನೇನು? ನಿನಗಾಗಿ ಬಹುಶ್ರಮವಹಿಸಿ ಸೇತುವೆ ಕಟ್ಟಿ, ಕಡಲ ದಾಟಿ ಬಂದ ವಾನರರೆಲ್ಲ ಇಂದು ಕೃತಾರ್ಥರಾದರು. ಸುಗ್ರೀವನಿಗೆ ವಿಜಯಶ್ರೀ ಒಲಿದಳು. ಸುರ ಲಲನೆಯರು ಮಂಗಲ ಗೀತೆ ಹಾಡುತ್ತಿದ್ದಾರೆ, ಕೇಳು.

ಸೀತೇ ನಿನ್ನಿಂದ ಈ ಯುದ್ಧ ನಡೆದುದೇನೊ ನಿಜ. **ಇದಕ್ಕೆ ನೀನು ಕಾರಣ ಮಾತ್ರ ಆದರೆ ನನಗೆ ಹತ್ತಿದ ಕಲಂಕವನ್ನು ತೊಳೆದುಕೊಳ್ಳಲು ಈ ಯುದ್ಧವನ್ನು ಹೂಡಬೇಕಾಯಿತೇ ವಿನಃ, ನಿನಗಾಗಿ, ನಿನ್ನನ್ನು ಪಡೆಯವುದಕ್ಕಾಗಿ, ಈ ಯುದ್ಧ ನಡೆಯಲಿಲ್ಲ ಎಂಬುದನ್ನು ಸರಿಯಾಗಿ ತಿಳಿದುಕೋ.** ಕಳೆದುಕೊಂಡ ಲೌಕಿಕ ಕೀರ್ತಿ ರಘುವಂಶಕ್ಕೆ ಪುನಃ ಲಭಿಸಿದಂತಾಯಿತು. ಆದರೆ ನೋವಿನ ಮಾತೆಂದರೆ, ನೇತ್ರಗಳಿಗೆ ರೋಗದ ಬಾಧೆ ಇರುವಾಗ ದೀಪೋತ್ಸವದ ಸೌಖ್ಯವನ್ನು ಅನುಭವಿಸಲು ಸಾಧ್ಯವಾದೀತೇ? ನಿನ್ನ ಮೇಲೆ ವಿಶ್ವಾಸ ಹೇಗಿಡಲಿ ? ಹೇಳು ಸೀತೇ? ಯಾಕೆಂದರೆ ಕಾಮಾಂಧನಾದ ರಾವಣ ಕಪಟಿ, ಅವನಿಗೆ ನಿಕಟವರ್ತಿಯಾಗಿ ಕೆಲಕಾಲವಾದರೂ ನೀನು ಉಳಿದಿ. ಅಂದ ಮೇಲೆ 'ನಿನ್ನ ಶೀಲ, ಪಾವಿತ್ರ್ಯವೇ?' ಸೀತೇ, ಈ ವಿಷಯ ಕುರಿತು ಇದಕ್ಕಿಂತ ಹೆಚ್ಚು ಸ್ಪಷ್ಟವಾಗಿ ನಾನೇನೂ ಹೇಳಲಾರೆ ತಿಳಿಯಿತೇ?

ದುಷ್ಟರ ಶಾಸನ, ಶಿಷ್ಟರ ಪಾಲನ ಇದು ನನ್ನ ನಿಜವಾದ ಧರ್ಮ. ಆ ಕಾರ್ಯವನ್ನು ನಾನೀಗ ಮಾಡಿ ಮುಗಿಸಿರುವೆನು. **ನೀನು ಮುಕ್ತಳಿನ್ನು. ನಿನಗಾಗಿ ಹತ್ತು ದಿಕ್ಕುಗಳೂ ತೆರೆದಿವೆ. ನಿನ್ನ ಇಷ್ಟ ಬಂದ ಕಡೆಗೆ ನೀನು ಹೋಗಬಹುದು. ನನ್ನ ಅನುಜ್ಞೆಗಾಗಿ ನೀನು ಕಾಯಬೇಕಿಲ್ಲ. ನಮ್ಮೀರ್ವರ ಸಂಬಂಧ ಇಂದಿಗೆ ಮುಗಿಯಿತು ಸಖೀ ಎಂದ ಶ್ರೀರಾಮ.**

ಶ್ರೀರಾಮನ ಮಾತುಗಳಿಂದ ಜಾನಕಿಯ ಅವಸ್ಥೆ ಏನಾಗಿರಬೇಡ? ದೈವವೇ ನನ್ನನ್ನು ರಕ್ಷಿಸಿತು ದೊಡ್ಡ ಕುತ್ತಿನಿಂದ ಪಾರಾದೆ ನಾನು. ವನದಲ್ಲಿ ಇನ್ನು ಇರುವಷ್ಟು ದಿನಗಳನ್ನಾದರೂ ನೆಮ್ಮದಿಯಿಂದ ರಾಘವನೊಡನೆ ಕಳೆಯೋಣ, ಎಂಬ ಸವಿಗನಸು ಅವಳು ಕಾಣುತ್ತಿದ್ದಾಗ, ಆಕೆಗೆ ಶ್ರೀರಾಮನ ನುಡಿಗಳಿಂದ ಕಿವಿಗಳಲ್ಲಿ, ಕಾದ ಸೀಸ ಸುರುವಿದಂತಾಯಿತು. ಕಣ್ಣುಗಳಿಂದ ಕಂಬನಿಯ ಕೋಡಿ ಹರಿಯಲಾರಂಭಿಸಿತು. ಅವಳು ಶ್ರೀರಾಮನ ಚರಣ ಶಪಥ ತೆಗೆದುಕೊಂಡು "ನಾಥಾ ನಾನು ಪೂರ್ಣ ಶುದ್ಧಳು. ಸಂಶಯಕ್ಕೆ ಅದೆಷ್ಟೂ ಆಸ್ಪದ ಕೊಡಬೇಡಿರಿ" ಎಂದು ಅನೇಕ ಬಗೆಯಿಂದ ಅವಳು ಹೇಳಿ ನೋಡಿದರೂ ಕರ್ತವ್ಯ ಕಠೋರ ಶ್ರೀರಾಮ ಕಣ್ಣೆತ್ತಿ ಅವಳನ್ನು

ನೋಡದೇ ಮೌನದಿಂದ ಸ್ವಸ್ಥವಾಗಿ ಕುಳಿತುಬಿಟ್ಟ.

ಸೀತಾದೇವಿಗೆ ಅನ್ಯ ಮಾರ್ಗ ಇರಲಿಲ್ಲ. ದೇಹತ್ಯಾಗ ಇದೊಂದೆ ದಾರಿ ಎಂದು ನಿರ್ಧರಿಸಿ ''ಲಕ್ಷ್ಮಣಾ ಚಿತೆ ಸಿದ್ಧಗೊಳಿಸಿರಿ, ಅಗ್ನಿಗೆ ಆಹುತಿಯಾಗಿ ಮುಕ್ತಳಾಗಿ ಹೋಗುವೆ, ಯಾರಿಗಾಗಿ ಜೀವಿಸಲಿನ್ನು? '' ಎಂದು ಗದ್ಗದಿತಳಾಗಿ ನುಡಿದಳು.

ವಿಭೀಷಣ ಲಕ್ಷ್ಮಣಾದಿ ಸರ್ವರಿಗೂ ಈ ಹೃದಯದ್ರಾವಕ ಘಟನೆಯಿಂದ ಪರಮಾವಧಿ ದುಃಖವಾಗಿತ್ತು. ಆದರೆ ಶ್ರೀರಾಮನ ಮನಒಲಿಸಲು ಯಾರೂ ಸಮರ್ಥರಾಗಲಿಲ್ಲ.

ಎಲ್ಲರೂ ನೋಡುತ್ತಿದ್ದಂತೆಯೇ ಚಿತೆ ಸಿದ್ಧವಾಗಿ ತನ್ನ ಭೀಕರ ನಾಲಗೆಗಳನ್ನು ಚಾಚುತ್ತ ನಿಂತಿತು. ಇದೇನು ದುರ್ಘಟನೆ ನಡೆಯಿತೆಂದು ಎಲ್ಲರೂ ಚಿಂತಾಕ್ರಾಂತರಾದರು. ಆಗ **ಸೀತಾದೇವಿ ಮುಂದೆ ಬಂದು ಶ್ರೀರಾಮನಿಗೆ ಪ್ರದಕ್ಷಿಣೆ ಹಾಕಿ ''ಜಯ ರಘುವೀರಾ'' ಎಂದು ಚಿತೆಯಲ್ಲಿ ಹಾರಿದಳು. ಅಗ್ನಿಯ ಜ್ವಾಲೆ ಅಗ್ನಿಯನ್ನು ಪ್ರವೇಶಿಸುವಂತೆ ಸೀತಾದೇವಿ ಅಗ್ನಿ ಪ್ರವೇಶ ಮಾಡಿದಳು. ''ಹಾಯ್ ಹಾಯ್'' ಎಂಬ ದಾರುಣ ದುಃಖದಿಂದ ಶಬ್ದ ಸಮಸ್ತ ಶ್ರೀರಾಮಸೇನೆಯಿಂದ ಹೊರಹೊಮ್ಮಿತು. ಆದರೆ ಮರುಕ್ಷಣದಲ್ಲಿಯೇ ಆ ಚಿತೆಯನ್ನು ಮೇಲಕ್ಕೆ ತೂರಿ, ಮೂರ್ತಿಮಾನ್ ಅಗ್ನಿದೇವ ಸೀತಾದೇವಿಯನ್ನು ಹಿಡಿದೆತ್ತಿಕೊಂಡು, ಸಾಕ್ಷಾತ್ ಪ್ರಕಟನಾದುದನ್ನು ಕಂಡು ಎಲ್ಲರಿಗೂ ಮಹದಾಶ್ಚರ್ಯವಾಯಿತು.!**

ಈ ರೀತಿ ಪ್ರತ್ಯಕ್ಷನಾದ ಪಾವಕನು ''ರಾಮಾ, ಈ ಸೀತಾದೇವಿ ನಿಷ್ಕಳಂಕಳಿರುವಳು ಶಂಕಿಸಬೇಡ, ಈ ನಿಷ್ಪಾಪ ಪತಿವ್ರತೆಯನ್ನು ಮರಳಿ ಸ್ವೀಕರಿಸು. ಇದು ನನ್ನ ಆಜ್ಞೆ ನಿನಗೆ'' ಎಂದು ನುಡಿದು ಸೀತಾದೇವಿಯನ್ನು ಸ್ವಾಧೀನ ಮಾಡಿ ನಿಂತ. ಆಗ ಆನಂದಾಶ್ರುಗಳಿಂದ ಶ್ರೀರಾಮನ ನೇತ್ರಗಳು ತುಂಬಿ ಬಂದವು. ಕಂಠ ಬಿಗಿದು ಬಂತು. ಸುರಶ್ರೇಷ್ಠ ಅಗ್ನಿದೇವನಿಗೆ ಶ್ರೀರಾಮ ನಮಸ್ಕರಿಸಿ ಗದ್ಗದ ಸ್ವರದಿಂದ ಹೇಳತೊಡಗಿದ.

# ಅಧ್ಯಾಯ - ೫೧

## ''ಲೋಕಸಾಕ್ಷಿಯಾಗಿ ಶುದ್ಧಳಾದಳೆಂದು ಸಖಿ ಜಾನಕಿ'' (ಶ್ರೀರಾಮ)

''ಅಗ್ನಿದೇವ, ಲೋಕಸಾಕ್ಷಿಯಾಗಿ ಸತಿ ಜಾನಕಿಯ ಶುದ್ಧಿಯಾಯಿತೆಂದು ಇನ್ನು ಅವಳು ನಿರಂತರ ನನ್ನ ಸ್ವಾಮಿನಿಯಾದಳು.

''ಅಗ್ನಿದೇವಾ, ಇವಳ ಶೀಲವನ್ನು ನಾನೇನು ಅರಿಯೆನೇ? ಆದರೆ ಲೋಕಪಾಲಕನಾದವನು ಲೋಕಾಪವಾದಕ್ಕೆ ಆಸ್ಪದ ಕೊಡಬಾರದು. ಅಗ್ನಿಸಾಕ್ಷಿಯಾಗಿ ಸೀತೆ ಶುದ್ಧಳಿರುವಳು ಎಂಬುದಕ್ಕೆ ಇಂದು ಲೋಕಮಾನ್ಯತೆ ದೊರಕಿತು. ಲೋಕನಾಯಕನಾದ ನನಗೆ ಲೋಕಮಾನ್ಯತೆಯೇ ಶಕ್ತಿ ಅಲ್ಲವೇ? ಒಂದು ವೇಳೆ ಅವಳ ಪರಿಶುದ್ಧತೆಯನ್ನು ಲೋಕ ಸಾಕ್ಷಿಯಾಗಿ ಪರೀಕ್ಷಿಸದೇ ಜಾನಕಿಯನ್ನು ನಾನು ಹಾಗೇ ಅಯೋಧ್ಯೆಗ ಕರೆದೊಯ್ದನಾದರೆ ನಾನೊಬ್ಬ ''ವಿಷಯಲುಬ್ಧನೆಂಬ'' ಲೋಕ ನಿಂದೆಗೆ ಪಾತ್ರನಾಗುತ್ತಿದ್ದ. ಇದರಿಂದ ಪ್ರಜೆಗಳ ಪ್ರೀತಿಯಿಂದ ಅಂತರಿಸಲ್ಪಡುತ್ತಿದ್ದೆ''

ಪ್ರಜೆಗಳನ್ನು ರಾಜಿಸುವವನೇ ರಾಜ, ನನ್ನ ರಾಜಧರ್ಮ ನನಗೆ ಇದನ್ನೇ ಹೇಳುತ್ತದೆ. ಪ್ರಜೆಗಳು ನನಗೆ ಈಶ್ವರನ ಕೋಟಿ ರೂಪಗಳು. ಅವರ ಸುಖಕ್ಕಾಗಿ ಪ್ರಸಂಗಬಿದ್ದರೆ ಪ್ರಾಣವನ್ನಾದರೂ ಕೊಡಬೇಕು ಎಂಬ ಶ್ರದ್ಧೆ ನಿತ್ಯ ನನ್ನಲ್ಲಿದೆ.

ಅಗ್ನಿ ಪ್ರವೇಶ ಮಾಡುವ ಮುಂಚೆ ವಿಯೋಗಿನಿ ಸೀತೆ ಅಳತೊಡಗಿದಾಗ ನನಗೂ ತುಂಬಾ ದುಃಖವಾಯಿತು. ಧೈರ್ಯ ಆವರಿಸಿದಂತಾಗಿತ್ತು. ಆದರೆ ದೇವಾ ನನ್ನೆದುರು ಸಮಸ್ತ ಸೈನ್ಯ ನಿಂತಾಗ ನಾನು ಕಂಬನಿ ಮಿಡಿಯುವುದು ಯೋಗ್ಯವಲ್ಲವೆಂದು ಆಗಿನ ಅಶ್ರುಗಳ ನದಿಯನ್ನು ನನ್ನ ರೆಪ್ಪೆಗಳಲ್ಲಿ ಗಟ್ಟಿಯಾಗಿ ಹಿಡಿದಿಟ್ಟುಕೊಂಡೆ ನಾನು. **ಅಗ್ನಿದೇವಾ, ಜಾನಕಿಯ ಹೃದಯದಲ್ಲಿ ರಾಮನೊಬ್ಬನೇ ಇರುವಂತೆ ರಾಘವನ ಮನದಲ್ಲಿ ಜಾನಕಿಯೊಬ್ಬಳೇ. ಅನ್ಯನಾರಿಯರಿಗೆ ಅಲ್ಲಿ ಪ್ರವೇಶವಿಲ್ಲ ಎಂದು ನಿನ್ನ ಪಾದ ಸಾಕ್ಷಿಯಾಗಿ ಹೇಳುವೆ.** ರಾವಣ ವಿಷಯ ಲೋಭಿ ಇದ್ದಾನೇನೋ ನಿಜ. ಆದರೆ ಸಮುದ್ರವು ಉಕ್ಕೇರಿದರೂ ಅದು ತನ್ನ ಸೀಮೆಯನ್ನು ಯಾವ ರೀತಿಯಾಗಿ ಉಲ್ಲಂಘಿಸಲಾರದೋ ಅದೇ ರೀತಿಯಾಗಿ ರಾವಣನಿಗೆ ಸೀತೆಯ ನೆರಳು ಕೂಡ ಸ್ಪರ್ಶಿಸಲು ಆಗಲಿಲ್ಲ.

ಅಗ್ನಿದೇವಾ ನಿನ್ನ ಆಜ್ಞೆ ಸರ್ವಥಾ ಮಾನ್ಯ ನನಗೆ. ಈ ದಿವ್ಯ ಗೃಹಸ್ವಾಮಿನಿಯೊಂದಿಗೆ ಈ ರಾಮನಿಂದು ಧನ್ಯ. ಅಯೋಧ್ಯೆಯ ಪ್ರಜೆಗಳಿಗೆ ಪುನಃ ಅವರ ಲೋಕ ಮಾತೆ ಅವರಿಗೆ ಲಭಿಸಿದಳು. ನನ್ನ ಅನಂತ ವಂದನೆಗಳು ನಿನಗೆ'' ಎಂದು ಶ್ರೀರಾಮನೆಂದಾಗ ಆತನನ್ನು ಆಶೀರ್ವದಿಸಿ ಅಗ್ನಿದೇವ ಪುನಃ ಅಗ್ನಿಯಲ್ಲಿ ಅಂತರ್ಧಾನನಾದ.

ಹೀಗೆ ಶ್ರೀರಾಮ ಜಾನಕಿಯನ್ನು ಮರಳಿ ಸ್ವೀಕರಿಸಿ ಜಾನಕೀ ಜೀವನ ರಾಮನಾದ. ಆಗ ಶ್ರೀರಾಮನ ಸೇನೆಯಲ್ಲಿ ಎಲ್ಲೆಲ್ಲಿಯೂ ಹರುಷವೇ ಹರುಷ. ಅನಂತರ ರಾಮನು ವಿಭೀಷಣನನ್ನು ಕುರಿತು ''ವಿಭೀಷಣಾ, ನನಗಾಗಿ ಹಂಗುದೊರೆದು ಹೋರಾಡಿದ

ಈ ವಾನರ ವೀರರಿಗೆಲ್ಲಾ ರತ್ನಾಭರಣಗಳನ್ನು ಇತ್ತು ಅವರನ್ನು ಸಂತುಷ್ಟಗೊಳಿಸು ಮತ್ತು ಇನ್ನು ಮುಂದೆ ನೀನೇ ಲಂಕಾಧಿಪತಿ. ಪ್ರಜೆಗಳನ್ನು ಸಂತೋಷದಲ್ಲಿರಿಸಿಕೊಂಡು ಸಾಮ್ರಾಜ್ಯ ಸುಖ ಭೋಗಿಸುತ್ತಾ ಹೋಗು'' ಎಂದು ಆಜ್ಞಾಪಿಸಿದ.

ಇಂದಿಗೆ ಸರಿಯಾಗಿ ಶ್ರೀರಾಮನ ವನವಾಸದ ಹದಿನಾಲ್ಕು ವರುಷಗಳು ಮುಗಿದವು. ಆತ ಭರತನ ಭೆಟ್ಟಿಗಾಗಿ ಆತುರನಾಗಿದ್ದ. ವಿಭೀಷಣನ ಪುಷ್ಪಕದ ವಿಮಾನವನ್ನೇರಿ ತ್ರಿಲೋಕ ವಿಜಯಿ, ಶ್ರೀರಾಮನು ಸೀತಾ ಲಕ್ಷ್ಮಣರೊಂದಿಗೆ ಅಯೋಧ್ಯೆಗೆ ಹೊರಟ. **ಪುಷ್ಪಕ ವಿಮಾನವು ಲಂಕೆಯಿಂದ ಅಂತರದಲ್ಲಿ ಹಾರಿತು. ಶ್ರೀರಾಮಸೇನೆ 'ಜಯ ಜಯ ರಘುವೀರ ಸಮರ್ಥ' ಎಂದು ಗರ್ಜನೆ ಮಾಡಿತು.**

ಪುಷ್ಪಕ ವಿಮಾನವು ಹಾರುತ್ತ ಹಾಗೇ ನಡೆದಾಗ ಬದಿಯಲ್ಲಿ ಕುಳಿತು ಸೀತಾದೇವಿಗೆ ಶ್ರೀರಾಮನು ಭೂಪ್ರದೇಶವನ್ನು ತೋರಿಸುತ್ತಾ ನಡೆದನು. ಮಧ್ಯ ತುಸು ವಿಶ್ರಾಂತಿಗೆಂದು ಭಾರದ್ವಾಜ ಋಷಿಗಳ ಆಶ್ರಮದಲ್ಲಿ ತಂಗಿ ಅವರು ಮುಂದೆ ಪ್ರಯಾಣ ಬೆಳೆಸಿದರು.

ಇತ್ತ ಅಯೋಧ್ಯ ನಗರದ ಹೊರಗೆ ತಾಪಸ ವೃತ್ತಿಯಿಂದ ಇದ್ದುಕೊಂಡು ಅಯೋಧ್ಯೆಯ ಸಾಮ್ರಾಜ್ಯವನ್ನು ನಡೆಸುತ್ತಿದ್ದ ಭರತನಿಗೆ ತಾವು ಬರಲಿರುವ ವೃತ್ತಾಂತವನ್ನು ಶ್ರೀರಾಮನು ಹನುಮಂತನ ಮುಖಾಂತರ ಮೊದಲೇ ತಿಳಿಸಿದ್ದ. ಆಗ ಭರತನಿಗಾದ ಆನಂದ ಗಗನದಲ್ಲಿ ಹಿಡಿಸದಾಯಿತು. ಶ್ರೀರಾಮನ ಸ್ವಾಗತದ ಸಿದ್ಧತೆ ನಡೆಯಿತು. ಶತ್ರುಘ್ನ ಅಯೋಧ್ಯಾ ನಗರವನ್ನು ಶೃಂಗರಿಸಿದ. ವಸ್ತ್ರಾಲಂಕಾರಗಳನ್ನು ಧರಿಸಿ ಸಡಗರದಿಂದ ಇಡೀ ಆಯೋಧ್ಯೆಯೇ ಶ್ರೀರಾಮನ ದರ್ಶನಕ್ಕೆ ಸೇರಿತು. **ಪುಷ್ಪಕ ವಿಮಾನ ಅಯೋಧ್ಯೆಯಲ್ಲಿ ಕೆಳಗಿಳಿದು ಸೀತಾ ಲಕ್ಷ್ಮಣ ಸಹ ಶ್ರೀರಾಮ ಜನತೆಯ ದೃಷ್ಟಿಗೆ ಬೀಳುವದೊಂದೇ ತಡ, ''ಸೀತಾವರ ಶ್ರೀರಾಮನಿಗೆ ಜಯವಾಗಲಿ ''ಎಂದು ಸಮಸ್ತ ಜನ ಆನಂದದಿಂದ ಗರ್ಜಿಸಿತು.**

# ಅಧ್ಯಾಯ -೫೨
## ''ರಾಮಾ ನಿನಗೆ ತ್ರಿವಾರ ಜಯ ಜಯ ಕಾರಗಳು''
## (ಅಯೋಧ್ಯಾವಾಸಿಗಳು)

ಭರತನು ಮುಂದೆ ಬಂದು ಶ್ರೀರಾಮನ ಚರಣಗಳ ಮೇಲೆ ಮಸ್ತಕವನ್ನಿಟ್ಟು ಹದಿನಾಲ್ಕು ವರುಷಗಳು ತಾನು ಪೂಜಿಸುತ್ತಾ ಬಂದಿದ್ದ ಆತನ ಪಾದುಕೆಗಳನ್ನು ಆತನ ಪಾದಕಮಲಗಳಿಗೆ ತೊಡಿಸದ. ಆನಂದಾಶ್ರುಗಳಿಂದ ತುಂಬಿದ ನೇತ್ರಗಳಿಂದ ಗದ್ಗದಿತನಾಗಿ ''ಅಣ್ಣಾ

ರಾಮಚಂದ್ರ, ಅಯೋಧ್ಯಾ ರಾಜ್ಯವನ್ನು ನಿನ್ನ ಆಜ್ಞೆಯಂತೆ ಈ ವರೆಗೂ ನಿನ್ನ ಪಾದುಕೆಗಳ ಸಾಕ್ಷಿಯಾಗಿ ನೋಡಿಕೊಂಡು ಬಂದಿರುವೆ. ನಿನ್ನ ರಾಜ್ಯವಿದು, ನೀನೀಗ ಮರಳಿ ಸ್ವೀಕರಿಸು'' ಎಂದು ಭಿನ್ನವಿಸಿದ.

ಶ್ರೀರಾಮನು ಭರತನನ್ನೂ ಬಿಗಿದಪ್ಪಿಕೊಂಡ. ಮಾತೆಯರಿಗೆ ಮೂವರೂ ನಮಸ್ಕರಿಸಿದರು. ಸರ್ವರ ಪುನರ್ಮಿಲನದ ಆನಂದ ಅವರ್ಣನೀಯ. ಸಹಸ್ರಾರು ಕಣ್ಣುಗಳು ಶ್ರೀರಾಮನನ್ನು ಬೆಳಗಿದವು. ಸಹಸ್ರಾರು ಕಂಠಗಳು ಅವನ ಜಯ ಜಯಕಾರ ಮಾಡಿದವು. ''ರಾಮಾ ನೀವು ಬಂದುದರಿಂದ ನಮ್ಮೆಲ್ಲರಿಗೂ ಸ್ವರ್ಗ ಸುಖ ಸಾಕಾರವಾದಂತಾಗಿದೆ'' ಎಂದು ಅಯೋಧ್ಯೆ ನಿವಾಸಿಗಳು ಹೇಳಹತ್ತಿದ್ದರು. ಅವರು ಮುಂದುವರಿದು,

''ಶ್ರೀರಾಮಚಂದ್ರಾ, ಪುಣ್ಯ ಸಲಿಲೆಯಾದ ಸರಯೂ ನಿಮಗೆ ದೀರ್ಘಾಯುಷ್ಯವನ್ನು ಚಿಂತಿಸುವಳು. ನಿಮ್ಮಗಳ ಪುನರಾಗಮನದಿಂದ ಪೃಥ್ವಿವಾಯುಗಳು ಪುಲಕಿತಗೊಂಡವು. ಅಹ್ಯಲೆಯ ಉದ್ಧಾರವಾದಂತೆ ನಿನ್ನಿಂದ ಇಂದು ನಗರದ ಉದ್ಧಾರವಾಯಿತು. ನಿನ್ನ ಆಗಮನದಿಂದ ಶಿವಧನುಷ್ಯದಂತಿದ್ದ ವಿರಹ ಮಾಯಾವಾಯಿತು. ಸ್ವಯಂವರದಂತೆ ಈ ಸಮಯ ಉತ್ಸಾಹದಿಂದ ತುಂಬಿತು. ಅಯೋಧ್ಯೆಗೆ ಮಂಗಲವಾಯಿತು. **ಪ್ರಭೋ, ನಾವಿನ್ನು ನಿನಗೆ ಏನು ಅರ್ಪಿಸೋಣ? ನಮ್ಮ ದೃಢವಾದ ಪ್ರೀತಿಯ ದ್ಯೋತಕವೆಂದು ನಮ್ಮಗಳ ಆನಂದಶ್ರುಗಳ ಹಾರವನ್ನೇ ನಿನಗೆ ಅರ್ಪಿಸುವೆವು. ಪ್ರಭೋ ನಿನ್ನ ಪಾವನ ದೃಷ್ಟಿಯ ಸ್ಪರ್ಶ ಮಾತ್ರದಿಂದ ನಮಗಿಂದು ಒಂದು ಉತ್ತಮವಾದಂತಾಯಿತು. ಅಷ್ಟೊಂದು ವರುಷಗಳ ವನವಾಸದ ಮಾತು ಮರೆತೆವು. ಇದೋ ನಿನ್ನ ಸಿಂಹಾಸನ ಸಿದ್ಧವಿದೆ, ಸ್ವೀಕರಿಸು ಅಲಂಕರಿಸು, ಸ್ವಾಮೀ.**

''ಪ್ರಭೋ ನಿನ್ನ ಯೋಗ್ಯತೆಯನ್ನು ಎಷ್ಟೆಂದು ವರ್ಣಿಸೋಣ? ರಾಜ್ಯಾಭಿಷೇಕ ನಿಮಿತ್ತ ನಿನ್ನ ಮಸ್ತಕದ ಮೇಲೆ ಜಲಸಿಂಚನ ಮಾಡಲು ಏಳು ನದಿಗಳಿಂದ ಜಲ ತಂದಾಗ ಆ ನದಿಗಳಿಗೆ ತೀರ್ಥತೆ ಪ್ರಾಪ್ತವಾಯಿತು. ನೀನು ರಾಜ್ಯಾಭಿಷಿಕ್ತನಾಗು. ಮುನಿಗಳ ಆಶೀರ್ವಚನಗಳ ಅರ್ಥಸಹಿತ ಉಚ್ಚಾರ ಇನ್ನೊಮ್ಮೆ ಆಗಲಿ'' ಎಂದು ನೆರೆದ ಜನಸ್ತೋಮ ಘೋಷಿಸಿತು! ತದನುಸಾರ ವಸಿಷ್ಠ, ಕಶ್ಯಪ, ಜಾಬಾಲಿ, ಭಾರಧ್ವಾಜ ಮೊದಲಾದ ಮುಖ್ಯ ಮುಖ್ಯ ಮುನಿಗಳೆಲ್ಲ ಸೇರಿ ಶ್ರೀರಾಮ ಸೀತೆಯಿಂದ ರಾಜ್ಯಾಭಿಷೇಕವನ್ನು ವಿಧ್ಯುಕ್ತವಾಗಿ ನೆರವೇರಿಸಿದರು. ''ಜಾನಕಿ ಜೀವನ ಸ್ಮರಣ ಜಯ

ಜಯ ರಾಮ''ನೆರೆದ ಜನಸ್ತೋಮ ಜಯ ಜಯಕಾರ ಮಾಡಿತು. ನಂತರ ಸೇರಿದ ಪುರ ಪ್ರಮುಖರು ಮುಂದೆ ಬಂದು ''ಶ್ರೀರಾಮ ಪ್ರಭೋ, ದಶರಥ ಮಹಾರಾಜರಿಗೆ ನಿನ್ನನ್ನು ಸಿಂಹಾಸನ ಸ್ಥಾನವನ್ನು ಮಾಡಬೇಕೆಂಬ ಇಚ್ಛೆ ಇತ್ತು. ಆದರೆ ನಡೆದಿರುವ ರಾಜ್ಯಾಭಿಷೇಕದ ಈ ಮಹೋತ್ಸವವನ್ನು ಪ್ರತ್ಯಕ್ಷ ನೋಡಲು ಅವರು ಉಪಸ್ಥಿತರಿಲ್ಲವೆಂಬುದು ನಮ್ಮೆಲ್ಲರಿಗೂ ಅಸಮಾಧಾನ. ಆದರೆ ಸ್ವರ್ಗದಿಂದ ಆ ಮಹಾರಾಜರು ಇದನ್ನು ಅಲ್ಲಿಂದಲೇ ವೀಕ್ಷಿಸಿ ಸಂತೋಷಪಟ್ಟು ನಿಮ್ಮನ್ನು ಆಶೀರ್ವದಿಸುವರೆಂಬುದರಲ್ಲಿ ಸಂದೇಹವಿಲ್ಲ. ಮಹಾರಾಜರ ಇಚ್ಛೆ ಪೂರ್ಣವಾಗಿ ಇಂದು ಅಯೋಧ್ಯೆಯಲ್ಲಿ ರಾಮರಾಜ್ಯ ಬರಲಿ. ಈ ಸಂಭ್ರಮವನ್ನು ಕೌಸಲ್ಯ ಮಾತೆಯ ಕಣ್ಣುಗಳು ಕಾಣಿಸುವಂತಾಗಲಿ. ಪರಂಪರೆಯಿಂದ ಬಂದ ಈ ರಾಜ್ಯವನ್ನು ನಿನ್ನ ಆಜ್ಞೆಯೊಂದಿಗೆ ಇನ್ನು ಅಖಂಡವಾಗಿ ಭೋಗಿಸುವಂತಾಗಲಿ. ಪ್ರಭುವೇ, ಅಯೋಧ್ಯೆ ಪ್ರಜೆಗಳಾದ ನಾವೆಲ್ಲರೂ ಯಾವುದನ್ನು ಸ್ವಪ್ನದಲ್ಲಿ ರಚಿಸಿಕೊಂಡಿದ್ದೇವೋ ಅದನ್ನೇ ಇಂದು ಪ್ರತ್ಯಕ್ಷವಾಗಿ ನೋಡುತ್ತಿರುವೆವು. ರಾಜಾ ರಾಘವ ಸೀತಾ ರಾಜ್ಞೀ. ನಾಲ್ಕು ವೇದಗಳಂತೆ ಇರುವ ರಘುಕುಲ ದೀಪಕರನ್ನು ಲೋಕ ಪೂಜಿಸುತ್ತದೆ.

**ಭೂಮಿಯ ಮೇಲೆ ರಾಮರಾಜ್ಯ ಬಂದ ಮೇಲೆ ಚಂದ್ರನೊಬ್ಬನಿಗೆ ಕಲಂಕ ಹೊರತು ಇನ್ನುಳಿದವರೆಲ್ಲ ನಿಷ್ಕಲಂಕರು. ವಿಚಾರದಲ್ಲಿ ಇದ್ದ ಸತ್ಯ ಇನ್ನು ಆಚರಣೆಯಲ್ಲಿ ಬರುವುದು. ರಾಮರಾಜ್ಯದ ಸುಖವನ್ನು ನಾವೆಂತು ವರ್ಣಿಸೋಣ! ರಾಮರಾಜ್ಯದಲ್ಲಿ ಸಕಾಲಕ್ಕೆ ಮೇಘರಾಜ ಮಳೆಗರೆಯುವನು, ಧರೆ ನಿತ್ಯ ಸಸ್ಯಶಾಲಿಯಾಗಿ ಶೋಭಿಸುವಳು. ಜನರು ಸ್ವಧರ್ಮರತರಾಗಿ ಸೇವಾಭಾವನೆಯಿಂದ ಕಾರ್ಯ ಮಾಡುವರು. ಮುನಿಗಳು ಶಾಂತಿಃ ಶಾಂತಿಃ ಶಾಂತಿಃ ಅನ್ನುತ್ತಾ ವಾಂಛಿತ ಪುನಃ ಶಾಂತಿಯನ್ನು ಅನುಭವಿಸುವರು.**

## ಅಧ್ಯಾಯ - ೫೩
## ''ಪ್ರಭೋ ನನಗೆ ಒಂದು ವರ ಕೊಡು'' (ಹನುಮಾನ)

ಈ ರೀತಿಯಾಗಿ ಪ್ರಜಾಜನರ ಜಯ ಜಯಕಾರ ಮಾಡುತ್ತ ಶ್ರೀರಾಮ ಸೀತೆಯರನ್ನು ಅರಮನೆಗೆ ಕರೆತಂದರು. ಯೋಗ್ಯವಾದ ಪ್ರಶಸ್ತವಾದ ಮುಹೂರ್ತವನ್ನು ನೋಡಿ ವಶಿಷ್ಠ, ವಿಶ್ವಾಮಿತ್ರ, ಜಾಬಾಲಿ ಮೊದಲಾದ ಋಷಿಮುನಿಗಳೆಲ್ಲರೂ ಸೇರಿ

ವೇದೋಕ್ತ ಮಂತ್ರಗಳೊಂದಿಗೆ ವಿಧಾನೋಕ್ತವಾಗಿ ರಾಜ್ಯಾಭಿಷೇಕ ನೆರವೇರಿಸಿ ಆಶೀರ್ವಾದ ಮಾಡಿದರು. ಸಪ್ತ ನದಿಗಳಿಂದ ತಂದ ಜಲದಿಂದ ಶ್ರೀರಾಮಸೀತೆಯರಿಗೆ ಸಿಂಚನ ಮಾಡಿದರು. **''ಜಾನಕೀ ಜೀವನ ಸ್ಮರಣ ಜಯ ಜಯರಾಮ'' ಎಂದು ಜನಸ್ತೋಮ ಜಯ ಜಯಕಾರ ಮಾಡಿತು. ರಾಮರಾಜ್ಯದ ಶುಭಾರಂಭವಾಯಿತು.** ರಾಜ್ಯಾಭಿಷೇಕ ಮಹೋತ್ಸವಕ್ಕೆ ಆಗಮಿಸಿದ ಋಷಿಮುನಿಗಳ ಯೋಗ್ಯಸನ್ಮಾನ ನಡೆಯಿತು. ಸಮಾರಂಭಕ್ಕೆ ಉಪಸ್ಥಿತರಿದ್ದ ರಾಜರುಗಳಿಗೆ, ಆಪ್ತಬಂಧುಗಳಿಗೆಲ್ಲ ವಸ್ತ್ರಭೂಷಣಗಳನ್ನಿತ್ತು ಶ್ರೀರಾಮಚಂದ್ರ ಅವರೆಲ್ಲರನ್ನು ಬೀಳ್ಕೊಟ್ಟ. ಅನಂತರ ಚಿ ಕಿಷ್ಕಿಂಧಾಪತಿ ಸುಗ್ರೀವನಿಗೆ ಮತ್ತು ಅಂಗದ ಮೊದಲಾದ ವೀರರಿಗೆ ಯಥೋಚಿತವಾದ ಸನ್ಮಾನ ನಡೆಯಿತು. ಶ್ರೀರಾಮಚಂದ್ರ ಅವರೆಲ್ಲರಿಗೂ ಭಾರೀ ಬೆಲೆಯ ಆಭರಣಗಳನ್ನು ಅರ್ಪಿಸಿದ. ಸುಗ್ರೀವನನ್ನಂತೂ ಆತ ತನ್ನ ಐದನೆಯ ಬಂಧುವೆಂದೇ ತಿಳಿದ. ಒಂದೆರಡು ತಿಂಗಳ ಕಾಲ ಕಳೆದ ಮೇಲೆ ಶ್ರೀರಾಮನು ಸುಗ್ರೀವನಿಗೆ ಕಿಷ್ಕಿಂಧೆಗೆ ಮರಳಲು ಆಜ್ಞಾಪಿಸಿದ. ಲಂಕಾಪತಿ ವಿಭೀಷಣನಿಗೆ ಅಸಂಖ್ಯ ಭೂಷಣಗಳನ್ನು ಕೊಡಮಾಡಿ ಲಂಕೆಗೆ ಹೊರಡಲು ಅಪ್ಪಣೆ ಕೊಟ್ಟ. **ಈ ರೀತಿಯಾಗಿ ನಿರೋಪ ಸಮಾರಂಭ ನಡೆದಾಗ ಮಧ್ಯದಲ್ಲಿಯೇ ಹನುಮಾನ ಮುಂದೆ ಬಂದು ಶ್ರೀರಾಮನ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಅತ್ಯಂತ ಭಾವಸ್ನಿಗ್ಧ ಸ್ವರದಲ್ಲಿ ''ಪ್ರಭೋ ನನಗೆ ನಿನ್ನ ವಸ್ತ್ರಭೂಷಣ ಬೇಡ. ಸನ್ಮಾನ ಬೇಡ ನನಗೆ. ನಿನ್ನ ಚರಣ ಕಮಲಗಳಲ್ಲಿ ನಿನ್ನ ನಿಶ್ಚಲ ಭಾವವಿರುವಂತೆ ಒಂದು ವರವನ್ನಿತ್ತು ಕರುಣಿಸು ಇಷ್ಟೇ ನಿನ್ನಲ್ಲಿ ಬೇಡಿಕೊಳ್ಳುವೆ.''**

**''ಶ್ರೀರಾಮ ಪ್ರಭುವೇ, ಈ ಮನಸ್ಸು ಬಹು ಚಂಚಲ. ಆದುದರಿಂದ ಅದು ನಿನ್ನ ಚರಣವನ್ನುಳಿದು ಬೇರೆ ಕಡೆಗೆ ಅಲೆಯದಂತೆ ಕರುಣಿಸು.** ಈ ಭೂಮಿಯ ಮೇಲೆ ಶ್ರೀರಾಮ ಕಥಾನಕವು ಇರುವವರೆಗೆ ನಾನು ಜನ್ಮದಿಂದ ಇರುವಂತೆ ಅನುಗ್ರಹಿಸು. ದೇವಾ, ಸತತ ನನ್ನ ಮುಖದಿಂದ ಶ್ರೀರಾಮಕಥೆ ಉಚ್ಚಾರವಾಗುವಂತೆ ಮಾಡು ನನ್ನ ಕಿವಿಗಳು ನಿತ್ಯ ಅದನ್ನೇ ಕೇಳುವಂತಾಗಲಿ, **ಶ್ರೀರಾಮನನ್ನು ಉಳಿದು ಇನ್ನಾವುದರ ಹವ್ಯಾಸವೂ ನನಗಾಗದಿರಲಿ.''**

ರಘುವೀರಾ, ಪಾವನನಾದ ನಿನ್ನ ಚರಿತ್ರವನ್ನು ದೇವ ಅಪ್ಸರೆಯರು ನನಗೆ ಹೇಳಲಿ. ನಿನ್ನ ಕಥೆ ಕೇಳಲು ಈ ದೀನನಿಗೆ ಅಮರತೆಯನ್ನು ಕೊಡು. ನಾನು ಇರುವಲ್ಲಿಂದಲೇ ಶ್ರೀರಾಮಯಣವನ್ನು ಮೇಘರಾಜನಂತೆ ಅಖಂಡ ಪ್ರಾಶನ ಮಾಡುವೆ ಮತ್ತು ಅವನಂತೆಯೇ ಶ್ರೀರಾಮಾಯಣದ ಶತಧಾರೆಯ ವೃಷ್ಟಿಯನ್ನು ಮಾಡುವೆ. ಪ್ರಭೋ ಈ ರೀತಿಯಾಗಿ ನಾನು ನಿತ್ಯ ರಾಮಕಥೆಯ ಚಿಂತನ ಮತ್ತು ಗಾಯನಗಳಲ್ಲಿ

ಇರುವಾಗ **ನಾನು ಇಚ್ಛಿಸಿದಾಗ ಈ ದೀನನಿಗೆ ರಘುಕುಲ ದೀಪಕ ಶ್ರೀರಾಮನ ಅಮೂರ್ತ ದರ್ಶನ ಲಭಿಸಲಿ.**

**"ಜಗತ್ತು ಇರುವವರೆಗೆ ಭಾಷೆ ಇರುವವರೆಗೆ ಶ್ರೀರಾಮಾಯಣವು ನಿತ್ಯನೂತನವಾಗಲಿ, ಸಪ್ತಸ್ವರಗಳಿಂದ ಶ್ರೀರಾಮ ಕಥೆ ಆಸ್ವಾದ ಮಾಡಲು ಬರುವಂತೆ ನನಗೆ ವರಕೊಡು. ಜಗತ್ತಿನ ಮೇಲೆ ಅಸಂಖ್ಯ ಭಾಷೆಗಳಿವೆ. ಅವರೆಲ್ಲರೂ ಶ್ರೀರಾಮನ ಚರಿತೆಯ ಗೌರವವನ್ನು ಸಾರಬೇಕೆಂದು ನನ್ನದೊಂದೇ ಈ ಅಪೇಕ್ಷೆ.** ನಾನು ಅತಿ ಸೂಕ್ಷ್ಮವಾದ ನನ್ನ ದೇಹದೊಂದಿಗೆ ಅವನಿ ಗಗನಗಳನ್ನೆಲ್ಲಾ ನಿತ್ಯ ಸಂಚರಿಸುತ್ತಲೇ ಇರುವೆ. ನಾನು ಎಲ್ಲಿ ಹೋದಲ್ಲಿ ಸ್ಥಳ ಸ್ಥಳಗಳಲ್ಲಿ ಶ್ರೀರಾಮಕಥೆಯ ಲಾಭವಾಗುವಂತೆ ಕರುಣಿಸು. ಪ್ರಭೋ ಇಷ್ಟೇ ನನ್ನ ಬೇಡಿಕೆ" ಎಂದು ಹನುಮಾನ ಪುನಃ ಶ್ರೀರಾಮಚಂದ್ರನಿಗೆ ನಮಸ್ಕರಿಸಿ ನಿಂತ.

## ಅಧ್ಯಾಯ - ೫೪

## "ರಘುಕುಲ ತಿಲಕಾ ನನ್ನ ಬಯಕೆ ಪೂರೈಸು" (ಸೀತಾದೇವಿ)

ಹನುಮಾನನ ಈ ಬಗೆಯ ಏಕನಿಷ್ಠೆ ಭಕ್ತಿಯನ್ನು ಗುರುತಿಸಿದ ಶ್ರೀರಾಮ ಅವನ ಇಚ್ಛೆಯಂತೆ "ತಥಾಸ್ತು"ಎಂದು ವರವಿತ್ತು ಅವನನ್ನು ಆಶೀರ್ವದಿಸಿದ. ಇದರಿಂದ "ರಾಮಕಥೆ "ಮತ್ತು "ಹನುಮಾನ" ಇಬ್ಬರೂ ಚಿರಂಜೀವಿಗಳಾದರು. ಆದರ ಶ್ರೀರಾಮನ ಲೀಲಾಚರಿತ್ರಕ್ಕೆ ಇನ್ನೂ ಸಮಾಪ್ತಿ ಎಲ್ಲಿ ಆಗಿತ್ತು?

**ಶ್ರೀರಾಮನು ರಾಜ್ಯವನ್ನಾಳಲು ಪ್ರಾರಂಭಿಸಿದ ಮೇಲೆ ಪೃಥ್ವಿಯ ಮೇಲೆ ಸ್ವರ್ಗವೇ ಇಳಿದು ಬಂದಂತಾಗಿತ್ತು. ಎಲ್ಲರಿಗೂ ಅವರವರ ಇಚ್ಛಾನುಸಾರ ಸೌಖ್ಯ ದೊರೆಯಿತು.** ಎಲ್ಲೆಲ್ಲಿಯೂ ಪ್ರಥ್ವಿಯ ಮೇಲೆ ಆನಂದವೇ ಆನಂದ. ಹೊರತು ಬೇರೇನೂ ಉಳಿಯಲಿಲ್ಲ.

ದೇವ ಕನ್ನಿಕೆಯಂತಿದ್ದ ಜಾನಕಿಗೆ ತುಂಬಾ ಸೌಖ್ಯವನ್ನಿತ್ತು ಶ್ರೀರಾಮನು ಗ್ರಹಸ್ಥಾಶ್ರಮದ ಸುಖ ಭೋಗಿಸಹತ್ತಿದ. ಒಮ್ಮೆ ಅವರಿಬ್ಬರೂ ಅಶೋಕ ವನದಲ್ಲಿ ವನದ ಸೌಂದರ್ಯವನ್ನು ನೆನೆಯುತ್ತ, ಪ್ರೇಮದಿಂದ ಮಾತಾಡುತ್ತ ಕುಳಿತ್ತಿದ್ದರು. ಶ್ರೀರಾಮನ ಈ ಅಶೋಕವನವನ್ನು ಕುಬೇರನ ಚೈತ್ರರಥ ವನದಂತೆ ಒಳ್ಳೇ ನಿಸರ್ಗ ಸಂಪನ್ನವಾಗಿತ್ತು. ಜಾನಕಿಯ ಗೌರವರ್ಣದ ಕಾಂತಿಯನ್ನು ಮತ್ತು ಅವಳ ದೇಹಲತೆಯನ್ನು ಕಂಡು, ಶ್ರೀರಾಮನು ನಗುತ್ತಲೇ, "ಜಾನಕಿ ಏನಾಗಿದೆ ನಿನಗೆ? ಹೀಗೇಕೆ ಮೆತ್ತಗೆ ಆಗಿರುವಿ? ನಿನಗೇನಾದರೂ ಬೇಕು ಎಂದು ಅನಿಸುತ್ತಿದೆಯೆ? ಎಂದು ವಿಚಾರಿಸಿದ. ಬುದ್ಧಿವಂತಳಾದ

ಜಾನಕಿಗೆ ಪತಿಯ ಪ್ರಶ್ನೆಯು ಅರ್ಥವಾಯಿತು. ಆಗ ಅವಳು ಮಂದಹಾಸ್ಯದೊಂದಿಗೆ ಶ್ರೀರಾಮನಿಗೆ ಹೇಳಹತ್ತಿದಳು.

''ನಾಥಾ ನಿನ್ನೊಡನೇ ಮಾತಾನಾಡಬೇಕೆಂದು ತುಂಬಾ ಆಶೆ ಏನೋ ನನಗೆ. ಆದರೆ ನುಡಿಗಳು ತುಟಿಗಳವರೆಗೂ ಬಂದು ನಾಚಿ ಅಲ್ಲಿಯೇ ನಿಲ್ಲುವುವು. ಹೇಗೆ ಮಾಡಲಿ? ಹೇಗೆ ಹೇಳಲಿ? ಹೇಳಲಾ ರಾಜಾ ಹಾಗದರೆ?'' ಎಂದು ಜಾನಕಿ ನಿಂತಾಗ ಶ್ರೀರಾಮ ''ಹೇಳು ಪ್ರಿಯೇ ಅಷ್ಟೇಕೆ ನಾಚಿಕೆ ನಿನಗೆ ?''ಎಂದು ಅವಳನ್ನು ಅಪ್ಪಿಕೊಂಡ. ಆಗ ಜಾನಕಿಯು ''ನಾನು ಗರ್ಭಿಣಿ ಈಗ ಪ್ರಿಯಾ, ಬಯಕೆ ನನಗೆ, ನನ್ನಮನದ ಬಯಕೆಯನ್ನು ಪೂರ್ಣ ಮಾಡುವಿಯಾ?'' ಎಂದು ಹೇಳಲಾರದೇ ನಾಚುತ್ತ ಮೆಲ್ಲನೆ ಉಸುರಿದಳು. ''ಹೌದೇ ಪ್ರಿಯೇ, ಹಾಗದರೆ ಏನು ನಿನ್ನಾ ಬಯಕೆಗಳವು?'' ಎಂದು ಶ್ರೀರಾಮ ಹಸನ್ಮುಖಿಯಾಗಿ ಕೇಳಿದಾಗ ಜಾನಕಿ ಹೇಳುತ್ತಾಳೆ.

''ವನದಲ್ಲಿಯೇ ಝರಿಗಳಲ್ಲಿ ಮಿಂದು ಒದ್ದೆ ಬಟ್ಟೆಗಳೊಂದಿಗೆ ನಡದ ಮೆಲೊಂದು ಕೊಡ, ಕೈಯಲ್ಲಿ ನೀರಿನ ಝರಿ, ಅಲ್ಲದೇ ತಲೆಯ ಮೇಲೆ ಮತ್ತೊಂದು ಕೊಡವನ್ನು ಹೊತ್ತುಕೊಂಡು ಬರುತ್ತಿರಬೇಕು ಎಂದು ಅನಿಸುತ್ತದೆ.'' ಸೀತೆಯ ಈ ನುಡಿಗಳಿಗೆ ಶ್ರೀ ರಾಮ ನಕ್ಕು ''ಮುಂದೆ?'' ಎಂದ. ''ಕೇಳು ನಾಥಾ, ವನದಲ್ಲಿಯೇ ಕಂದಮೂಲಗಳನ್ನು ಅಗಿದು ತಂದು ಮೆಲ್ಲಗೆ ಸಹಜವಾಗಿ ಅವುಗಳನ್ನು ಸುಲಿದು ಅಮೃತಾನ್ನದಂತಿದ್ದ ಅವುಗಳನ್ನು ಸವಿಯಬೇಕು ಎನ್ನುವೆ. ಸಂಧ್ಯಾಕಾಲದಲ್ಲಿ ಮಾವಿನ ಮರದ ಕೆಳಗೆ ಕುಳಿತರೆ ಸುಗಂಧವಾದ ಮಂಜರಿ ಮರದಿಂದ ತಾನೇ ಉದುರಿ ಹಣೆಗೆ ತಾಗುವದು. ವನರಾಜನ ಗರ್ಜನ ದೂರದಲ್ಲಿ ಕೇಳಿ ಬರುವುದು.

ರಘುವರಾ, ನೀನು ಬಿಲ್ಲು ಕೈಯಲ್ಲಿ ಹಿಡಿದುಕೊಂಡು ಬಾಣಗಳ ಬತ್ತಳಿಕೆ, ಬೆನ್ನಿಗೆ ಕಟ್ಟಿಕೊಂಡು ನನ್ನ ಜೊತೆಗೆ ಬರಬೇಕು. ನಾವಿಬ್ಬರೂ ಕೂಡಿ ಮೃಗದ ಬೇಟೆಯಾನ್ನಡುತ್ತಾ ವನವನ್ನೆಲ್ಲಾ ಸುತ್ತಾಡಬೇಕೆಂದು ನನ್ನ ಇಚ್ಛೆ . ಪ್ರಭಾತದಲ್ಲಿ ಪಂಡಿತರ ಜೊತೆಗೆ ಕುಳಿತುಕೊಂಡು ವೇದಾಂತದ ಚರ್ಚೆ ಮಾಡಬೇಕೆಂದೆನಿಸುತ್ತದೆ. ಆದರಿಂದ ನಮ್ಮ ಮುಖದ ಮೇಲೆ ಪಾವಕ ತೇಜ ಬರಬೇಕೆಂದು ನನ್ನ ಬಯಕೆ'' ಎಂದಳು ಸೀತಾದೇವಿ. ಆಗ ಶ್ರೀರಾಮ ನಗಲಾರಂಭಿಸಿದ. ಇದನ್ನು ಕಂಡ ಜಾನಕಿ ''ದೇವಾ, ಈ ಹುಚ್ಚಿಯನ್ನು ಕಂಡು ನಗುವಿರೇಕೆ? ಇಷ್ಟಾದರೂ ನನ್ನ ಬಯಕೆ ಪೂರೈಸು ನಾಥಾ. ಈ ವೇಳೆಯಲ್ಲಿ ಹೀಗೆ ವಿನೋದ ಮಾಡುವದು ಶೋಭಿಸುವುದೇ? ನಾಥಾ ನೀನೇ ಹೇಳು''ಎಂದು ಶ್ರೀರಾಮನನ್ನು ಜಾನಕಿ ಬಿಗಿದಪ್ಪಿಕೊಂಡಳು.

ಈ ರೀತಿಯಾಗಿ ಸೀತಾದೇವಿ ತನ್ನ ಬಯಕೆಗಳನ್ನೆಲ್ಲಾ ಶ್ರೀರಾಮನಿಗೆ ಅರುಹಿದಳು. ಆತನಾದರೂ ಅವಳ ಇಚ್ಛೆಯನ್ನು ಆದರಿಸಿದ, ಮತ್ತು ನಗುತ್ತಲೇ ''ಪ್ರಿಯೇ ಜಾನಕೀ, ಇಷ್ಟೇ ಅಲ್ಲವೇ ನಿನ್ನ ಬಯಕೆಗಳು? ಇವುಗಳನ್ನು ಅತಿ ಶೀಘ್ರದಲ್ಲಿಯೇ ಪೂರೈಸುವೆ. ತಿಳಿಯಿತೇ'' ಎಂದು ಅವಳಿಗೆ ಸಮಾಧಾನ ಹೇಳಿದ.

ಪತಿ ಪತ್ನಿಯರ ಮಧ್ಯ ಮಧುರವಾದ ಮನೋಹರವಾದ ಈ ಸಂವಾದವು ಆದ ಮರುದಿನವೇ ಭದ್ರನೆಂಬ ಒಬ್ಬ ಗುಪ್ತಚಾರ ಬಂದು ''ಪ್ರಭೋ ಒಂದು ವಿಷಯ ತಮ್ಮ ಮುಂದೆ ಅನಿವಾರ್ಯವಾಗಿ ನಿವೇದಿಸಬೇಕಾಗಿ ಬಂದುದಕ್ಕೆ ವಿಷಾದಿಸುವೆ. ಅದೇನೆಂದರೆ, ರಾಜನ ಸೇತುಬಂಧನ ಮತ್ತು ರಾವಣವಧೆ ಇವೆರಡು ದೈವೀಕೃತ್ಯಗಳ ಬಗ್ಗೆ ಪ್ರಜೆಗಳೆಲ್ಲ ತಮಗೆ ಧನ್ಯವಾದಗಳನ್ನು ಕೊಡುತ್ತಿದ್ದಾರೆ. ಆದರೆ...'' ಎಂದು ಗುಪ್ತಚಾರ ಮುಂದೆ ವಿಷಯ ವಿಸ್ತರಿಸಲು ಹಿಂಜರಿದನು. ಆಗ ಶ್ರೀರಾಮನು ''ಗುಪ್ತಚಾರಾ ಮುಂದೇನು? ಸತ್ಯವಾದುದನ್ನು ನಿರ್ಭಯದಿಂದ ಹೇಳು'' ಎಂದು ಶ್ರೀರಾಮನಿಂದ ಅನುಜ್ಞೆ ದೊರೆತ ಕೂಡಲೇ ಗುಪ್ತಚಾರ ಮುಂದೆ ಹೇಳಲು ಪ್ರಾರಂಭಿಸಿದನು. ''ಆದರೆ ಪ್ರಭುಗಳೇ ಪ್ರಜೆಗಳಿಗೆ ಒಂದು ವಿಷಯ ಮಾತ್ರ ತಿಳಿಯದಂತಾಗಿದೆ'' ಎಂದಾಗ ಶ್ರೀರಾಮನು ''ಗುಪ್ತಚಾರಾ ಎಷ್ಟು ಸಂಕೋಚ ಮಾಡಿಕೊಳ್ಳಬೇಡ , ವಿಷಯವಿದ್ದುದನ್ನು ಇದ್ದಂತೆ ನನ್ನ ಮುಂದೆ ಇಡು'' ಎಂದ. ಆಗ ಗುಪ್ತಚಾರನು ಹೇಳಲು ಪ್ರಾರಂಭಿಸಿದನು.

''ಪ್ರಭೋ, ಪ್ರಜೆಗಳಿಗೆ ತಿಳಿಯದಂತಾದ ವಿಷಯವೆಂದರೆ - ರಾವಣ ಕಾಮಾಂಧನಾತ. ಅವನ ಮನೆಯಲ್ಲಿ ಉಳಿದ ಸೀತಾದೇವಿಯನ್ನು ಶ್ರೀರಾಮಚಂದ್ರ ಪುನಃ ಪತ್ನಿ ಎಂದು ಹೇಗೆ ಮನ್ನಿಸಿದ ? ಅವಳ ಜೊತೆಯಲ್ಲಿ ಪ್ರಣಯದಿಂದ ಅದೆಂತಹ ಆನಂದ ಆತನಿಗೆ?'' ಎಂದು ನುಡಿದ ಗುಪ್ತಚಾರ ಮಾತು ನಿಲ್ಲಿಸಿದನು.

ಲೋಕಪಾಲ ಶ್ರೀರಾಮಚಂದ್ರನ ಮನ ಪುನಃ ವಿಷಣ್ಣವಾಯಿತು. ತುಂಬಾ ಗಂಭೀರನಾಗಿ ಹೇಳಹತ್ತಿದ. ''ಬಂಧುಗಳೇ, ರಾಮನಿಗೆ ಸೀತೆ ಬೇಕು. ರಾಜ್ಯಕ್ಕೆ ಸೀತೆ ಬೇಡ. ರಾಜ್ಯಕ್ಕೆ ಬೇಡಾದ ಸೀತೆ, ರಾಮನಿಗೆ ಬೇಕು ಎಂಬುದು, ಮೋಹವಲ್ಲವೇ? ಸೀತೆ ರಾಮನ ಗೃಹ ಲಕ್ಷ್ಮಿ, ರಾಜಲಕ್ಷ್ಮಿಯ ಮಾನಕ್ಕಾಗಿ, ಗೃಹ ಲಕ್ಷ್ಮಿಯ ತ್ಯಾಗ ಅನಿವಾರ್ಯ. ನಾನು ಪ್ರಜಾಭಿಪ್ರಾಯದ ಬಂದಿ. ಜನತೆಗೆ ನಾನು ಜೀವಿಸಿರುವದು ಬೇಡಾಗಿದ್ದರೆ, ನಾನು ಅದನ್ನು ಕೂಡ ತ್ಯಾಗ ಮಾಡುತ್ತೇನೆ. ಜನತೆ ನಿಮ್ಮ ವಿಯೋಗವನ್ನು ಬಯಸಿದ್ದರೆ, ನನ್ನ ಪ್ರಾಣಕ್ಕಿಂತ ಪ್ರಿಯಳಾದ ನಿಮ್ಮನ್ನು ಕೂಡ, ಜನತೆಗಾಗಿ ನಾನು ತ್ಯಜಿಸುತ್ತೇನೆ. ಜನತೆಯ ಇಚ್ಛೆಗೆ

ವಿರೋಧವಾಗಿ, ರಾಮನಿಂದ ಏನನ್ನೂ ಮಾಡಲಾಗುವದಿಲ್ಲ. **ಜನತೆಯ ಇಚ್ಛೆಗೆ ವಿರೋಧವಾಗಿ ನಡೆಯುವ ರಾಜನು, ಜನತೆಯ ಶತ್ರು.** ಇಂಥಹ ರಾಜನ ಕುಲ ನಷ್ಟವಾಗುತ್ತದೆ. ಅವನು ನರಕಕ್ಕೆ ಹೋಗುತ್ತಾನೆಂದು ಶಾಸ್ತ್ರಗಳು ಹೇಳುತ್ತವೆ'' ಎಂದು ಹೇಳಿ, ಆತ, ತತ್‌ಕ್ಷಣ ಲಕ್ಷ್ಮಣನನ್ನು ಬರಮಾಡಿಕೊಂಡು, ತನ್ನ ಪ್ರಾಣದ ಶಪತವನ್ನಿಟ್ಟು, ಆತನಿಗೆ ಆದೇಶವನ್ನಿತ್ತ. ''ಲಕ್ಷ್ಮಣಾ, ಸತ್ವರವಾಗಿ ರಥವನ್ನು ಸಿದ್ಧಪಡಿಸಿಕೊಂಡು ಜಾನಕಿಯನ್ನು ಕರೆದೊಯ್ದು ವಾಲ್ಮೀಕಿ ಮಹರ್ಷಿಗಳ ಆಶ್ರಮದ ಹತ್ತಿರ ಬಿಟ್ಟು ಬಾ'' ಎಂದ. ಶ್ರೀರಾಮಚಂದ್ರನ ಶಪಥವನ್ನು ಲಕ್ಷ್ಮಣಾದಿ ಯಾವ ತಮ್ಮಂದಿರೂ ಪ್ರಶ್ನಿಸಲು ಸಮರ್ಥರಾಗಲಿಲ್ಲ. ಅಣ್ಣನ ಆಜ್ಞೆಯಂತೆ ಲಕ್ಷ್ಮಣ ರಥ ಸಿದ್ಧಪಡಿಸಿಕೊಂಡು ಜಾನಕಿಯನ್ನು ಕುಳ್ಳಿರಿಸಿಕೊಂಡು ವನ ಪ್ರವೇಶಿಸಿದ. **ಪಾಪ, ಸೀತಾದೇವಿ ಏನು ಬಲ್ಲಳು ಶಪಥದ ವಿಷಯ? ''ನನ್ನ ಬಯಕೆಗಳನ್ನು ಪೂರ್ಣಮಾಡಲು ರಾಘವ ಅದೆಷ್ಟು ಶೀಘ್ರದಲ್ಲಿ ಅಣಿ ಮಾಡಿದನು! ಅದೆಷ್ಟು ಪ್ರೇಮ ರಾಘವನದು ನನ್ನ ಮೇಲೆ!''ಎಂದುಕೊಂಡು ಉಲ್ಲಾಸದಿಂದಲೇ ಇದ್ದಳು.** ವಾಲ್ಮೀಕಿ ಋಷಿಗಳ ಆಶ್ರಮ ಬಂದಿತು. ಸೀತಾದೇವಿ ರಥದಿಂದ ಇಳಿದಳು. ಲಕ್ಷ್ಮಣನಿಗೆ ತನ್ನ ಅತ್ತಿಗೆಗೆ ನಿಜ ವಿಷಯ ತಿಳಿಸುವುದು ತುಂಬಾ ಅಸಹ್ಯವೆನಿಸಿತಾದರೂ, ಅನಿವಾರ್ಯವಾಗಿ, ಗದ್ಗದಿತನಾಗಿ, ಸೀತಾದೇವಿಗೆ ವಸ್ತುಸ್ಥಿತಿಯನ್ನು ನಿವೇದಿಸಿ ಹೇಳುತ್ತಾನೆ. ''ಅತ್ತಿಗೆ, ಅಣ್ಣನ ವ್ಯಕ್ತಿತ್ವದ ಮುಂದೆ ನಮ್ಮ ವಿವೇಕ ಬುದ್ಧಿ ಎಲ್ಲವನ್ನೂ ಶರಣೆನ್ನುತ್ತೇವೆ. **ತಾಯೀ, ನಿನ್ನನ್ನೂ ಪ್ರಜೆ ಎಂದು ಆತ ಭಾವಿಸಿದ್ದರೆ, ನಿನಗೆ ಈ ಘೋರ ಶಿಕ್ಷೆ ತಪ್ಪುತ್ತಿತ್ತೇನೋ. ನಿನ್ನನ್ನು ಅಣ್ಣ, ಅರ್ಧಭಾಗವೆಂದೇ ಭಾವಿಸಿ ಶಿಕ್ಷೆ ವಿಧಿಸಿದ.** ಅಣ್ಣನ ಆಜ್ಞೆ ಪಾಲಿಸಲು ನನ್ನ ಭಾವನೆಗಳನ್ನೆಲ್ಲ ಕತ್ತು ಹಿಸುಕಿ ನನಗೆ ರಾಕ್ಷಸನಾಗಬೇಕಾಗಿ ಬಂತು. ತಾಯೀ, ಏನು ಮಾಡಲಿ ಹೇಳು? ಅತ್ತಿಗೇऽ, ನಾನು ಪಾಪಿ, ಕ್ರೂರ'' ಎಂದು ದುಃಖಿಸಿದ. ಆಗ ಸೀತಾದೇವಿಯ ಅವಸ್ಥೆ ಏನು ಹೇಳುವದು? ಅವಳ ದುಖಃಕ್ಕೆ ವಿಶ್ವ ಹಿಡಿಸಲಿಲ್ಲ, ಚಿಕ್ಕದಾಯಿತು.

## ಅಧ್ಯಾಯ -೫೫

## ''ಲಕ್ಷ್ಮಣಾ ನಾನೆಲ್ಲಿ ಹೋಗಲೋ ಇನ್ನು ?'' (ಸೀತಾದೇವಿ)

''ಲಕ್ಷ್ಮಣಾ, ನಾನೆಲ್ಲಿ ಹೋಗಲೋ? ಪತಿಚರಣ ಕಾಣುವದು ಇನ್ನೆಲ್ಲಿ?'' ಎಂದು ಗೋಳಿಟ್ಟಳು.''ನನ್ನ ದುರ್ದೈವಿದು, ವಿಧಿ ವಿಲಾಸ, **ಯಾರೇನು ಮಾಡಬಲ್ಲರು ? ಕರುಣೆಯೇ ಕಠೋರವಾಯಿತಿಂದು, ಕತ್ತಲೆಯೇ ಪ್ರಕಾಶವನ್ನು ನುಂಗಿತು.**

**ವರುಣನನ್ನು ಪಾವಕ ಗೆದ್ದ. ಶಾಶ್ವತದ ಮೂಲವೇ ಕತ್ತರಿಸಿದಂತೆ ಆಯಿತಿಂದು. ಆಗಬಾರದೆಲ್ಲ ಆಯಿತು. ಲಕ್ಷ್ಮಣಾ, ವ್ಯರ್ಥ ನನ್ನ ಜನ್ಮ. ಜನನೀ ಜನಕರನ್ನು ವ್ಯರ್ಥ ದಣಿಸಿದೆ.** ಕನ್ಯೆಯಂತೂ ಅಲ್ಲವೇ ಅಲ್ಲ. ಜಗನ್ನಾಥನ ಅನಾಥ ಪತ್ನಿ, ಭೂನಾಥನ ನಿರ್ಭಾಗ್ಯ ಸತಿ. ಇತ್ತ ಯಾರ ಪತ್ನಿಯೂ ಆಗಿ ಉಳಿಯಲಿಲ್ಲ . ಕಂಚು ಕನಕವನ್ನು ಕಡೆಗಣಿಸಿತು. ಸಿದ್ಧಿಯೇ ಇಂದು ತಪಸ್ಸಿಗೆ ಬೇಸತ್ತಿತು. **ಅಗ್ನಿದೇವ ಅಸತ್ಯವನ್ನು ನುಡಿಯುವವ ಎಂದಾಯಿತು. ಭಕ್ತನು ದೇವನಿಗೆ ನಾಸ್ತಿಕನೆಂದು ಬಗೆದ. ಪತಿವ್ರತೆ ಏನೋ ಹೌದು ಆದರೆ ಪರಿತ್ಯಕ್ತೆ.**

ಏನು ಮಾಡಲಿ ಲಕ್ಷ್ಮಣಾ, ನಾನೆಲ್ಲಿ ಹೋಗಲಿನ್ನು ? ಪ್ರಾಣ ತನುವಿನಿಂದ ಹೊರಗೆ ಹಾಕಲು ಹವಣಿಸುತ್ತಿದೆ. ಅಂದ ಮೇಲೆ ಅವಯುವಗಳು ದೇಹಭಾರ ಹೊರಬಲ್ಲವೇ? **ಲಕ್ಷ್ಮಣಾ, ನಿನ್ನ ಅತ್ತಿಗೆಯ ಜೀವ ಮುಗಿಯಿತಿನ್ನು. ಮುಗಿದಳು ಸೀತೆ. ಮಾತೆಯಾಗಲು ಪುನಃ ಇಂದೇ ಜನ್ಮಿಸಿ ಬಂದಿರುವೆ.** ನನ್ನ ಉದರದಲ್ಲಿದ್ದ ರಘುಕುಲ ದೀಪಕರಿಗಾಗಿ ಜೀವಿಸುವೆ. ಈ ಪುಷ್ಪಗಳಾದರೂ ಅರಳಿ, ರಘುಕುಲದ ಕೀರ್ತಿಸುಗಂಧವನ್ನು ಬೀರಲಿ ಎಂದಿಷ್ಟೇ ಬಯಕೆ ನನ್ನದು. ಜಾನಕಿ ಇಂದು ಜನತೆಯ ಹೊರತಾದಳು. ಆದರೂ ಜನ ವಸತಿ ಇಲ್ಲದ ಈ ವನದಲ್ಲಿ ವಾಸಿಸಿ, ರಘುಕುಲ ವಂಶವನ್ನು ನನ್ನ ಕೈಯಿಂದ ಬೆಳೆಸುವೆನು. ಅಯೋಧ್ಯೆಯಲ್ಲಿ ಆ ನನ್ನ ರಘುವರ ಸುಖದಿಂದ ರಾಜ್ಯವಾಳಲಿ.

ಮೈದುನಾ ऽऽ ಲಕ್ಷ್ಮಣಾ ऽऽ ನಿನ್ನ ಅಣ್ಣನ ಅಪ್ಪಣೆಯಂತೆ ನನ್ನನ್ನು ಈ ವನದಲ್ಲಿ ತಂದು ಬಿಟ್ಟು ನಿನ್ನ ಕರ್ತವ್ಯ ನೀನು ಮಾಡಿದಂತೆ ಆಯಿತಲ್ಲವೇ? **ರಾऽಘऽವಾ, ಜಾऽನऽಕಿऽಯ ಪऽತಿऽಯುऽಲ್ಲ ನೀನು, ಕೇವಲ ನೃಪತಿ.** ನನ್ನ ಸ್ವರವೇ ನನ್ನನ್ನು ಕೊರೆಯುಹತ್ತಿದೆ. ಮುಂದೆ ನುಡಿಯಲು ನಾऽಲಿऽಗೆ ಎತ್ತಲೊಲ್ಲದು. ಲಕ್ಷ್ಮಣಾऽऽ ಮರಳಿನ್ನು ನಗರಕ್ಕೆ. ಇಲ್ಲಿಂದಲೇ ನಾನು ಮಾತೆಯನ್ನು ವಂದಿಸುವೆ. ರಘುನಾಥನಿಗೂ ನನ್ನ ಪ್ರಣಾಮಗಳು. ಇದೋ ऽऽ ಮೈದುನಾऽऽ ನಿನ್ನನ್ನು ಆಶೀರ್ವದಿಸುವೆನು. ಮುಂದೆ ಮಾऽತಾऽಡऽಬऽರ ऽಲೊऽಲ್ಲऽದು ನऽನऽಗೆ'' ಎಂದು ಸೀತಾದೇವಿ ನಿಂತಲ್ಲಿಯೇ ಕುಸಿದಳು ನೆಲಕ್ಕೆ. ಲಕ್ಷ್ಮಣ ಅವಳನ್ನು ನೋಡಲಾಗದೇ, ಉತ್ತರಿಸಲಾಗದೇ, ಅಯೋಧ್ಯೆಗೆ ಮರಳಿದನು.

ಹೀಗೆ ಲಕ್ಷ್ಮಣ ಉತ್ತರ ಕೊಡಲು ಬಾರದಂತಹ ಜಾನಕಿಯ ಪ್ರಶ್ನೆಗಳೊಂದಿಗೆ ಅವಳನ್ನು ಗಂಗಾನದಿಯ ಆಚೆಗಿರುವ ವಾಲ್ಮೀಕಿ ಮಹರ್ಷಿಗಳ ಆಶ್ರಮದ ಹತ್ತಿರ ಬಿಟ್ಟು

ಬಹು ಕಷ್ಟದಿಂದ ಅಯೋಧ್ಯೆಗೆ ಮರಳಿದನು. ಇತ್ತ ಶ್ರೀರಾಮಚಂದ್ರ ತನ್ನ ರಾಜ್ಯಕಾರಭಾರದಲ್ಲಿ ಮಗ್ನನಾಗಿಬಿಟ್ಟ.

ಇತ್ತ ವನದಲ್ಲಿ ಸೀತಾದೇವಿ ಮಹಾತ್ಮಾ ವಾಲ್ಮೀಕಿ ಮಹರ್ಷಿಗಳ ಸ್ವಾಧೀನಳಾದಳು. ಅವರು ಅವಳನ್ನು ತಮ್ಮ ಮಗಳೆಂದೇ ಭಾವಿಸಿ ತುಂಬಾ ಅಂತಃಕರುಣದಿಂದ ಪಾಲನೆ ಪೋಷಣೆ ಮಾಡಿದರು. ಯಥಾಕಾಲಕ್ಕೆ ಅವಳು, ಅವಳಿ ಜವಳಿ ಗಂಡು ಮಕ್ಕಳನ್ನು ಹೆತ್ತಳು. ಶ್ರೀರಾಮನಂದರಿಗೆ ಭೂತ ಪಿಶಾಚಿಗಳ ಬಾಧೆ ಆಗಬಾರದೆಂದು ವಾಲ್ಮೀಕಿ ಮಹರ್ಷಿಗಳು ಅಭಿಮಂತ್ರಿಸಿ ಕುಶ- ಲವಗಳನ್ನು ತಿರುಗಿಸಿದರು. ಮತ್ತು ಕೂಸುಗಳಿಗೆ **ಕುಶ - ಲವ** ರೆಂದೇ ನಾಮಕರಣ ಮಾಡಿದರು. ವಾಲ್ಮೀಕಿ ಮಹರ್ಷಿಗಳ ಮೇಲ್ವಿಚಾರಣೆಯಲ್ಲಿ ಈ ಬಾಲಕರಿಬ್ಬರೂ ಬೆಳೆದು ದೊಡ್ಡವರಾದರು. ಬಾಲ್ಯವಸ್ಥೆ ಮುಗಿದು ಅವರಿಗೆ ಅರಿವು ಮೂಡಿತು. ಆಗ ಬಾಲಕರಿಬ್ಬರಿಗೂ ಹನ್ನೆರಡು ವರುಷಗಳು ಆದವು. ಮಹರ್ಷಿಗಳು ಅವರಿಗೆ ರಾಮಾಯಣ ಹಾಡಲು ಕಲಿಸಿದರು.

## ಅಧ್ಯಾಯ - ೫೬

## ''ಅಯೋಧ್ಯೆಗೆ ಹೋಗಿ ರಾಮಾಯಣ ಹಾಡಿರಿ'' (ವಾಲ್ಮೀಕಿ)

ಇತ್ತ ಅಯೋಧ್ಯೆಪತಿ ಶ್ರೀರಾಮಚಂದ್ರ ತನ್ನ ಕರ್ತವ್ಯ ಬುದ್ಧಿಯಿಂದ ಅಯೋಧ್ಯೆಯ ರಾಜ್ಯವನ್ನು ಯಥೋಚಿತವಾಗಿ ನಡೆಸುತ್ತಿದ್ದ. ಅವನು ಸರ್ವಶ್ರೇಷ್ಠವಾದ ರಾಜಸೂಯ ಯಜ್ಞವನ್ನು ಹೂಡಿದ. ಈ ಸಮಾರಂಭಕ್ಕಾಗಿ ಬಹುಜನ ರಾಜರುಗಳು ಋಷಿಮುನಿಗಳು ಅಯೋಧ್ಯೆಗೆ ಆಗಮಿಸಿದರು. ಮಹಾತ್ಮಾ ವಾಲ್ಮೀಕಿ ಮಹರ್ಷಿಗಳೂ ತಮ್ಮ ಶಿಷ್ಯರಾದ **ಕುಶ - ಲವ** ರಿಗೆ ರಘುರಾಜನ ನಗರಕ್ಕೆ ಹೋಗಿ ಮಹಾನ್ ಯಜ್ಞ ಸಮಾರಂಭಕ್ಕೆಸೇರಿದ, ಮಹಾನ್ ಜನಸ್ತೋಮದೆದುರು ಶ್ರೀರಾಮಯಣವನ್ನು ಯಾವ ರೀತಿಯಾಗಿ ಹಾಡಬೇಕು, ಅಲ್ಲಿ ಯಾವ ರೀತಿ ವರ್ತಿಸಬೇಕು, ಎಂಬುದನ್ನು ಈ ಮೊದಲೇ ಹೇಳಿದ್ದರಾದರೂ ಹೊರಡುವ ಮುನ್ನ ಕುಶ- ಲವ ರನ್ನುದ್ದೇಶಿ ಅದನ್ನೇ ಪುನರುಚ್ಚಿಸಿದರು. ''ಕುವರರೇ, ಅಯೋಧ್ಯಾ ನಗರಕ್ಕೆ ಹೋಗಿ, ಮುನಿಜನ ಪುನೀತ ಸದನಗಳಿಂದ, ನರಾಧಿಪರ ನಿವಾಸಗಳಿಂದ, ಉಪಮಾರ್ಗ ರಾಜ್ಯಮಾರ್ಗಗಳಿಂದ, ಹೀಗೆ ಎಲ್ಲಕಡೆಗಳಿಂದ ನಿಮ್ಮ ಗಾಯನ ಮುಕ್ತವಾಗಿ ಎಲ್ಲರಿಗೂ ಕೇಳಿಸುವಂತಾಗಲಿ. ರಸಭರಿತ ಕಂದಮೂಲಗಳನ್ನು ಮಾತ್ರ ಸೇವಿಸಿರಿ. ಅವುಗಳ ರಸಾಸ್ವಾದವೇ ನಿಮ್ಮಗಳ ಸ್ವರದಲ್ಲಿ ತುಂಬಿಕೊಳ್ಳಿರಿ. ಲಯ ತಾಳಗಳ ಬಂಧನವನ್ನಿರಿಸಿಕೊಂಡು, ಸ್ವರ ಮೇಳವನ್ನು ತಪ್ಪದೇ ಸಾಧಿಸಿರಿ. -ಕುವರರೇ,

ಮುಂದೇನಾಗುವುದು ಗೊತ್ತೇ ನಿಮಗೆ? ಈ ರೀತಿಯಾಗಿ ನೀವು ಅನೇಕ ಸದನಗಳಲ್ಲಿ ಹಾಡ ಹತ್ತಿದಾಗ ನಿಮಗೆ ಲೋಕ ಮಾನ್ಯತೆ ದೊರೆಯುವುದು. ಇಬ್ಬರು ಕುಮಾರರು ನಗರಕ್ಕೆ ಬಂದಿದ್ದು **ಅವರು, ಶ್ರೀರಾಮಾಯಣವನ್ನು ಬಲು ಇಂಪಾಗಿ ಹಾಡುವರು** ಎಂಬ ವಾರ್ತೆ ಶ್ರೀರಘುನಾಥನಿಗೂ ಮುಟ್ಟುವುದು. ಆಗ ಅವನೂ ನಿಮ್ಮ ಗಾಯನ ಕೇಳಬೇಕೆಂದು ಉತ್ಸುಕನಾಗಿ, ನಿಮಗೆ ಆಮಂತ್ರಣ ಕೊಟ್ಟು, ನಿಮ್ಮನ್ನು ಬರಮಾಡಿ ಕೊಳ್ಳುವನು. ಬಹುದೊಡ್ಡ ಜನ-ಸ್ತೋಮವನ್ನು ನೀವು ಅಲ್ಲಿ ಕಾಣುವಿರಿ. ಆಗ ನೀವು ಸರ್ಗ ಕ್ರಮಗಳನ್ನು ಸರಿಯಾಗಿ ಹೇಳಿಕೊಟ್ಟದ್ದನ್ನು ಧ್ಯಾನದಲ್ಲಿ ತಂದುಕೊಂಡು ಹಾಡಿರಿ. ಸನ್ನಿವೇಶದ ಭಾವವು, ನಿಮ್ಮ ಗಾಯನದಲ್ಲಿ ಸರಿಯಾಗಿ ಮೂಡಿಬರಲಿ. ದಿನದಿನ ತುಸು ತುಸು ಹಾಡುತ್ತ ಶ್ರೀರಾಮಯಣದ ಪೂರ್ಣ ಚಿತ್ರವು, ಶ್ರೋತೃಗಳ ಕಣ್ಮುಂದೆ ಕಟ್ಟುವಂತೆ ಹಾಡಿರಿ.

ಕುವರರೇ, ಇನ್ನೊಂದು ಮಾತು ಕೇಳಿರಿಲ್ಲಿ. ನಿಮ್ಮಗಳ ಹೆಸರು, ಊರು, ಇತ್ಯಾದಿಗಳನ್ನು ಎಲ್ಲಿಯೂ ಯಾರ ಮುಂದೆಯೂ ಉಸಿರಬೇಡಿರಿ. ''ನಾವು **ವಾಲ್ಮೀಕಿ ಮುನಿಗಳ ಶಿಷ್ಯರು''** ಎಂದಿಷ್ಟೇ ಹೇಳಿರಿ. ಸ್ವರದಲ್ಲಿ ಹಾಸ್ಯ ಮತ್ತು ಸವಿ ಎರಡೂ ಬೆರೆಯಲಿ. ಯೋಗ್ಯವಾದುದನ್ನಷ್ಟೇ ಮಾತಾಡಿರಿ. ''ಶತ್ರುಜಯನಾದ '' ರಘುರಾಯನ ಮುಂದೆ ಹಾಡುತ್ತಿರುವಾಗ, ಅಭಿನಯ ಮುಖಮುದ್ರೆಗಳಲ್ಲಿ ಸಂಯಮವಿರಲಿ. **ಕಾವ್ಯವಲ್ಲವಿದು. ಅಮೃತ ಸಂಚಯವೇ ಇದು** ಎಂದು ಭಾವಿಸಿ ಆತ ನಿಮ್ಮನ್ನು ತುಂಬಾ ಆದರಿಸುವನು.

**ಬಾಲಕರೇ ಕೊನೆಯದಾಗಿ ಇನ್ನೊಂದು ಮಾತು, ತಪ್ಪಿ ಕೂಡಾ ಧನಕಾಂಚನಗಳನ್ನು ಸ್ವೀಕರಿಸಬೇಡಿರಿ. ದಾನ ಬೇಡ, ದಕ್ಷಿಣೆ ಬೇಡ. ನಾವು ಮುನಿಜನಗಳು, ನಮಗೇಕೆ ಧನ ಕಾಂಚನಗಳ ಆಶೆ? ಆದರೆ, ಒಂದೇ ಒಂದು ಆಶೆ ನಮ್ಮದೆಂದರೆ, ಎಲ್ಲವನ್ನೂ ಶ್ರೀರಾಮನಿಗೆ ಅರ್ಪಿಸಬೇಕೆಂಬುದು ಮಾತ್ರ, ಅನ್ಯಥಾ ಬೇರೆ ಆಶೆಯೇ ನಮಗಿಲ್ಲ. ಎಲ್ಲ ಶ್ರೀರಾಮಾರ್ಪಣ, ಶ್ರೀರಾಮಾರ್ಪಣಮಸ್ತು''**ಎಂದು ಉಪದೇಶಿಸಿ ಕುವರರನ್ನು ಆಶೀರ್ವದಿಸಿ ಅವರನ್ನು ಅಯೋಧ್ಯೆಗೆ ಬೀಳ್ಕೊಟ್ಟರು ಎಂದು, ಇಲ್ಲಿಗೆ ಗೀತ ರಾಮಾಯಣದ ೫೬ನೆಯ ಅಧ್ಯಾಯದೊಂದಿಗೆ **ಶ್ರೀರಾಮಾಯಣ ನಿತ್ಯ ಚಿಂತನ** ಸಪ್ತಾಹದ ೭ನೆಯ ದಿನ ಮುಗಿದುದು.

## ರಾಮರಕ್ಷಾ ಭಾಗ

ಲೋಕಾಭಿರಾಮಂ ರಣರಂಗಧೀರಂ।
ರಾಜೀವನೇತ್ರಂ ರಘುವಂಶ ನಾಥಂ ।
ಕಾರುಣ್ಯ ರೂಪಂ ಕರುಣಾಕರಂತಂ ।
ಶ್ರೀರಾಮಚಂದ್ರಂ ಶರಣಂ ಪ್ರಪದ್ಯೇ ॥ ೩೩॥

ಮನೋಜವಂ ಮಾರುತತುಲ್ಯವೇಗಂ ।
ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಂ।
ವಾತಾತ್ಮಜಂ ವಾನರಯೂಥ ಮುಖ್ಯಂ ।
ಶ್ರೀರಾಮ ದೂತಂ ಶರಣಂ ಪ್ರಪದ್ಯೇ ॥ ೩೪॥

ಕೂಜಂತಂ ರಾಮ ರಾಮೇತಿ ಮಧುರಂ ಮಧುರಾಕ್ಷರಂ ।
ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಿಕೋಕಿಲಂ ॥ ೩೫॥

ಆಪದಾಮುಪಹರ್ತಾರಂ ದಾತರಂ ಸರ್ವಸಂಪದಾಂ
ಲೋಕಾಭಿರಾಮಂ ಶ್ರೀರಾಮಂ ಭೂಯೋ ಭೂಯೋ ನಮಾಮ್ಯಹಂ॥

ಭರ್ಜನಂ ಭವಬೀಜಾನಾಂ ಅರ್ಜನಂ ಸುಖ ಸಂಪದಾಂ ।
ತರ್ಜನಂ ಯಮದೂತಾನಾಂ ರಾಮ ರಾಮೇತಿ ಗರ್ಜನಂ ॥

ರಾಮೋ ರಾಜಮಣಿ ಸದಾ ವಿಜಯತೇ
ರಾಮಂ ರಮೇಶಂ ಭಜೇ
ರಾಮೇಣಾಭಿಹತಾ ನಿಶಾಚರಚಮೂ
ರಾಮಾಯ ತಸ್ಮೈನಮಃ

ರಾಮನ್ನಾಸ್ತಿಪರಾಯಣಂ ಪರತರಂ ।
ರಾಮಸ್ಯ ದಾಸೋಽಸ್ಮ್ಯಹಂ।
ರಾಮೇ ಚಿತ್ತಲಯಃ ಸದಾ ಭವತುಮೇ।
ಭೋ ರಾಮ ಮಾಮುದ್ಧರ ॥

ರಾಮ ರಾಮೇತಿ ರಾಮೇತಿ। ರಮೇ ರಾಮೇ ಮನೋರಮೇ।
ಸಹಸ್ರನಾಮ ತತ್ತುಲ್ಯಂ। ರಾಮ ನಾಮ ವರಾನನೇ।

ಇತಿ ಶ್ರೀ ಬುದ್ಧ ಕೌಶಿಕ ಋಷಿವಿರಚಿತಂ
ಶ್ರೀರಾಮರಕ್ಷಾ ಸ್ತೋತ್ರಂ ಸಂಪೂರ್ಣಂ
ಶ್ರೀ ಸೀತಾರಾಮ ಚಂದ್ರಾರ್ಪಣ ಮಸ್ತು

**ಜಾನಕೀ ಜೀವನ ಸ್ಮರಣ ಜಯ ಜಯ ರಾಮ**
**ಶ್ರೀರಾಮ ಜಯರಾಮ ಜಯ ಜಯ ರಾಮ (೧೦ ಸಾರೆ)**

**''ಜಯ ಜಯ ರಘುವೀರ ಸಮರ್ಥ''**

ಜೈ ಹನುಮಾನ್



# ವರದ ಹನುಮತ್ ಸ್ತೋತ್ರ

ಇದು ''ಶ್ರೀಹನುಮಾನ ಚಾಲೀಸದ'' ಕನ್ನಡ ಭಾವನುವಾದವು ಹನುಮಾನ್ ಚಾಲೀಸ ''ಈ ಸ್ತೋತ್ರವು ಪ್ರಾತಃ ಸ್ಮರಣೀಯ ಶ್ರೀತುಲಸಿದಾಸರ **''ಶ್ರೀರಾಮಚರಿತ ಮಾನಸ''**ದ ಒಂದು ಭಾಗ. ಉತ್ತರ ಹಿಂದುಸ್ತಾನದ ಬಹು ಜನರು ತುಂಬಾ ಭಕ್ತಿಯಿಂದ ಈ ಸ್ತೋತ್ರದ ನಿತ್ಯ ಪಾರಾಯಣ ಮಾಡುವರು. ಶ್ರೀ ರಂ. ರಾ. ನಿಡಗುಂದಿ, ಮು. ಕುಕನೂರ ಇವರು ಕನ್ನಡದಲ್ಲಿ ಇದರ ಭಾವಾನುವಾದ ಮಾಡಿ ಕನ್ನಡಿಗರಿಗೆ, ತುಂಬಾ ಉಪಕಾರ ಮಾಡಿರುವರು. ಅವರಿಗೆ ನಾವು ಋಣಿ. ಅವರ ಒಪ್ಪಿಗೆ ಪಡೆದುಕೊಂಡು ನಮ್ಮ ಈ **ಶ್ರೀರಾಮಾಯಣ ನಿತ್ಯ ಚಿಂತನ**ದ ಓದುಗರಿಗಾಗಿ ಇದನ್ನು ಇಲ್ಲಿ ಪ್ರಕಟಿಸಲಾಗಿದೆ.

ಉದ್ಭವ ಸ್ಥಿತಿ ಸಂಹಾರಕಾರಿಣೇಂ ಕ್ಲೇಶ ಹಾರಿಣಿಂ
ಸರ್ವ ಶ್ರೇಯಸ್ಕರೀಂ ಸೀತಾಂ ನತೋಹಂ ರಾಮವಲ್ಲಭಾಂ ॥

ನನ್ನ ಮನದ ಮುಕರದಲ್ಲಿ ಹೊಳೆಯಲ್ಪೈ, ನಿನ್ನ ಪಾದಗುರುವೇ
ರಾಮ ಮಹಿಮೆಯನ್ನು ಮುದದಿ ಕೀರ್ತಿಪೆನು, ಭಕ್ತಕಾಮ ತರುವೇ ॥

ಬುದ್ಧಿಹೀನ ನಾ ನಿನ್ನ ನೆನೆಯುವೆನು, ಪವನ ಕುವರ ಧೀರಾ
ಬುದ್ಧಿ ಬಲಗಳನ್ನು ಕೊಟ್ಟು ಸಲಹು ಘನ, ಕ್ಲೇಶ ಕಳೆಯೋ ವೀರಾ ॥

ಜ್ಞಾನದಾಗರನೆ ಗುಣದ ಸಾಗರನೆ, ಹನುಮ ನಿನಗೆ ಜಯವು
ಜಯ ಕಪೀತ ಹೇ ತ್ರಿಜಗಕಾಶ ಹೇ, ರಾಮದಾಸ ಜಯವು ॥೧॥

ಮಹಾವೀರ ನೀ, ಬಲು ಉದಾರ ನೀ, ವಜ್ರ ನಿನ್ನ ಅಂಗಾ
ಕುಮತಿ ಭಂಗ ನೀ, ಸುಮತಿ ರಂಗ ನೀ, ಸುಜನ ಭಕ್ತ ಸಂಗ ||೨||

ರಾಮದೂತ ನೀ ಪುಣ್ಯ ಪೂತನೀ, ಅತುಲ ಬಲದ ಧಾಮ
ಆಂಜನೆಯ ನೀ, ವಾಯುಪುತ್ರ ನೀ, ಪಾಪಹರ ಸುನಾಮ ||೩||

ಸ್ವರ್ಣ ವರ್ಣದಿಂ, ನೀನು ಶೋಭಿಸುವೆ, ಚೆನ್ನ ನಿನ್ನ ವೇಗ
ಕರ್ಣ ಕುಂಡಲವು, ಚಂದ್ರ ಮಂಡಲವು, ರಾಮನಾಮ ಘೋಷ ||೪||

ವಜ್ರಹಸ್ತದೊಳು, ಧ್ವಜವು ಮೆರೆಯುತಿದೆ, ನೋಡು ಎಂಥ ಚಂದ
ಜನ್ನದಾರವದು, ಘನ್ನ ಶೋಭಿಪುದು, ಹೆಗಲ ಗಿರಿಯ ಅಂದ ||೫||

ಗೌರಿಶಂಕರನ, ಮನ ಸುಖಂಕರನೆ, ವೀರ ಅನಿಲ ಪುತ್ರ
ತೇಜ ವಿಕ್ರಮನೇ, ಪ್ರತಿ ತ್ರಿವಿಕ್ರಮನೆ, ತ್ರಿಜಗ ವಂದ್ಯ ಮಿತ್ರ ||೬||

ವಿದ್ಯಗಣಿಯು ನೀ, ವಿನಯಗುಣಿಯು ನೀ, ನೀನು ಚತುರಮಣಿಯು
ರಾಮಕಾರ್ಯವನು, ಸತತ-ಗೈಯುವೆಯೊ, ರಾಮನಾಮ ದಣಿಯು ||೭||

ರಾಮ ಚರಿತೆ-ಸುಧೆ, ಸತತ-ಸೇವಿಸುವೆ, ನೀನು ರಾಮಕೀರ್ತಿ
ನಿನ್ನ ಹೃದಯದೊಳು, ಹೊಳೆಯುತಿರವುದೈ, ಸೀತಾರಾಮ ಮೂರ್ತಿ ||೮||

ಸೂಕ್ಷ್ಮರೂಪದೊಳು, ಕ್ರೂರಲಂಕೆಯೊಳು, ಸೀತೆಯನ್ನು ಕಂಡೆ
ಲಂಕೆಯನ್ನು, ನಿಃಶಂಕೆಯಿಂದ ನೀ, ಸುಟ್ಟು ಜಯವ ಕೊಂಡೆ ||೯||

ಸಿಂಹವಾಣಿಯಲಿ, ಭೀಮರೂಪದಲಿ, ಅಸುರರನ್ನು ಕೊಂದೆ
ರಾಮಕಾರ್ಯವನು, ಕೀರ್ತಿತೂರ್ಯವನು, ಜಗದಿ ಮೆರೆಸಿ ಬಂದೆ ||೧೦||

ಪ್ರಾಣ ಪರ್ವತವ, ತಂದು ಲಕ್ಷ್ಮಣನ, ಮರಣವನ್ನು ತಡೆದೆ,
ರಾಮ ರಾಘವಗೆ, ಮೋದಗೈದು ನೀ, ದಿವ್ಯಕೃಪೆಯ ಪಡೆದೆ ॥೧೧॥

ಪ್ರಭುವು ಹೊಗಳಿದನು, ಮುಕ್ತ ಕಂಠದಿಂ, ಹೃದಯ ಹಿಡಿಸಲಿಲ್ಲ
ನೀನು ನನ್ನ ಪ್ರಿಯ, ತಮ್ಮ ಭರತ ಸುಮ ಇದಕೆ ಶಂಕೆಯಿಲ್ಲ ॥೧೨॥

ಸನಕ ಪ್ರಭೃತಿಗಳು, ಬ್ರಹ್ಮ ಪ್ರಭೃತಿಗಳು, ಮುನಿ ಮುನೀಶರೆಲ್ಲ
ನಾರದಾದಿ, ಸುವಿಶಾರದರು ಸಹ, ಅಹಿ ಅಹೀಶರೆಲ್ಲ ॥೧೩॥

ಯಮಕುಬೇರ, ದಿಕ್ಪಾಲರಾದಿಗಳು, ಇದನು ಗೈಯಬಹುದೇ?
ಕವಿಗಳಂಥ ಕೋ,ವಿದರು ಸಹಿತಸಲೆ, ಮೆಚ್ಚಿ ಹೊಗಳಬಹುದೇ? ॥೧೪॥

**ನಿನ್ನ ಸಾಹಸವ, ಆದಿಶೇಷನೇ, ಹೊಗಳಬೇಕು ಮಿತ್ರಾ**
**ಎಂದು ಅಪ್ಪಿದನು, ರಾಮ ಹೊಗಳಿದನು ಧ್ಯನನೀ ಪವಿತ್ರ ॥೧೫॥**

ಕಪಿಕುಲೇಶ, ಸುಗ್ರೀವ ಕಪಿವರೆಗೆ, ನೀ ಸಹಾಯಗೈದೆ
ರಾಮ ಸಖ್ಯವನು, ರಾಜ್ಯ ಸೌಖ್ಯವನ್ನು, ಅವನಿಗಾಗಿಗೈದೆ ॥೧೬॥

ವರ ವಿಭೀಷಣನು, ನಿನ್ನ ಮಂತ್ರವನ್ನು, ಬಿಡದೆ ಒಪ್ಪಿಕೊಂಡ
ಒಪ್ಪಿಕೊಂಡೊಡನೆ, ಲಂಕೆಯೊಡೆತನದ, ಭಾಗ್ಯ ಪಡೆದುಕೊಂಡ ॥೧೭॥

ಸಾವಿರಾರು ಯೋ,ಜನೆಯ ದೂರದಲಿ, ಹೊಳೆವ ಬಿಂಬಭಾನು
ಹಣ್ಣುಯೆಂದು, ತಿನ್ನಲ್ಕೆ ಹಾರಿದೆಯೋ, ಬಾಲ ಹನುಮ ನೀನು ॥೧೮॥

ರಾಮ ಮುದ್ರಿಕೆಯ, ಮುಖದ ಸಂಪುಟದಿ, ಭದ್ರವಾಗಿ ಇಟ್ಟು
ಒತ್ತಿ ಶರಧಿಯನ್ನು, ಕಿತ್ತಿ ಹಾರಿದಿಯೋ, ನೀನು ಭಯವಬಿಟ್ಟು ॥೧೯॥

ಕಷ್ಟ ಕಾರ್ಯಗಳು, ಎಷ್ಟು ಇದ್ದರೂ, ನಷ್ಟವೇನು ನರಗೆ?
ಪುಷ್ಟವಾದ ಘನ,ಕೃಪೆಯು ನಿನ್ನದಿರೆ, ಶಿಷ್ಟ ಭಕುತವರೆಗೆ ||೨೦||

ರಾಮಮಂದಿರದ, ಭವ್ಯ ದ್ವಾರದೊಳು, ನೀನೆ ದ್ವಾರಪಾಲಾ
ನಿನ್ನ ಆಜ್ಞೆಯಿ,ಲ್ಲದಲೆ ಬಾರನೈ , ಇರಲಿ ಅವನು ಕಾಲಾ ||೨೧||

ನಿನಗೆ ಶರಣು ಬಂದ,ವನು ಹೊಂದುವನು, ಸುಖಗಳೆಲ್ಲವನ್ನು
ಭಯವು ಎಲ್ಲಿಹುದು,ನೀನು ರಕ್ಷಿಸಲು ನಿನ್ನ ಭಕುತರನ್ನು ||೨೨||

ನಿನ್ನ ತೇಜವದು,ನಿನ್ನದಲ್ಲದಲೆ ಬೇರೆಯವರಿಗೆಲ್ಲಿ?
ನಿನ್ನ ಹುಂಕೃತಿಗೆ, ಜಗವು ನಡುಗುವದು, ಬೇರೆ ಆಸರೆಲ್ಲಿ?
||೨೩||

ಭೂತ ಪ್ರೇತಗಳು, ಸೋತು ಸಾಯುವವು,ನಿನ್ನ ಬಳಿಗೆ ಬರಲು
''ಮಹಾವೀರ''ಎಂ,ದೆಂಬ ಹೆಸರು ಬರೆ,ಬಂತು ಅವಕೆ -ಉರಲು ||೨೪||

ಎಲ್ಲ ರೋಗಗಳು, ಇಲ್ಲವಾಗುವವು, ಜಗದ ಪೀಡೆ ಸಾಕು
ಎಲ್ಲಕಾಲದೊಳು, ಎಲ್ಲತಾಣದೊಳು, ನಿನ್ನ ನೆನೆಸಬೇಕು ||೨೫||

ಕಷ್ಟ ಸಂಕಟವ, ಹರಿಸಿ ಪೊರೆಯುವನು, ಹನುಮ-ರಾಮದಾಸ
ನಡೆಯ ನುಡಿಯೊಳಗೆ, ಮನದ ಗುಡಿಯೊಳಗೆ, ತುಂಬೆ ನಾಮಘೋಷ
||೨೬||

ರಾಮನೊಲಿಮೆ, ದಯೆ ಯಾರಿಗಿರುವದೋ ಅವರ ಕೆಲಸವೆಲ್ಲ
ನೀನೆ ಚಂದದಿಂ,ಗೈದು ಬಿಡುವೆಯೋ, ಇದಕೆ -ಶಂಕೆಯಿಲ್ಲ ||೨೭||

ದೇಹಿ ಎನುತ-ವರ,ಎನಿತೊ ಬಯಸುತಲಿ, ಪಾಹಿ ಎಂದು ಬರಲು
ಕೊಡುವೆ ಅಮರ ಫಲ, ನಿನ್ನ ಸನ್ನಿಧಿಗೆ, ನಮನ ಸುಮನ ತರಲು ||೨೮||

ನಾಲ್ಕು ಯುಗದೊಳಗೆ, ಹಬ್ಬಿ ತಬ್ಬಿಹುದು, ನಿನ್ನ ಪ್ರಭೆ ಪ್ರತಾಪ
ಸಿದ್ಧ ಬುದ್ಧ ಬಲು, ಸುಪ್ರಸಿದ್ಧ ಬಲು, ನಿನ್ನ ಕಥೆ ಕಲಾಪ ||೨೯||

ಅಷ್ಟ ಸಿದ್ಧಿ ವರ, ಶಿಷ್ಟ ನಿಧಿಗಳನು, ಸ್ಪಷ್ಟ ಕೊಡುವ ದಾತಾ
ಯಾರಮೇಲೆ ದಯೆ, ಸಿರಿಯ- ಗರೆಯುವಳೊ, ನಿರುತ-ತಾಯಿಸೀತಾ ||೩೦||

ರಾಮರಸವು ತವ, ಹೃದಯ ಕಲಶದಲಿ, ತುಳುಕುತಿಹುದು ತುಂಬಿ
ಎಂದಿಗೆಂದಿಗೂ, ನೀನೆ ಧನ್ಯನೈ, ರಾಮಪದವ ನಂಬಿ ||೩೧||

ಸತ್ಯ ಪಂಥರಿಗೆ, ಸಾಧುಸಂತರಿಗೆ, ನೀನೆ ತಾಯಿತಂದೆ
ನಿತ್ಯ ರಾಮಪ್ರಿಯ, ಕ್ರೂರ ಅಸುರ ಭಯ, ಕುಜನ ಕಾಲನೆಂದೆ ||೩೨||

ನಿನ್ನ ಭಜಿಸಿದರೆ, ರಾಮಲಭಿಸುವನು, ಹೆಚ್ಚಿಗೇನು ಬೇಕು?
ಜನುಮ ಜನುಮಗಳ, ಕುರುವ ಪಾಪಗಳ, ನಾಶವಷ್ಟೇ ಸಾಕು ||೩೩||

ರಾಮಭಕ್ತ ಜನ, ರಾಮಪುರಿಗೆ ಪೋಗುವರು ಬಾಳಕೊನೆಗೆ
ಮತ್ತೆ ಬರುತಿಹರು ರಾಮಭಕ್ತಿಗೆ ತುಂಬಿರುವ ಧನ್ಯ ಮನೆಗೆ ||೩೪||

ರಾಮನೊಬ್ಬನೆ, ಯಾರು ಬಜಿಸುವರೋ, ಮನದಿ ಶ್ರದ್ಧೆಯಿಟ್ಟು
ಹನುಮ ಸಲಹುವನು, ಅಂಥ ಭಕ್ತರನು, ಸರ್ವಸುಖವ ಕೊಟ್ಟು ||೩೫||

ಸುಟ್ಟು ಹೋಗವದು, ಗಟ್ಟಿಪಾಪವದು, ಉಳಿವುದೆಲ್ಲಿ ಪೀಡೆ?
ನಿನ್ನ ಸ್ಮರಿಸುವಗೆ, ಎಲ್ಲ ಸುಖವಿಹುದು ನಿನ್ನ ಮಹಿಮೆ ಹಾಡೆ ||೩೬||

ವಾಯುಪುತ್ರ ಜಯ, ಅಂಜನೇಯ, ಜಯ ಸರ್ವಶಕ್ತ ನಿನಗೆ
ಶರಣು ಬಂದಿಹೆನು, ದೇವ ಗುರುವಿನೊಲು, ಕೃಪೆಯ ತೋರು ನನಗೆ ||೩೭||

ಯಾರು ನೂರು ಸಲ, ಸ್ತೋತ್ರ ಪಠಿಸುವರೊ, ಭಕ್ತಿಯಿಂದ ಹಿಡಿದು
ಬಂಧ ಮುಕ್ತರಾ,ಗುವರು ಆಯುರಾ,ರೋಗ್ಯ ಭಾಗ್ಯ ಪಡೆದು ||೩೮||

ಯಾರು ಓದುವರೋ, ಮತ್ತೆ ಕೇಳುವರೋ, ಹನುಮಸ್ತೋತ್ರವಿದನು
ಸಿದ್ಧಿಪೊಂದುವರು ,ಬಿಡಿರಿ ಶಂಕೆಯನು, ಇದಕೆ ಸಾಕ್ಷಿ ಶಿವನು ||೩೯||

ತುಲಸಿದಾಸ ತಾ, ರಾಮದಾಸನ್ಯೆ, ರಾಮನಾಮ ವದನ
ನಿನ್ನ ವಾಸದಿಂ,ಹಿರಿದು ಶೋಭಿಸಲಿ, ನನ್ನ ಹೃದಯಸದನ ||೪೦||

**ಸೀತಾರಾಮ ಗುಣಗ್ರಾಮ ಪುಣ್ಯಾರಣ್ಯ ವಿಹಾರಿಣೌ**
**ವಂದೇ ವಿಶುದ್ಧ ವಿಜ್ಞಾನೌ ಕಪೀಶ್ವರೌ ಕವೀಶ್ವರೌ**
**ಇತಿ ವರದ ಹನುಮತ್ ಸ್ತೋತ್ರ ಸಂಪೂರ್ಣಂ**

**ಶ್ರೀಕೃಷ್ಣಾರ್ಪಣಮಸ್ತು**

# ಪ್ರಾರ್ಥನೆ

ಪ್ರಭೋ ಶ್ರೀರಾಮಚಂದ್ರಾ, ನಾವು ನಿಮ್ಮಲ್ಲಿ ಇಷ್ಟೇ ಬೇಡಿಕೊಳ್ಳುವೆವು.

೧) ಗುರುಹಿರಿಯರು, ದೇವರು, ಸತ್ಯ, ಧರ್ಮ, ಪರೋಪಕಾರ, ಮೊದಲಾದ ತತ್ವಗಳಲ್ಲಿ ನಮಗೆ ನಂಬಿಕೆ ಹುಟ್ಟುವಂತೆ ಅನುಗ್ರಹಿಸು. ಮತ್ತು ನೆಲ ಹಿಡಿದು ಬಿದ್ದ ನೀತಿ, ತನ್ನ ತಲೆಯನ್ನು ಮೇಲೆತ್ತುವಂತಾಗಲಿ.

೨) ನಮ್ಮಲ್ಲಿ ಬೇರೂರಿದ, ಸಂಕುಚಿತ, ಸ್ವಪ್ರತಿಷ್ಠೆ, ಸ್ವಾರ್ಥಗಳು ಸಂಪೂರ್ಣ ನಾಶವಾಗಿ, ನಮ್ಮ ಮನ ವಿಶಾಲವಾಗಲಿ. ಆತ್ಮಹಿತ, ಸಮಾಜಹಿತ, ರಾಷ್ಟ್ರಹಿತ, ಕಾರ್ಯಗಳು ನಮ್ಮಿಂದ ಅಖಂಡವಾಗಿ ನಡೆಯುವಂತಾಗಲಿ.

೩) ರಾಮಾಯಣದ ದಿವ್ಯ ಹಸ್ತವು, ನಮ್ಮನ್ನು ಮೇಲೆತ್ತಲಿ, ಮತ್ತು ಅದರ ಅಮರ ಸಂಗೀತವು, ನಮ್ಮ ಇಂದಿನ ಶುಷ್ಕ ಜೀವನದಲ್ಲಿ ಅಮೃತ ಸಂಚಾರವಾಗುವಂತೆ ಮಾಡಲಿ.

೪) ಲೋಕಹಿತ ಕಾರ್ಯಗಳನ್ನು ಕೈಗೆತ್ತಿಕೊಳ್ಳುವಂತೆ ರಾಮಾಯಣವು ನಮ್ಮನ್ನು ಪ್ರಚೋದಿಸಲಿ ಮತ್ತು ಅವುಗಳನ್ನು, ಯಶಸ್ವಿಯಾಗಿ ನಿರ್ವಹಿಸುವಂತೆ ನಮ್ಮಲ್ಲಿ ಹುದುಗಿರುವ ಆಂಜನೇಯ ಶಕ್ತಿಯು ನಮ್ಮನ್ನು ಹುರಿದುಂಬಿಸಲಿ.

೫) ಮಹಾಪ್ರತಾಪಿ ರಾಮಾಯಣವು ನಮ್ಮ ಬದುಕನ್ನು ಆಸುರೀ ಶಕ್ತಿಗಳ ಪಾಶದಿಂದ ಬಿಡುಗಡೆ ಮಾಡಿ, ನಮ್ಮನ್ನು ದೈವೀ ಶಕ್ತಿಗಳ ಕಡೆಗೆ ಕೊಂಡೊಯ್ಯಲಿ.

೬) ರಾಮಾಯಣವು ವ್ಯಕ್ತಿ-ವ್ಯಕ್ತಿಯಲ್ಲಿ ಶ್ರೀರಾಮ ಪಟ್ಟಾಭಿಷೇಕ ಮಾಡಿ, ಸದ್ಯಕ್ಕೆ ಇಂದಿನ ನಿತ್ಯ ಸ್ಥಿತಿಯಲ್ಲಿಯೇ ಅತೀತವಾಗಿರುವ, ''ರಾಮರಾಜ್ಯ''ವು ಬರುವಂತೆ ಮಾಡಲಿ, ಮತ್ತು ಈ ಭೂಮಿಯನ್ನೇ ವೈಕುಂಠವಾಗಿ ಪರಿವರ್ತಿಸುವ ದೇವತಾ ಕಾರ್ಯದಲ್ಲಿ ರಾಮಾಯಣವು ದಿವ್ಯ ಶಿಲ್ಪಿಯಾಗಲಿ.

೭) ದುಷ್ಟರ ದುಷ್ಟತನವು ಅಳಿದು ಅವರು ಸತ್ಕರ್ಮಗಳಲ್ಲಿ ರಮಿಸುವಂತಾಗಲಿ. ಪರಸ್ಪರರಲ್ಲಿ ಪ್ರೇಮಾದರಗಳು ಉಳಿಯಲಿ.

೮) ಪಾಪದ ಕತ್ತಲೆಯಳಿದು ಸ್ವಧರ್ಮರೂಪ ಸೂರ್ಯ ಉದಯಿಸಲಿ. ಸರ್ವರ ಇಚ್ಛೆಗಳೆಲ್ಲ ಪೂರ್ಣವಾಗಲಿ.

೯) ಸರ್ವರೂ ಸರ್ವರೀತಿಯಿಂದ ಸುಖಿಗಳಾಗಿ ಆದಿಪುರುಷ ಶ್ರೀರಾಮ ಪ್ರಭುವನ್ನು ಅಖಂಡವಾಗಿ ನೆನೆಯುವಂತಾಗಲಿ..... ಎಂದಿಷ್ಟೇ ನಾವು ಬೇಡಿಕೊಳ್ಳುವೆವು.

**ಜಯ ಜಯ ರಘುವೀರ ಸಮರ್ಥ**

**ಓಂ ಶಾಂತಿಃ ಶಾಂತಿಃ ಶಾಂತಿಃ**